# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಆಚಾರ್ಯ, ಶ್ರೀಹರಿ, ರಾಂಚಂದ್ರ ಕೊಪ್ಪಲು, ಜಿ. ಎಂ. ಬೊಮ್ನಳ್ಳಿ, ಎನ್. ಆರ್. ಬೊಮ್ನಳ್ಳಿ, ಬಿ. ವಿಲ್ಸನ್

ಮುಖಚಿತ್ರ : ಚಂದ್ರ ಕಿರೀಟ, ವರ್ಣಚಿತ್ರ : ಮಲ್ಲಿಕಾರ್ಜುನ ಡಿ. ಜಿ.

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ಎಲ್ಲ ಕ್ಷೇತ್ರಗಳಲ್ಲೂ ಸೀಮಿತ ಯಶಸ್ಸನ್ನು ಪಡೆಯುವ ಜನರಿಗೆ ಆಗಾಗ ಅಲ್ಪಸ್ವಲ್ಪ ಯಶಸ್ಸು ದೊರೆತರೆ ಹಿಗ್ಗಿ ಕೆನೆಯುತ್ತಾರೆ, ಮತ್ತೆ ಮತ್ತೆ ಅದನ್ನೇ ನೆನೆಯುತ್ತಾ ಆಕಾಶದಲ್ಲಿ ವಿಹರಿಸುತ್ತಾರೆ. ನಮ್ಮ ದೇಶದ ಚರಿತ್ರೆಯಲ್ಲಿ ಇದು ಬಹಳಷ್ಟು ಬಾರಿ ಪ್ರಕಟವಾಗಿದೆ. ಹಣದ ರಾಶಿಯನ್ನು ಮನೆ ಬಾಗಿಲಿಗೆ ತಂದು ಸುರಿಯುವ ಕ್ರಿಕೆಟ್ ಚರಿತ್ರೆ ಇದಕ್ಕೊಂದು ಉದಾಹರಣೆ. ಅದು ಹಳಸಿತೆಂದು ಕಂಡು ಬಂದಾಗ ಗಟ್ಟಿಗ ಅಭಿನವ ಬಿಂದ್ರಾ ಸ್ವರ್ಣ ಪದಕ ಪಡೆದು ಒಲಿಂಪಿಕ್ಸ್ ಪಂದ್ಯಾವಳಿಯಲ್ಲಿ ಭಾರತವನ್ನು ಪದಕಗಳ ಪಟ್ಟಿಗೆ ಸೇರಿಸಿರುವುದು ಮುಂದಿನ ಒಂದೆರಡು ತಿಂಗಳುಗಳಿಗೆ ಗ್ರಾಸವಾಗಬಲ್ಲದು. 'ಹೊಸತು' ಆತನಿಗೆ ಒಂದು ಕೋಟಿಯನ್ನೋ ಹತ್ತು ಲಕ್ಷವನ್ನೋ ಕೊಟ್ಟು ಕೃತಾರ್ಥವಾಗಲು ಸಮರ್ಥವಲ್ಲ; ಅದನ್ನು ಆಟೋಟಗಳ ಕಣದಲ್ಲಿ ಕಳಪೆಯ ಸಂಸ್ಕೃತಿಯೆಂದು ಜರಿದು, ಬಿಂದ್ರಾಗೆ ದಕ್ಕಿರುವ ನಾಲ್ಕೈದು ಕೋಟಿ ರೂಪಾಯಿಗಳ ''ಪ್ರೋತ್ಸಾಹಧನ''ವನ್ನು ದೇಶಕ್ಕೆ ದಾನ ಮಾಡಬೇಕೆಂದು ಆಗ್ರಹಿಸುವುದೂ ಇಲ್ಲ. ಸಂತೋಷದಿಂದ ಆತನನ್ನು ಅಭಿನಂದಿಸಿ, ತನ್ನ ಕ್ರೀಡೆಯಲ್ಲಿ ಆತ ಮುಂದುವರಿಯಲೆಂದು ಆಶಿಸುವುದಷ್ಟೇ ನಮಗೆ ತೃಪ್ತಿ ತರುತ್ತದೆ. ''ಹುಟ್ಟಿದಂದಿನಿಂದಲೇ ಆತನ ದೃಷ್ಟಿ ಈ ಸ್ವರ್ಣ ಪದಕದ ಮೇಲಿತ್ತು, ಆತ ಅದನ್ನು ಪಡೆದೇ ಪಡೆಯುತ್ತಾನೆಂದು ಎಂದೋ ಗೊತ್ತಾಗಿ ಹೋಗಿತ್ತು'' ಎಂಬರ್ಥ ಬರುವಂತೆ ಕೆಲವು ವ್ಯಾಖ್ಯಾನಗಳು ಬಂದಿವೆ. ಅವಕ್ಕೆ ಅರ್ಥವಿಲ್ಲ, ಬೆಲೆಯಿಲ್ಲ. ಕ್ರೀಡಾ ಸಾಮರ್ಥ್ಯವನ್ನು ಹಣದಿಂದಷ್ಟೇ ಗುರುತಿಸುವ ಮತ್ತು ಪ್ರೋತ್ಸಾಹಿಸುವ ಕೀಳು ಸಂಪ್ರದಾಯವನ್ನು ಕೈಬಿಡುವುದೊಳ್ಳೆಯದು. ಆತ ಅನುಕೂಲಸ್ಥ ಕುಟುಂಬದವನಾದ್ದರಿಂದ ಪದಕ ಪಡೆದದ್ದಕ್ಕೆ ಮನೆ, ಸೈಟು, ಕಾರು, ಎಲ್ಲಾ ಬಹುಮಾನವಾಗಿ ನೀಡಬೇಕಾಗಿಲ್ಲ. ಒಂದು ಇಂಗ್ಲಿಷ್ ವಾರಪತ್ರಿಕೆಯು ಆತ ತನ್ನ ಕ್ರೀಡೆಯನ್ನು ಅಭ್ಯಾಸ ಮಾಡಿದ ಬಗೆಯನ್ನು ಬಹಿರಂಗಗೊಳಿಸಿದೆ: ಮನೆ ಕೆಲಸದಾಕೆಯ ತಲೆಯ ಮೇಲೆ ಟೊಮೆಟೋ ಇಟ್ಟು ಅದನ್ನು ಗುರಿಯಾಗಿಸಿ 'ಶೂಟ್' ಮಾಡುತ್ತಿದ್ದನಂತೆ; ಹಾಗೆ ಮಾಡಿದಾಗ ಒಂದೈದಾರು ಬಾರಿ ಮಾತ್ರ ಆಕೆಗೆ ಪೆಟ್ಟು ಬಿದ್ದಿದ್ದಿತಂತೆ! ಇದರ ಗುಣಗಾನ ಮಾಡಬೇಕೋ ತುಚ್ಛೀಕರಿಸಬೇಕೋ ಎಂಬುದನ್ನು 'ಹೊಸತು' ಓದುಗರು ಸ್ವತಃ ನಿರ್ಧರಿಸಿಕೊಳ್ಳಬೇಕು. 'ಔಟ್‌ಲುಕ್' ಪತ್ರಿಕೆಯೇನೋ ಅದನ್ನು ಪರಾಕ್ರಮವೆಂಬಂತೆ ಬಿಂಬಿಸಿದೆ. ಬಿಂದ್ರಾ ಭಾರತದ ವಿಲಿಯಂ ಟೆಲ್ ಎಂಬಂತಹ ತಪ್ಪು ಭಾವನೆಗೆ ಇದು ಪ್ರಚೋದನೆ ನೀಡುತ್ತದೆಯಾದ್ದರಿಂದ ಅದನ್ನು ಪುಷ್ಟೀಕರಿಸಬಾರದು. ಬಿಂದ್ರಾ ಅಲ್ಲದೆ ಬೇರೆ ಕೆಲವು ಕ್ರೀಡಾಪಟುಗಳು ಉತ್ತಮ ಪ್ರದರ್ಶನ ನೀಡಿದ್ದಾರೆ. ಅವರಿಗೆಲ್ಲಾ ಅಭಿನಂದನೆಗಳು ಸಲ್ಲುತ್ತವೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಸ್ಪರ್ಧಿಸಲು ಸಾಕಷ್ಟು ತರಬೇತಿ ಇಲ್ಲದವರನ್ನು ಒಲಿಂಪಿಕ್ಸ್‌ಗೆ ಕಳಿಸಿದರೆ ಲಾಭವಿಲ್ಲ ಮತ್ತು ಕ್ರೀಡಾಪಟುಗಳು ಹುರುಪಿನಿಂದ ಹಿಂದಿರುಗುವ ಬದಲು ಹತಾಶರಾಗಿ ಕಣ್ಮರೆಯಾಗುತ್ತಾರೆ. ಅದನ್ನು ತಪ್ಪಿಸಬೇಕು. ಅಂತೆಯೇ, ಕ್ರೀಡಾ ಮಂಡಲಿಗಳ ಅಧಿಕಾರಿಗಳು ಬೀಜಿಂಗ್‌ನಂತಹ ನಗರಗಳಲ್ಲಿ ಲಲ್ಲೆ ಹೊಡೆಯಲು ಸಾರ್ವಜನಿಕರ ಹಣದಲ್ಲಿ ಹೋಗಿದ್ದುದನ್ನು ಖಂಡಿಸಬೇಕು ಮತ್ತು ಅವರಿಂದ ಆ ಹಣವನ್ನು ವಾಪಸ್ಸು ಪಡೆಯಬೇಕು. ಈ ಸಂಬಂಧದಲ್ಲಿ, ಒಲಿಂಪಿಕ್ಸ್ ಆಯೋಜಿಸಿದ ಚೀಣಾ ಅದ್ಭುತವಾಗಿ ಕಾರ್ಯ ನಿರ್ವಹಿಸಿತೆಂಬುದನ್ನು ಮೆಚ್ಚಬೇಕು. ಸಾಮಾನ್ಯವಾದ ರಾಷ್ಟ್ರಗಳು ಇಷ್ಟು ದೊಡ್ಡ ಪ್ರಮಾಣದ ಕೂಟಗಳನ್ನು ಆಯೋಜಿಸಲು ಅಸಾಧ್ಯವೆನ್ನುವಂತಾಗಿದೆ. ತನ್ನ ಇತಿಹಾಸ, ಪರಂಪರೆ, ಕಲಾಭಿವ್ಯಕ್ತಿ ಸಾಧನೆ, ಮಾನವಿಕ ಆಶಯಗಳು, ತಾಂತ್ರಿಕ ಕೌಶಲ್ಯ, ಮುಂತಾದುವನ್ನು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ನಿರೂಪಿಸಿದ್ದು ಒಂದು ಮಾದರಿಯಾಗಿದೆ.

ಅಮೆರಿಕಾದಲ್ಲಿ ಒಲಿಂಪಿಕ್ಸ್ ನಡೆದಾಗ ಒಂದು ಸಾವಿರ ಪಿಯಾನೋಗಳನ್ನು ಒಟ್ಟಿಗೆ ತಂದು ಕಾರ್ಯಕ್ರಮ ನೀಡಲಾಯಿತು. ಸಂಖ್ಯೆಯ ಬಾಹುಳ್ಯವು ಗುಣದ ಉತ್ತಮಿಕೆಗೆ ಯಾವ ನೆರವನ್ನೂ ನೀಡಿರಲಿಲ್ಲ ಮತ್ತು ಮಾನವಿಕ ಆಶಯಗಳ ಪ್ರಸ್ತಾಪವೇ ಇರಲಿಲ್ಲ. ಅಮೆರಿಕಾ - ಚೀಣಾ ಹೇಗೆ ಬೇರೆ ಬೇರೆ ಧ್ರುವಗಳನ್ನು ಪ್ರತಿನಿಧಿಸುತ್ತವೆ ಎಂಬುದಕ್ಕೆ ಇದೊಂದು ನಿದರ್ಶನ. ಬುಷ್ ಮಹಾಶಯ ಕ್ರೀಡೆಗಳ ಉದ್ಘಾಟನೆಯ ಸಂದರ್ಭದಲ್ಲಿ ಹಾಜರಿರಲು ಬೀಜಿಂಗಿಗೆ ತೆರಳುವ ಮುನ್ನ ''ಚೀಣಾದಲ್ಲಿ ಮಾನವ ಹಕ್ಕುಗಳು ಇನ್ನೂ ಉತ್ತಮಗೊಳ್ಳಬೇಕು'' ಎಂದು ನುಡಿದಿದ್ದುದನ್ನು ಒಂದು ದ್ವೇಷದ ರಾಜಕೀಯವೆಂದು ಭಾವಿಸಬಹುದಾಗಿದೆ. ಹೇಗೂ ಚೀಣಾ ದೇಶವು ಇರಾಕಿನಂತಹ ದೇಶಕ್ಕೆ ನುಗ್ಗಿ ಸಂಪತ್ತು ಲೂಟಿಮಾಡಿ, ಹನ್ನೆರಡು ಲಕ್ಷ ಮಂದಿಯನ್ನು ಕೊಂದು ''ಮಾನವ ಹಕ್ಕು''ಗಳ ''ರಕ್ಷಣೆ''ಯಲ್ಲಿ ತೊಡಗಿಲ್ಲವೆಂಬುದು ಸಮಾಧಾನದ ಸಂಗತಿ. ನೂರು ವರ್ಷ ಕೊಟ್ಟರೂ ''ಬುಷ್ ಸಂಸ್ಕೃತಿ'' ಎಂಬುದು ಬೀಜಿಂಗ್ ಒಲಿಂಪಿಕ್ಸ್‌ನಲ್ಲಿ ಪ್ರದರ್ಶಿಸಲಾದ ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳುವುದಿಲ್ಲ.

(೮ನೇ ಪುಟಕ್ಕೆ)



ತಿಂಗಳ ಪತ್ರಿಕೆ

# ಹೊಸತು

ನವಕರ್ನಾಟಕ ಪ್ರಕಾಶನ

ಸಂಪುಟ-೧೦ ಸಂಚಿಕೆ-೨ ಸೆಪ್ಟೆಂಬರ್ ೨೦೦೮

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೪೨೬

**ಹೊಸತು ಕಚೇರಿಯ ವಿಳಾಸ**





**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@vsnl.com
website : www.navakarnatakabooks.com
http://navakarnataka.blogspot.com




## ಸ್ವಾತಂತ್ರ್ಯದ ದಿನ

ಅರವತ್ತೆರಡನೆಯ ಸ್ವಾತಂತ್ರ್ಯೋತ್ಸವ ಈಗ ತಾನೆ ಮುಗಿದಿದೆ, ಆದರೆ ನಮ್ಮ ಬಹುಸಂಖ್ಯಾತ ಜನರಿಗೆ ಸ್ವಾತಂತ್ರ್ಯದ ದಿನವಿನ್ನೂ ಬಂದಿಲ್ಲ. ಪ್ರಧಾನಿಯೇನೋ ತಮ್ಮ ಎಲ್ಲ ಆಶ್ವಾಸನೆಗಳನ್ನು ಈಡೇರಿಸಿರುವುದಾಗಿ ಕೆಂಪುಕೋಟೆಯ ಮೇಲೆ ನಿಂತು ಘೋಷಿಸಿದ್ದಾರೆ. ''ಇದೆಂತಹ ಬೊಗಳೆ ನಿಮ್ಮದು'' ಎಂದು ಜನ ಆಡಿಕೊಳ್ಳುವುದು ಹೇಗೂ ಅವರಿಗೆ ಕೇಳಿಸುವುದಿಲ್ಲ. ಪಾರ್ಲಿಮೆಂಟಿನಲ್ಲಿ ಅಮರ್ತ್ಯ ಸೇನ್ ಉಪನ್ಯಾಸ ನೀಡಿ ನಮ್ಮ ದೇಶದಲ್ಲಿ ಆಗಬೇಕಾಗಿರುವ ಕೆಲಸಗಳನ್ನು ಒತ್ತುಕೊಟ್ಟು ಹೇಳಿದರು. ಆಗಲೂ ಪ್ರಧಾನಿ ಹೇಳಿದರು : ''ನಮ್ಮೆಲ್ಲ ನೀತಿಗಳು ಇವರು ಸೂಚಿಸಿರುವ ದಿಕ್ಕಿನಲ್ಲಿಯೇ ಇವೆ.'' ಸ್ವಾತಂತ್ರ್ಯವನ್ನು ನಮ್ಮ ದೇಶವು ಗಂಭೀರವಾಗಿ ತೆಗೆದುಕೊಂಡಿಲ್ಲವೇನೋ ಎಂಬ ಭಾವನೆ ಇದರಿಂದ ಇಮ್ಮಡಿಯಾಗಿದೆ.

ಸಾಮಾನ್ಯವಾಗಿ ಸ್ವಾತಂತ್ರ್ಯ ದಿನದಂದು ಹಿಂದಿನ ಹೋರಾಟಗಳನ್ನು ಸ್ಮರಿಸಿ, ಅಂದಿನ ಜನರಿಗೆ ಮತ್ತು ನಾಯಕರಿಗೆ ಗೌರವ ಸಲ್ಲಿಸುವುದು ರೂಢಿ. ಈಚಿನ ವರ್ಷಗಳಲ್ಲಿ ಅದು ಕಡಿಮೆಯಾಗಿದೆ. ಅದರ ಜಾಗದಲ್ಲಿ ತಮ್ಮದೇ ತಮಟೆ ಬಾರಿಸುವುದು ಮತ್ತು ಪೀಪಿ ಊದಿಕೊಳ್ಳುವುದು ಹೆಚ್ಚಾಗಿದೆ. ಉದಾಹರಣೆಗೆ, ನರೇಂದ್ರ ಮೋದಿಯವರು ''ಭದ್ರತಾ ವಿಶ್ವವಿದ್ಯಾನಿಲಯ''ವನ್ನು ಸ್ಥಾಪಿಸುವುದಾಗಿ ಹೇಳಿದ್ದಾರೆ. ಯಾರಿಗೆ ಮತ್ತು ಯಾವುದರಿಂದ ರಕ್ಷಣೆ ಎಂಬುದು ಸದಾ ಒಂದು ತೆರನಾಗಿಯೇ ಇರುವುದಿಲ್ಲ. ಇಂದು ಜನರಿಗೆ ಮೂರ್ಖ ಸಿದ್ಧಾಂತಗಳ ಘೋರ ಕತ್ತಲೆಯಿಂದ ರಕ್ಷಣೆ ಬೇಕಾಗಿದೆ, ವಿದೇಶಿ ಸರ್ಕಾರಗಳ ಹಿಡಿತದಿಂದ ಮುಕ್ತಿ ಬೇಕಾಗಿದೆ, ಬೆಳೆಯುತ್ತಿರುವ ಫ್ಯಾಸಿಸ್ಟ್ ಮನೋಭಾವದಿಂದ ಅನಾಹುತ ಸಂಭವಿಸದಿರುವಂತಹ ವಾತಾವರಣ ಬೇಕಾಗಿದೆ. ದಿನನಿತ್ಯದ ರಾಜಕೀಯ ಅವಸರಗಳ ಕೆಟ್ಟ ಒತ್ತಡದಿಂದಾಗಿ ನಾಳಿನ ಬಗ್ಗೆ ಶ್ರದ್ಧೆಯಿಂದ ಯೋಚಿಸುವುದು ನಮ್ಮ ಸರ್ಕಾರಗಳಿಗೆ ಮತ್ತು ಕೆಲವು ರಾಜಕೀಯ ಪಕ್ಷಗಳಿಗೆ ಸಾಧ್ಯವಾಗುತ್ತಿಲ್ಲ. ಆಘಾತ ಉಂಟಾಗುವಂತಹ ಸ್ಥಿತಿಯನ್ನು ನಾವು ತಲುಪಿದ್ದೇವೆ. ಇಂದಿನ ಮಕ್ಕಳು ಮತ್ತು ಶಾಲಾ ವಿದ್ಯಾರ್ಥಿಗಳು ಇಪ್ಪತ್ತೈದನೆಯ ವಯಸ್ಸು ಮುಟ್ಟುವ ವೇಳೆಗೆ ನಮ್ಮ ದೇಶದಲ್ಲಿ ಎಂತಹ ಸನ್ನಿವೇಶವಿದ್ದೀತು ? ರಸ್ತೆಗಳಲ್ಲಿ ಸಲೀಸಾಗಿ ಓಡಾಡಲು ಸಹ ಬೆಂಗಾವಲು ಬೇಕಾಗುತ್ತದೆ ಮತ್ತು ಎಲ್ಲವನ್ನು ಜಾತಿ ಮತ್ತು ಮತಧರ್ಮಗಳ ಆಧಾರದಿಂದ ಪರಿಶೀಲಿಸಲಾಗುತ್ತದೆ. ಕೋಟ್ಯಧಿಪತಿಗಳ ಸಂಖ್ಯೆ ಏರಬಹುದು, ಆದರೆ ಅರ್ಜುನ ಸೇನ್‌ಗುಪ್ತ ನೀಡಿರುವ ದಾರುಣ ಚಿತ್ರ ಮಾಯವಾಗಿರುವುದಿಲ್ಲ. ಈ ವರ್ಷ ಜರುಗಿದಷ್ಟು ಸುಗಮವಾಗಿ ಸಹ ಮುಂದಿನ ವರ್ಷಗಳಲ್ಲಿ ಸ್ವಾತಂತ್ರ್ಯೋತ್ಸವದ ಆಚರಣೆ ಸಾಧ್ಯವಾಗದೆ ಹೋಗಬಹುದು. ಇದರಿಂದ ನಮಗೆ ಘಾಸಿಯುಂಟಾಗದಿದ್ದರೆ ನಾವೆಂತಹ ದೇಶಪ್ರೇಮಿಗಳು ? ದೂರದರ್ಶನದಲ್ಲಿ ಮತ್ತು ಆಕಾಶವಾಣಿಯಲ್ಲಿ ದೇಶಭಕ್ತಿ ಗೀತೆಗಳನ್ನು ಹಾಡುವುದು ಸರಿ, ಆದರೆ ಅಷ್ಟರಿಂದಲೇ ನಮ್ಮ ದೇಶದ ವಾಸ್ತವಿಕ ಸಂದರ್ಭವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ.

ಹಿಂದೆ ಭಾರತೀಯ ಜನತಾ ಪಕ್ಷದ ಅಧ್ಯಕ್ಷರಾಗಿದ್ದ ಮುರಳಿ ಮನೋಹರ ಜೋಶಿಯವರು ಕನ್ಯಾಕುಮಾರಿಯಿಂದ ಹೊರಟು ಕಾಶ್ಮೀರ ತಲುಪಿ ಅಲ್ಲಿ ರಾಷ್ಟ್ರಧ್ವಜ ಹಾರಿಸಿದ್ದು ಒಂದು ರೀತಿಯ ಸಂಕೇತವಾಗಿಬಿಟ್ಟಿದೆ. ಅಂದು ಅವರಿಗೆ ಮಿಲಿಟರಿ ರಕ್ಷಣೆ ನೀಡಿ ಶ್ರೀನಗರಕ್ಕೆ ಕರೆದುಕೊಂಡುಹೋಗಬೇಕಾಯಿತು, ಮಿಲಿಟರಿ ಪಡೆಯ ರಕ್ಷಣೆಯಲ್ಲಿ ಅವರು ಧ್ವಜ ಹಾರಿಸಬೇಕಾಯಿತು. ಅಂದು ದೇಶದ ಎಷ್ಟು ಭಾಗಗಳಲ್ಲಿ ಅಂತಹ ಸನ್ನಿವೇಶವಿದ್ದಿತೋ ಅದಕ್ಕಿಂತ ಹೆಚ್ಚಿನ ಭಾಗಗಳಲ್ಲಿ ಇಂದು ಅದಕ್ಕಿಂತಲೂ ಕಳವಳಕಾರಿ ಸನ್ನಿವೇಶವಿದೆ. ದೇಶದ ಸ್ವಾತಂತ್ರ್ಯದ ದಿನದಂದು ರಾಷ್ಟ್ರಧ್ವಜ ಹಾರಿಸಲು ಸೈನ್ಯದ ತುಕಡಿಗಳ ಉಪಸ್ಥಿತಿ ಅವಶ್ಯಕವಾಗಿರುವುದು ಒಂದು ಶೋಚನೀಯ ಪರಿಸ್ಥಿತಿ. ಹೀಗೇಕಾಯಿತೆಂದು ಚಿಂತಿಸುವ ಬದಲಾಗಿ ಕೆಲವು ರಾಜಕೀಯ ಪಕ್ಷಗಳು ಮತ್ತು ನಾಯಕರು ಎಲ್ಲವನ್ನೂ ಪೊಲೀಸ್ ಮತ್ತು ಸೈನ್ಯದ ಶಕ್ತಿಯಿಂದ ಸರಿಪಡಿಸಬಹುದೆಂಬ ಭ್ರಾಂತಿಗೆ ಸಿಲುಕಿ ಪರಿಸ್ಥಿತಿಯನ್ನು ಇನ್ನೂ ಹೆಚ್ಚು ಹದಗೆಡಿಸುತ್ತಿದ್ದಾರೆ. ಕಾಶ್ಮೀರವನ್ನು ಎರಡೋ ಮೂರೋ ಭಾಗಗಳನ್ನು ಮಾಡುವತ್ತ ಹೊರಟಿರುವ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷಗಳು ದೇಶದೊಡನೆ ಚೆಲ್ಲಾಟವಾಡುತ್ತಿವೆ. ನಮ್ಮದೇ ದೇಶದಲ್ಲಿ, ನಮ್ಮದೇ ದೇಶದವರು, ದೇಶದ ಒಂದು ಭಾಗಕ್ಕೆ ಆಹಾರ ಸರಬರಾಜು ಮಾಡದಿರುವುದು, ವ್ಯಾಪಾರವನ್ನು ಕಡಿತಗೊಳಿಸಿಕೊಳ್ಳುವುದು, ಇದನ್ನೆಲ್ಲಾ ಹೇಗೆ ವ್ಯಾಖ್ಯಾನಿಸಿಕೊಳ್ಳಬೇಕು ? ರೈಲ್ವೆ ಮುಷ್ಕರ ಪ್ರಬಲವಾಗಿ ನಡೆದಿದ್ದಾಗ ಹಿಂದೊಮ್ಮೆ ರೈಲ್ವೆ ಕಾಲನಿಗಳಿಗೆ ನೀರು, ವಿದ್ಯುಚ್ಛಕ್ತಿ, ಇತ್ಯಾದಿಗಳನ್ನು ನೀಡದೆ ಜನರನ್ನು ಕಂಗಾಲಾಗಿಸಿ ಮುಷ್ಕರವನ್ನು ಮುರಿಯುವ ಪ್ರಯತ್ನ ನಡೆದಿತ್ತು. ಈಗ ಕಾಶ್ಮೀರದ ರಸ್ತೆಯನ್ನು ಬಂದುಮಾಡಿ ಅಲ್ಲಿಗೆ ಆಹಾರ ಪದಾರ್ಥಗಳ ಸಾಗಾಣಿಕೆಯನ್ನು ನಿರ್ಬಂಧಿಸಿದ್ದಾರೆ. ಇದು ಭಾರತೀಯ ನಾಗರಿಕತೆಯೆ ? ಇದರಿಂದ ಕಾಶ್ಮೀರದ ಜನತೆಗೆ ''ಬುದ್ಧಿ ಕಲಿಸುವ'' ಅಹಂಕಾರದ ಪ್ರದರ್ಶನವಾಗುತ್ತದೆ, ಆದರೆ ಅಲ್ಲಿಯ ಜನರ ಒಲವು ಪಡೆದಂತಾಗುವುದಿಲ್ಲ. ಇಂದಿನ ಚಿಕ್ಕಚಿಕ್ಕ ವ್ಯಾಜ್ಯಗಳನ್ನು ಹೀಗೆ ದರ್ಪದಿಂದ ಬಗೆಹರಿಸಿಕೊಳ್ಳಲು ಹೊರಟರೆ ನಾಳೆ ನಮ್ಮ ದೇಶವು ಒಂದಾಗಿ ಉಳಿಯುವುದಿಲ್ಲ. ಇಷ್ಟು ಪ್ರಜ್ಞೆಯೂ ಇಲ್ಲದ ರಾಜಕೀಯ ಪಕ್ಷಗಳು ಕಾಶ್ಮೀರವನ್ನು ಪಾಕಿಸ್ತಾನದ ತೆಕ್ಕೆಗೆ ತಳ್ಳಲು ಹೊರಟಿರುವಂತಿದೆ. ಅಮರನಾಥನ ದರ್ಶನ ಮುಖ್ಯವೋ, ಅವನ ಹೆಸರಲ್ಲಿ ಒಂದಷ್ಟು ಭೂಮಿ ಮುಖ್ಯವೋ, ಎಂಬುದನ್ನು ಸಾವಧಾನವಾಗಿ ಯೋಚಿಸುವುದು ಒಳ್ಳೆಯದು. ಇದು ಪ್ರತಿಷ್ಠೆಯ ಪ್ರಶ್ನೆಯಲ್ಲ, ದೇಶದ ಸಮಗ್ರತೆಯ ಪ್ರಶ್ನೆ. ನಿವೃತ್ತನಾಗುವ ಮುನ್ನಾ ದಿನ ಕಾಶ್ಮೀರದ ಹಿಂದಿನ ರಾಜ್ಯಪಾಲ, ಸೈನ್ಯಾಧಿಕಾರಿ ಸಿನ್ಹ ಹುಟ್ಟಿಹಾಕಿಹೋದ ಸಮಸ್ಯೆ ಅಮರನಾಥ ಭೂಮಿ ಸ್ವಾಧೀನ ಸಮಿತಿಗೆ ಇಂದು ಪುಷ್ಕಳ ಗ್ರಾಸವಾಗಿದೆ. ಕಾಶ್ಮೀರದ ಜಡ್ಡು ಮತಾಂಧರ ನೇತೃತ್ವದಲ್ಲಿರುವ ದೇಶವಿಭಜನಕಾರರಿಗೆ ಇಂತಹ ಒಂದು ನೆಪದ ಅವಶ್ಯಕತೆ ಇತ್ತು.

ಈ ವರ್ಷದ ಸ್ವಾತಂತ್ರ್ಯೋತ್ಸವವು ಅಸ್ಸಾಂ, ಮೇಘಾಲಯ, ಮಣಿಪುರ, ನಾಗಾಲ್ಯಾಂಡ್, ಮುಂತಾದ ರಾಜ್ಯಗಳಲ್ಲಿ ಹೇಗೆ ಆಚರಿಸಲಾಯಿತು ? ಜನರ ಭಾಗವಹಿಸುವಿಕೆ ಹೇಗಿದ್ದಿತು ? ಮಿಲಿಟರಿ ತುಕಡಿಗಳು, ಪೊಲೀಸ್ ಪಡೆಗಳು ಮತ್ತು ಸರ್ಕಾರದ ಅಧಿಕಾರಿಗಳನ್ನು ಬಿಟ್ಟರೆ ಜನಸಾಮಾನ್ಯರು ಈ ರಾಜ್ಯಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಲಿಲ್ಲ. ಭಾಗವಹಿಸಿದಾಗಲೂ ಎಂಥದೋ ಬಲವಂತದ ಭಾವನೆ ಅವರನ್ನು ಕಾಡುತ್ತಿತ್ತು. ಅವರಿಗೆಲ್ಲಾ ''ದೇಶಭಕ್ತಿ'' ಇಲ್ಲವೆಂದು ಮೂದಲಿಸುವುದು ಸುಲಭ, ಆದರೆ ಅದರಿಂದ ಪರಿಸ್ಥಿತಿ ಸುಧಾರಿಸುವುದಿಲ್ಲ, ಬದಲಾಗುವುದಿಲ್ಲ. ಛತ್ತೀಸ್‌ಗಢದಂತಹ ರಾಜ್ಯದಲ್ಲಿ ನಾಗರಿಕರ ಮೇಲೆ ಹರಿಬಿಡಲಾಗಿರುವ ಹಲ್ಲೆಯು ನಾಳೆ ಆ ರಾಜ್ಯವನ್ನೂ ಈಶಾನ್ಯ ಭಾರತದ ರಾಜ್ಯಗಳಂತೆ ಮಾಡಿಬಿಟ್ಟರೆ ಆಮೇಲೆ ಯಾರನ್ನು ದೂಷಿಸಲು ಸಾಧ್ಯ ? ಮನಮೋಹನ ಸಿಂಗ್ ಮತ್ತು ಅಡ್ವಾನಿಯವರು ಇದರ ಪರಾಮರ್ಶೆ ನಡೆಸುವುದು ಯೋಗ್ಯವಾಗಿರುತ್ತದೆ. ಆದರೆ ಅವರಿಬ್ಬರಿಗೂ ಚುನಾವಣೆಗಳಲ್ಲಿ ಗೆಲ್ಲುವ ಆತುರವಿದೆಯೇ ವಿನಾ ಹಲವು ಪ್ರದೇಶಗಳು ಹೊತ್ತಿ ಉರಿಯುವಂತಾಗುವ ದೃಶ್ಯವನ್ನು ಕಾಣಬೇಕಾದೀತೆಂಬ ಗಾಬರಿ ಇಲ್ಲ. ಆರ್ಥಿಕ ನೀತಿಗಳು, ಸಾಂಸ್ಕೃತಿಕ ಪ್ರಭೇದಗಳ ಬಗ್ಗೆ ಅಸಹನೆ, ಭಯೋತ್ಪಾದನೆಯ ನಿಗ್ರಹದ ಹೆಸರಿನಲ್ಲಿ ದೇಶವನ್ನು ಅಮೆರಿಕಾಕ್ಕೆ

ಒತ್ತೆಯಿಡುವ ಬೇಜವಾಬ್ದಾರಿತನ, ಇವೆಲ್ಲಾ ನಡುಕ ಹುಟ್ಟಿಸುವಂಥವು. ಜನರನ್ನು ಒಂದಾಗಿಸಲು ಒಂದು ಸೂತ್ರವಿಲ್ಲ, ಪ್ರಯತ್ನವಿಲ್ಲ ಆದರಿಂದಾಗಿ ನಮ್ಮ ಸ್ವಾತಂತ್ರ್ಯೋತ್ಸವವು ಯಾಂತ್ರಿಕವಾಗಿ, ಔಪಚಾರಿಕವಾಗಿ, ಗ್ರಹಣ ಕಾಲದಲ್ಲಿ ಮೌಢ್ಯದಿಂದ ನಡೆಯುವ ಆಚರಣೆಗಳಂತಾಗಿ, ಮೌಲ್ಯಹೀನವಾಗುವ ಅಪಾಯವಿದೆ. ಸ್ವಾತಂತ್ರ್ಯದ ಅನುಭವ ಎಲ್ಲರಿಗೂ ದಕ್ಕುವಂತಹ ರೀತಿಯಲ್ಲಿ ನಮ್ಮ ಆರ್ಥಿಕ-ಸಾಂಸ್ಕೃತಿಕ ನೀತಿಗಳ ನಿರೂಪಣೆ ಮತ್ತು ಅನುಷ್ಠಾನ ಕೇವಲ ಮಾತಿನ ಚಮತ್ಕಾರವಲ್ಲ, ಅದು ಮೂರ್ತಸ್ವರೂಪದ ಕಾರ್ಯಾಚರಣೆಯ ನಿಷ್ಠೆ. ಆ ದಿಕ್ಕಿನಲ್ಲಿ ಮುನ್ನಡೆಯುವ ಶಪಥವನ್ನು ನಾವು ಕೈಗೊಳ್ಳೋಣ.

## ಕಾನೂನಿನ ಬಿಗಿ ಮುಷ್ಟಿಯಲ್ಲಿ ಹೆಣ್ಣಿನ ಹಕ್ಕು

ಇತ್ತೀಚೆಗೆ ತನ್ನ ಗರ್ಭ ನಿವಾರಿಸಿಕೊಳ್ಳಲು ನ್ಯಾಯಾಲಯದ ಅನುಮತಿ ಕೋರಿ ಸುದ್ದಿಯಾದ ಇಪ್ಪತ್ತಾರು ವಾರಗಳ ಗರ್ಭಿಣಿ ನಿಖಿತಾ ಮೆಹ್ತಾ ನಮ್ಮ ಮುಂದೆ ಹಲವಾರು ಪ್ರಶ್ನೆಗಳನ್ನು ಒಡ್ಡಿದ್ದಾರೆ. ಇದರಿಂದಾಗಿ ಕಾನೂನು ತಜ್ಞರು, ವೈದ್ಯಸಮುದಾಯ, ಶಾಸನಕಾರರು – ಎಲ್ಲರೂ ತಮ್ಮ ತಮ್ಮ ಪಾತ್ರದ ಬಗ್ಗೆ ಹೆಚ್ಚು ಗಂಭೀರವಾಗಿ ಚಿಂತಿಸಬೇಕಾಗಿದೆ; ಹಾಗೂ ಪ್ರತಿಕ್ರಿಯಿಸಬೇಕಾಗಿದೆ.

ಭ್ರೂಣಹತ್ಯೆ ಮಹಾ ಪಾಪವೆಂಬ ಸಾಂಪ್ರದಾಯಿಕ, ಧಾರ್ಮಿಕ ತಿಳುವಳಿಕೆಯ ನಡುವೆಯೂ ಭಾರತದಲ್ಲಿ ೧೯೭೧ರಲ್ಲಿ ಅಂಗೀಕಾರ ಪಡೆದು, ೧೯೭೨ರ ಏಪ್ರಿಲ್‌ನಿಂದ ಜಾರಿಗೆ ಬಂದ ಎಂಟಿಪಿ (ವೈದ್ಯಕೀಯ ಗರ್ಭಪಾತ)ಯ ಮುಖ್ಯ ಉದ್ದೇಶ, ಅತಿ ಜನಸಂಖ್ಯೆಯ ಭಾರತದಂತಹ ದೇಶದಲ್ಲಿ ಸಾಮಾಜಿಕ, ಸಾಂಸಾರಿಕ ಕಾರಣಗಳಿಗಾಗಿ ಮಾಡಿಕೊಳ್ಳುವ ಅಸುರಕ್ಷಿತ ಗರ್ಭಪಾತಗಳಿಂದ ಹೆಣ್ಣಿನ ಆರೋಗ್ಯವನ್ನು ರಕ್ಷಿಸುವುದೇ ಆಗಿತ್ತು. ಆದ್ದರಿಂದ ಎಂಟಿಪಿ ಕಾಯಿದೆಯನ್ನು ಮಾಡಿದಾಗ ಅದು ಹೆಣ್ಣಿನ ಗರ್ಭಧಾರಣೆಯ ಆಯ್ಕೆಯ ಸ್ವಾತಂತ್ರ್ಯಕ್ಕೆ ನೀಡಿದ ಮನ್ನಣೆಯೇನೂ ಆಗಿರಲಿಲ್ಲ. ಕೆಲವೇ ಬೆರಳೆಣಿಕೆಯ ವಿದ್ಯಾವಂತ, ಸ್ವಶಕ್ತಿಯ ಮಹಿಳೆಯರನ್ನು ಬಿಟ್ಟರೆ ಗರ್ಭಧಾರಣೆಯ ಆಯ್ಕೆಯ ಸ್ವಾತಂತ್ರ್ಯ ಹೊಂದಿರುವ ಮಹಿಳೆಯರು ನಮ್ಮಲ್ಲಿ ಇಂದಿಗೂ ಬಹಳ ಕಡಿಮೆ. ೩೭ ವರ್ಷಗಳಷ್ಟು ಹಳೆಯದಾದ ಗರ್ಭಪಾತ ಕಾನೂನು ಇಂದಿನ ಬದಲಾದ ಸನ್ನಿವೇಶ, ಸಂದರ್ಭಗಳಲ್ಲಿ ಹೆಚ್ಚು ವ್ಯಾಪಕವಾದ ಅಂಶಗಳನ್ನು ಒಳಗೊಳ್ಳಲೇಬೇಕಾದ ತುರ್ತು ಇಂದು ಒದಗಿಬಂದಿದೆ. ಈ ಸಂದರ್ಭ ಹೆಣ್ಣಿನ ಗರ್ಭಧಾರಣೆಯ ಹಕ್ಕನ್ನು ಕುರಿತ ಚರ್ಚೆಗೆ ಹೆಚ್ಚು ಮಾನವೀಯ ದೃಷ್ಟಿಕೋನದ ಅಗತ್ಯವಿದೆಯೆಂಬ ಅಂಶವನ್ನು ಒತ್ತಾಯಿಸುತ್ತದೆ.

ತಂತ್ರಜ್ಞಾನದ ಆವಿಷ್ಕಾರವಾದ ಭ್ರೂಣಪರೀಕ್ಷೆ (ಅಮ್ನಿಯೋಸಿಂಥಿಸಿಸ್)ಯು ಆರೋಗ್ಯವಂತ ಶಿಶುವಿನ ಜನನವನ್ನೇ ಮುಖ್ಯ ಗುರಿಯಾಗಿಟ್ಟುಕೊಂಡಿದೆಯೇ ಹೊರತು ಹೆಣ್ಣಿನ ಹೆರುವ ಆಯ್ಕೆಯ ಸ್ವಾತಂತ್ರ್ಯವನ್ನಲ್ಲ. ಹೀಗಿರುವಾಗ ಭ್ರೂಣಪರೀಕ್ಷೆಯ ಫಲಿತಾಂಶದಿಂದ ಆರೋಗ್ಯವಂತ ಮಗುವನ್ನು ಪಡೆಯಬೇಕೆನ್ನುವ ನಿಖಿತಾಳ ಅಪೇಕ್ಷೆ ಅಸಹಜವಾದುದೇನಲ್ಲ. ಇಪ್ಪತ್ತೈದು ವಾರಗಳ ಗರ್ಭ ಹೊತ್ತ ನಿಖಿತಾ ಮೆಹ್ತಾರಿಗೆ ಭ್ರೂಣಪರೀಕ್ಷೆಯಲ್ಲಿ ವೈದ್ಯರು ಮಗುವಿಗೆ ಹೃದಯ ಸಂಬಂಧಿ ಕಾಯಿಲೆಯಿರುವುದನ್ನು ದೃಢಪಡಿಸಿದಾಗ ಮತ್ತು ಹುಟ್ಟುವ ಮಗುವು ಅನಾರೋಗ್ಯವನ್ನು ಹುಟ್ಟಿನಿಂದಲೇ ಪಡೆದುಕೊಳ್ಳುತ್ತದೆಯೆಂಬುದು ನಿಶ್ಚಿತವಾಗಿರುವಾಗ ಅವರು ಗರ್ಭ ತೆಗೆಸಿಕೊಳ್ಳಲು ನಿರ್ಧರಿಸಿದ್ದು ತಪ್ಪೇನಲ್ಲ. ಇದಕ್ಕೆ ಅವರ ವೈದ್ಯರ ಸಮ್ಮತಿಯಿತ್ತು. ಆದರೆ ೨೦ ವಾರಗಳಿಗಿಂತ ಹೆಚ್ಚಿನ ಗರ್ಭವನ್ನು ತೆಗೆಯುವುದು ಎಂಟಿಪಿ ಕಾಯಿದೆಯಡಿ ಅಪರಾಧವಾಗುತ್ತದೆ, ಎನ್ನುವುದು ನ್ಯಾಯಾಲಯದ ತೀರ್ಪು. ಈ ಕಾಯಿದೆಯು ಎಷ್ಟು ಅಪರಿಪೂರ್ಣವಾಗಿದೆಯೆಂದರೆ, ಈ ಕಾಯಿದೆಯ ೫ನೆಯ ವಿಧಿಯ ಪ್ರಕಾರ, ತಾಯಿಯ ಆರೋಗ್ಯಕ್ಕೆ ತೀವ್ರ ಅಪಾಯವಿದ್ದಲ್ಲಿ ಮಾತ್ರ ೨೦ನೇ ವಾರದ ನಂತರವೂ ವೈದ್ಯರ ಶಿಫಾರಸ್ಸಿನ ಪ್ರಕಾರ ಗರ್ಭಪಾತಕ್ಕೆ ಅವಕಾಶವುಂಟು. ಶಿಶುವಿನ ಆರೋಗ್ಯದ ಪ್ರಸ್ತಾಪವೇ ಇಲ್ಲಿಲ್ಲ. ರೋಗಿಷ್ಠ ಮಗುವನ್ನು ಪಡೆದ ತಾಯಿ ಪ್ರತಿದಿನವೂ ಒಂದರ್ಥದಲ್ಲಿ ಸಾಯುತ್ತಿರುತ್ತಾಳೆ. ನಿಖಿತಾ ಮೆಹತಾ ಅವರ ಪ್ರಕರಣದಲ್ಲಿ ಗರ್ಭದಲ್ಲಿಯೇ ಮಗುವಿನ ಖಾಯಿಲೆಯನ್ನು ಗುರುತಿಸಿದ್ದರಿಂದ ಮಗುವನ್ನು ಪಡೆಯುವುದೇ ಬೇಡವೆಂದು ತಂದೆ ತಾಯಿಗಳು ನಿರ್ಧಾರ ತೆಗೆದುಕೊಂಡದ್ದು ಹೆಚ್ಚು ವಿವೇಕಯುತವಾಗಿದೆ. ಆದರೆ ಈ ನಿರ್ಧಾರಕ್ಕೆ ನ್ಯಾಯಮೂರ್ತಿಗಳ ಪ್ರತಿಕ್ರಿಯೆ ಆಶ್ಚರ್ಯ ಹುಟ್ಟಿಸುತ್ತದೆ. 'ಜೀವ ಮೂಡಿದ ನಂತರ ಕೊಲ್ಲಲು ಕೇಳಬಹುದೇ, ಇದು ದಯಾ ಮರಣಕ್ಕಿಂತ ಬೇರೆಯಾಗಲು ಸಾಧ್ಯವೆ' ಎಂಬ ಪ್ರಶ್ನೆಯನ್ನು ಕೇಳುವ ಮೂಲಕ ಹುಟ್ಟದಿರುವ ಮಗುವಿನ ಹಕ್ಕಿನ ಬಗ್ಗೆ ನ್ಯಾಯಾಲಯ ಮಾತನಾಡುತ್ತದೆಯಾದರೂ ತಾಯಿಯ ಹೃದಯದ ಆಕ್ರಂದನವನ್ನು ಆಲಿಸುವುದಿಲ್ಲ ಮತ್ತು ತಾಯಿಯ ಹೆರುವ ಹಕ್ಕನ್ನು ಗೌರವಿಸುವುದೂ ಇಲ್ಲ. ಅಷ್ಟೇ ಅಲ್ಲ, ಕಾನೂನಿನಲ್ಲಿರುವ ಈ ಕೊರತೆಯನ್ನು ಸರಿಪಡಿಸುವ ಕಾರ್ಯ ಶಾಸನಸಭೆಯದೇ ಹೊರತು ತಮ್ಮದಲ್ಲ, ಎಂದು ಹೇಳುವ ಮೂಲಕ ನಿಖಿತಾ ಮೆಹತಾರಿಗೆ ಗರ್ಭಪಾತ ಮಾಡಿಸಿಕೊಳ್ಳಲು ಅನುಮತಿ ನಿರಾಕರಿಸಲಾಗಿದೆ.

ಭಾರತದ ಪ್ರಸವ ವಿಜ್ಞಾನ ಹಾಗೂ ಸ್ತ್ರೀರೋಗ ಸಂಘಗಳ ಒಕ್ಕೂಟದಡಿಯ ವೈದ್ಯಕೀಯ ಗರ್ಭಪಾತ ಸಮಿತಿಯ ಅಧ್ಯಕ್ಷರಾದ ಡಾ॥ ಜೈದೀಪ್ ಟಾಂಕ್‌ರವರು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ: ''ನನಗೆ ತೀರಾ ನಿರಾಶೆಯಾಗಿದೆ. ಅಂತಿಮವಾಗಿ ಇದು ಮಹಿಳೆಯ ಆಯ್ಕೆಯ ಹಕ್ಕು. ಈ ಪ್ರಕರಣದ ಹಿನ್ನೆಲೆಯಲ್ಲಿ ಹೊಸ ಮಾರ್ಗದರ್ಶೀ ಸೂತ್ರಗಳನ್ನು ರಚಿಸಲು ಹೈಕೋರ್ಟ್ ನಿರ್ದೇಶಗಳನ್ನು ನೀಡಬಹುದಿತ್ತು.'' ಅವರ ಹೇಳಿಕೆಯು ಈ ಸಮಸ್ಯೆಯ ವೈದ್ಯಕೀಯ ಆಯಾಮದ ಬಗ್ಗೆ ಬೆಳಕು ಬೀರುತ್ತದೆ. ಅಷ್ಟೇ ಅಲ್ಲ, ಗರ್ಭಪಾತದ ಅವಧಿಯನ್ನು ಅಮೆರಿಕಾ ಮತ್ತು ಬ್ರಿಟನ್‌ಗಳಲ್ಲಿರುವಂತೆ ೨೬ ವರ್ಷಗಳಿಗೆ ಹೆಚ್ಚಿಸಬೇಕೆಂಬುದು ಭಾರತ ಪ್ರಸವ ವಿಜ್ಞಾನ ಹಾಗೂ ಸ್ತ್ರೀರೋಗ ಸೊಸೈಟಿಯ ಒಕ್ಕೂಟ (ಎಫ್‌ಓಜಿಎಸ್‌ಐ) ಒತ್ತಾಯಿಸುತ್ತಲೇ ಬಂದಿದೆ. ಈ ಅಂಶಗಳನ್ನು ನ್ಯಾಯಾಲಯ ಪರಿಗಣಿಸಬಹುದಿತ್ತು. ಪ್ರಜಾಸತ್ತೆಯಲ್ಲಿ ಗೌರವವಿರಿಸಿ, ತನ್ನ ಸಮಸ್ಯೆಗೆ ನ್ಯಾಯಯುತವಾಗಿ ಪರಿಹಾರ ದೊರಕಿಸಿಕೊಳ್ಳಲು ಮುಂದಾದ ನಿಖಿತಾ ದಂಪತಿಗಳ ನಿಲುವನ್ನು ಖಂಡಿತವಾಗಿಯೂ ಮೆಚ್ಚಬೇಕು. ನ್ಯಾಯಾಲಯದ ತೀರ್ಪು ಹೊರಬಿದ್ದ ಐದು ದಿನಗಳ ನಂತರದಲ್ಲಿ ನಿಖಿತಾ ಸತ್ತ ಮಗುವಿಗೆ ಜನ್ಮವಿತ್ತು, ಅವರ ಬದುಕಿನ ಸಮಸ್ಯೆಗೆ ಪರಿಹಾರ ದೊರಕಿಯಾಗಿದೆ. ಆದರೆ ಇದು ಕೇವಲ ಒಬ್ಬ ನಿಖಿತಾಳ ಸಮಸ್ಯೆಯಲ್ಲ. ಆರೋಗ್ಯವಂತ ಮಗುವನ್ನು ಆಶಿಸುವ ನೂರಾರು ತಾಯಿ ತಂದೆಯರ ಅಗತ್ಯವೂ ಆಗಿದೆ. ನ್ಯಾಯಾಲಯದ ಕ್ರಿಯಾಶೀಲತೆಯ ಬಗ್ಗೆ ದೊಡ್ಡ ಮಾತುಗಳನ್ನು ಕೇಳುತ್ತಿರುವ ಈ ದಿನಗಳಲ್ಲಿ ನ್ಯಾಯಾಲಯವು ಈ ಪ್ರಕರಣದ ಸಂದರ್ಭದಲ್ಲಿ ಪ್ರಸಕ್ತ ಕಾನೂನನ್ನು ವಿಸ್ತರಿಸಿ, ಮಾನವೀಯ ನೆಲೆಯಲ್ಲಿ ವ್ಯಾಖ್ಯಾನಿಸಬಹುದಿತ್ತು. ಇದರಿಂದ ಭಾರತದ ಮಹಿಳಾ ಸಮುದಾಯಕ್ಕೆ ಹೆಚ್ಚು ಅರ್ಥಪೂರ್ಣ ಕೊಡುಗೆಯನ್ನು ನೀಡಿದಂತಾಗುತ್ತಿತ್ತು. ಇನ್ನಾದರೂ ಈ ಕಾಯಿದೆಯ ಸೂಕ್ತ ತಿದ್ದುಪಡಿಗೆ ಸರ್ಕಾರ ಮನಸ್ಸು ಮಾಡಬೇಕಾಗಿದೆ. ಸರ್ಕಾರವನ್ನು ಈ ದಿಕ್ಕಿನಲ್ಲಿ ಕ್ರಿಯಾಶೀಲಗೊಳಿಸಲು ಎಲ್ಲಾ ಜೀವಪರ ಮನಸ್ಸುಗಳು ಒತ್ತಾಯಿಸಬೇಕಾಗಿದೆ.




ಸಂಪುಟ-೯ ಸಂಚಿಕೆ-೧೧ ಜೂನ್ ೨೦೦೮

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@vsnl.com**
**website : www.navakarnatakabooks.com**




**೧೧ನೇ ವರ್ಷ**

'ದಶಮಾನೋತ್ಸವ' ಆಚರಿಸುತ್ತಿರುವ 'ಹೊಸತು'ವಿಗೆ ಮತ್ತು ಸರ್ವ ಶ್ರಮಿಕ ಬಂಧುಗಳಿಗೆ ವಂದನೆ, ಅಭಿನಂದನೆಗಳು. ತುಂಬಾ ತುಂಬಾ ಸಂತಸವಾಗುತ್ತಿದೆ, 'ಹೊಸತು' ತನ್ನ ಹತ್ತನೇ ವರ್ಷಕ್ಕೆ ದಾಪುಗಾಲಿಡುತ್ತಿರುವುದು. ಪತ್ರಿಕೆ ಹೊನ್ನ ಹೊಸ್ತಿಲಕ್ಕೆ ಕಾಲಿಡಲಿ ಎಂಬ ತುಂಬು ಹೃದಯದ ಹಾರೈಕೆ.

ಬಾಳೇಶ್ವರ ಮಠ, ಲಕ್ಷ್ಮೇಶ್ವರ — **ಬಸವರಾಜ ಶಿ.**

**ಮನಮೋಹನ ಸಿಂಗ್**

ನಮ್ಮ ದೇಶಕ್ಕೆ ಒಬ್ಬ ಪ್ರಧಾನಿ ಇರುವುದು ಸರಿಯಷ್ಟೆ. ಈತ ಮಾತನಾಡುವುದು, ಕೂಗಾಡುವುದು, ಗೋಳಾಡುವುದು, ಎಲ್ಲವೂ ಪಾರದರ್ಶಕ. ಹೇಗೆಂದು ಕೇಳುತ್ತೀರೇನು ? ಈ ಮನುಷ್ಯ ಎದುರು ನಿಂತಾಗ, ಬಂದಾಗ ಎಲ್ಲವೂ ಕಾಣುತ್ತೆ. ಎಲ್ಲವೂ ಅಂದರೆ ಮೂಳೆ ಮಾಂಸವಲ್ಲ, ಕಾಣುವುದು ಹೃದಯದ ಬಳಿ, ತಲೆಯಲ್ಲಿ - ಜಾರ್ಜ್ ಬುಷ್ ಎಂಬುವನ ಚಿತ್ರ. ಹನುಮಂತ ಎದೆ ಬಿಚ್ಚಿ ಶ್ರೀರಾಮಚಂದ್ರನನ್ನು ತೋರಿಸಿದ ಹಾಗೆ ಈ ಮನುಷ್ಯ ಜಾರ್ಜ್ ಬುಷ್‌ನನ್ನು ತೋರಿಸುತ್ತಾರೆ.

ಬೆಂಗಳೂರು — **ಯು. ಎಸ್. ಶ್ರೀನಿವಾಸನ್**

**ಪ್ರೊ॥ ಜಿ. ಟಿ. ಎನ್.**

'ಹೊಸತು ಬಳಗ' ಇತ್ತೀಚೆಗೆ ನಿಧನರಾದ ಜಿ. ಟಿ. ನಾರಾಯಣರಾವ್‌ರವರಿಗೆ ಅರ್ಥವತ್ತಾಗಿ ಶ್ರದ್ಧಾಂಜಲಿ ಸಲ್ಲಿಸಿದೆ. ಪತ್ರಗಳು ವಿಭಾಗದಲ್ಲೂ ಸಹ ಡಾ॥ ಎಸ್. ಬಾಲಚಂದ್ರರಾವ್, ಬಿ. ಎಸ್. ಮಯೂರ, ವಸುಮತಿ ಉಡುಪರವರು ಅನಿಸಿಕೆ ಬರೆದಿದ್ದಾರೆ. ಜಿ. ಟಿ. ಎನ್. ರವರ ಒಂದಲ್ಲಾ ಒಂದು ಲೇಖನಗಳು ಬರುತ್ತಿವೆ. ಇದು ಅವರ ವಿಜ್ಞಾನ ಕ್ಷೇತ್ರದ ಸಾಧನೆಗೆ ಹಿಡಿದ ಕನ್ನಡಿಯಂತಿವೆ. ಅವರ ಶಿಸ್ತುಬದ್ಧ ಜೀವನ ನಡೆ-ನುಡಿ ನಿಜಕ್ಕೂ ಮೆಚ್ಚುವಂಥದ್ದು. ನಮ್ಮಂತಹ ಕಿರಿಯರಿಗೆ ಅವರು ಸದಾ ಸ್ಫೂರ್ತಿಯ ಸೆಲೆಯಾಗಿದ್ದಾರೆ.

ಮೈಸೂರು — **ಕಾಳೀಹುಂಡಿ ಕೆ. ವಿ. ಶಿವಕುಮಾರ್**

**ಪಡ್ಡೂರಿನ ಪಾಠಗಳು**

ನಿಮ್ಮಲ್ಲಿ ಪ್ರಕಟವಾಗುತ್ತಿರುವ ಶ್ರೀ ಎಸ್. ಆರ್. ವಿಜಯಶಂಕರ ಅವರ 'ಪಡ್ಡೂರಿನ ಪಾಠಗಳು' ಮೂವತ್ತು ವರ್ಷದ ಹಿಂದಿನ ಜನಜೀವನವನ್ನು ಮನೋಜ್ಞವಾಗಿ ಚಿತ್ರಿಸುತ್ತದೆ. ತಮ್ಮ ಮಕ್ಕಳನ್ನು ಅಮೆರಿಕಾ ಇತ್ಯಾದಿ ದೇಶಗಳಿಗೆ ಹಣ ಸಂಪಾದನೆಗಾಗಿ ಕಳುಹಿಸಿ 'ಮಾತೃಭೂಮಿ'ಯ ಬಗ್ಗೆ ಉದ್ದುದ್ದ ಭಾಷಣವನ್ನು ಮಾಡುವವರ ಮನೋಭಾವಕ್ಕೆ ತನ್ನಲ್ಲಿದ್ದ ಅಲ್ಪ ಸ್ವಲ್ಪ ಬಂಗಾರ ಮಾರಿ ಕೇಸು ಮಾಡಿ ತನ್ನ ಏಳು ಸೆಂಟು ಜಾಗ ಉಳಿಸಿಕೊಳ್ಳಲು ಹೆಣಗಾಡುವ ಇಬ್ಬಾಯಿ ಬ್ಯಾರಿಯ ವೃತ್ತಾಂತವು ವ್ಯಂಗ್ಯಮಿಶ್ರಿತ ಉತ್ತರವಾಗಿದೆ.

ವಿರಾಜಪೇಟೆ — **ಐ. ಆರ್. ಪ್ರಮೋದ್**

**ಆಗಸ್ಟ್ ಸಂಚಿಕೆ**

ಗ್ರಾಮೀಣ ಚಿಣ್ಣರ ಪಾಲಿನ ಬೇಸಿಗೆ ಶಿಬಿರ ವರ್ಣರಂಜಿತವಾಗಿ ಅತ್ಯಂತ ಸ್ವಾಭಾವಿಕವಾಗಿ ನೈಜವಾಗಿ ಹೊರಹೊಮ್ಮಿದೆ. ಕೆ. ಪಿ. ಸ್ವಾಮಿಯವರ ಲೇಖನಿ ಮತ್ತು ಕ್ಯಾಮರಾ ಕಣ್ಣಿನಲ್ಲಿ, ಒಳರಕ್ಷಾಪುಟವಿದೆ.




ದಶಕದ ದಾರಿಯಲ್ಲಿ ಹೆಜ್ಜೆಯಿಟ್ಟು, ವಿನೂತನವಾಗಿ ಮೂಡಿಬರುತ್ತಿರುವ ನಿಮ್ಮ ಮಾಸಿಕದ ಶೈಲಿ ನಿಜಕ್ಕೂ ವಿನೂತನ. ಒರೆಹಚ್ಚುವಂತಹ, ಚಿಂತನೆಗೆ ಎಡೆಮಾಡಿ ಕೊಡುವಂತಹ ಸಂಪಾದಕೀಯ, ಹೊಸತನವನ್ನು ಬಿಂಬಿಸುವ ಕಾವ್ಯಮಾಲೆ, ಕಥೆ, ಓದುಗರಿಗೆ ಆಕರ್ಷಣೆ ಯಾಗುವುದೆಂದರೆ ಅತಿಶಯವಲ್ಲ. ಜೊತೆಗೆ ಚಿಂತನ ಮಂಥನಕಾರಿ ಲೇಖನಗಳು. ಈ ಬಾರಿ ಮೂರ್ತಿರಾಯರ ವೈಚಾರಿಕತೆಯನ್ನು ಓದುಗರ ಮುಂದಿಡುತ್ತಾ ಡಾ॥ ಹಿ. ಶಿ. ರಾಮಚಂದ್ರೇಗೌಡರು ಮೂರ್ತಿರಾಯರ ವಾದ ''ದೇವರಿಲ್ಲವಲ್ಲ'' ಎಂಬ ತಾರ್ಕಿಕಕ್ಕಿಂತ ''ವಿಷಾದ'' ಎಂದೇ ಅರ್ಥೈಸಿರುವ ಶೈಲಿ ಅರ್ಥಪೂರ್ಣ.

ಬೆಂಗಳೂರು — **ನೆ. ಲ. ರಾಮಮೂರ್ತಿ**

**ಹಾವುಗಳ ಎಣೆಯಾಟ**

ವಸುಮತಿ ಉಡುಪ ಅವರು 'ನಾಗರ ಹಾವೇ ಹಾವಳು ಹೂವೇ...' ಪ್ರಬಂಧದಲ್ಲಿ ನಾಗರ ಹಾವು ಮತ್ತು ಕೇರೆ ಹಾವುಗಳ ಎಣೆಯಾಟ ಹಳ್ಳಿಮಂದಿಗೆ ಅಪರೂಪದ ದೃಶ್ಯವಲ್ಲ ಎಂದು ಸರಿಯಾಗೆ ಹೇಳಿದ್ದಾರೆ. ರವಿಶಂಕರ ಒಡ್ಡಂಬೆಟ್ಟು ಕನ್ಯಾನ ಅವರು ಉರಗ ತಜ್ಞರಾದ ಡಾ॥ ರವೀಂದ್ರನಾಥ ಐತಾಳ ಅವರು ನಾಗರಹಾವು ಮತ್ತು ಕೇರೆಹಾವು ಎಣೆಯಾಟ ಆಡುವುದಿಲ್ಲ ಎಂದಿದ್ದರು ಎಂದು ನೆನೆಪಿಸಿಕೊಂಡಿದ್ದಾರೆ. ನಾನೂ ಹಳ್ಳಿಯಿಂದ ಬಂದವನು. ನಾಗರಹಾವು ಕೇರೆಹಾವು ಎಣೆಯಾಡುವುದು, ಕೇರೆಹಾವುಗಳೇ ಎಣೆಯಾಡುವುದನ್ನು ಬಹಳಷ್ಟು ಸಾರಿ ನೋಡಿದ್ದೇನೆ. ಹಾಗೂ ವಿಷವಿಲ್ಲದ ಕೇರೆ ಹಾವುಗಳು ಬೆದೆಯ ಸಮಯದಲ್ಲಿ ನನ್ನನ್ನು ಅಟ್ಟಿಸಿಕೊಂಡು ಬಂದದ್ದೂ ಇದೆ.

ಬೆಂಗಳೂರು — **ಬಿಳುಮನೆ ರಾಮದಾಸ್**

ತಮ್ಮ ಕವನ, ಲೇಖನ, ಅಭಿನಂದನಾ ಗ್ರಂಥ ಮುಂತಾದವನ್ನು ಉಪೇಕ್ಷಿಸಿ ಮತ್ತು ಬೇರೆಯವರದನ್ನು ಪುರಸ್ಕರಿಸಿ 'ಹೊಸತು' ಎಲ್ಲರಿಗೂ ಸಮಾನ ಅವಕಾಶ ನೀಡುತ್ತಿಲ್ಲವೆಂದು ಮಾನ್ಯ ಓದುಗರೊಬ್ಬರು ಪತ್ರ ಬರೆದಿದ್ದಾರೆ. ಪತ್ರಿಕೆಗೆ ಅಂತಹ ಧೋರಣೆಯೇನೂ ಇಲ್ಲ. ಆಯಾ ಪ್ರಕಾರದಲ್ಲಿ ವಿಷಯಗಳ ಮಂಡನೆಯ ಆಧಾರದ ಮೇಲೆ ಪ್ರಕಟಣೆಯ ತೀರ್ಮಾನ ಕೈಗೊಳ್ಳಲಾಗುತ್ತದೆ. ಓದುಗರು ಮತ್ತು ಲೇಖಕರು ಸಹಕರಿಸಬೇಕೆಂದು ವಿನಂತಿ.

– ಸಂಪಾದಕ

**ಮೂನ್ನೂರು ರಾಮಾಯಣಗಳು**

ಎ. ಕೆ. ರಾಮಾನುಜನ್ ಅವರ ಪ್ರಬಂಧ ಓದಿ, ಕೆಲವಾರು ಹೊಸ ರಾಮಾಯಣಗಳ ಬಗ್ಗೆ ತಿಳಿದು ಖುಷಿಯಾಯ್ತು.

'ಪತ್ರಿ ರಾಮಾಯಣ' ಅವರ ಗಮನಕ್ಕೆ ಬಂದಿತ್ತೋ ಇಲ್ಲವೊ ಗೊತ್ತಿಲ್ಲ. ಅದರ ಬಗ್ಗೆ ಓದುಗರೊಂದಿಗೆ ಹಂಚಿಕೊಳ್ಳಬೇಕೆಂದು ಅನಿಸಿದ್ದರಿಂದ ಈ ಪ್ರತಿಕ್ರಿಯೆ, ಪೂರಕವಾಗಿ. ಕವಿ, ಸಂಶೋಧಕ, ವೆಂಕಟ್ರಾಜ ಪುಣಚಿತ್ತಾಯರಿಂದ ಪ್ರಚಾರಕ್ಕೆ ಬಂದ ಈ ರಾಮಾಯಣ ತುಳುಭಾಷೆಯಲ್ಲಿದೆ. ಅದರಲ್ಲಿ ಬರುವ ಸೀತಾ ಸ್ವಯಂವರದ ಭಾಗ ಹೀಗಿದೆ (ತುಳು ಭಾಷೆಯ ಸೊಗಸು ಕನ್ನಡದಲ್ಲಿ ಅಷ್ಟಾಗಿ ಸಿಗಲಾರದು):

ಜನಕ ಋಷಿ ತಪಸ್ಸು ಮಾಡುತ್ತಿದ್ದಾಗ ಹಕ್ಕಿಯೊಂದು ಆತನ ತಲೆ ಮೇಲೆ ಹಿಕ್ಕೆ ಹಾಕಿತಂತೆ (...''ತೆರೆಕು ಉರ್ಚಿಂಡಗೆ'' – ಎನ್ನುವುದು ಮೂಲ ಪಾಠ). ಜನಕ ಋಷಿಗೆ ಕೋಪ ಬಂದು, ಯಾರು ಆ ಹಕ್ಕಿಯನ್ನು ಕೊಂದು ತನ್ನ ಮನೆ ಬಾಗಿಲಿಗೆ ತೋರಣ ಕಟ್ಟುತ್ತಾನೊ ಅವನಿಗೆ ತನ್ನ ಮಗಳನ್ನು ಧಾರೆ ಎರೆದು ಕೊಡುತ್ತೇನೆ ಎಂದು ಪ್ರತಿಜ್ಞೆ ಮಾಡುತ್ತಾನೆ. ರಾಮನ ಅಪ್ಪಣೆಯಂತೆ ಲಕ್ಷ್ಮಣ ಹೋಗಿ ಆ ಹಕ್ಕಿಯನ್ನು ಕೊಂದುಕೊಡುತ್ತಾನೆ. ಪ್ರತಿಜ್ಞೆಯಂತೆ, ಜನಕ ಋಷಿ ಸಂತೋಷದಿಂದ ''ಸೀತೆಯನ್ನು ಮದುವೆ ಮಾಡಿಕೊ...'' ಎಂದು ಲಕ್ಷ್ಮಣನಲ್ಲಿ ಹೇಳಿದಾಗ ಆತ ಒಪ್ಪದೆ, ತಾನು ಅಣ್ಣ ಶ್ರೀರಾಮನ ಆಜ್ಞಾಪಾಲಕ ಮಾತ್ರ; ಆದ್ದರಿಂದ ''ವರ'' ತಾನಲ್ಲ ಶ್ರೀರಾಮ ಎಂದಾಗ ಜನಕ ಒಪ್ಪಿ, ಸೀತೆಯನ್ನು ಲಕ್ಷ್ಮಣನೊಂದಿಗೆ ಅಯೋಧ್ಯೆಗೆ ಕಳುಹಿಸಿಕೊಡುತ್ತಾನೆ. ದಾರಿಯಲ್ಲಿ ಸೀತೆಗೆ ಆಯಾಸವಾಗಿ ಒಂದು ಮರದ

ಬುಡಕ್ಕೆ ಒರಗಿಕೊಳ್ಳುತ್ತಾಳೆ. ಕುಳಿತಲ್ಲೇ ನಿದ್ರೆ ಆವರಿಸುತ್ತದೆ. ಬೀಸುತ್ತಿರುವ ಗಾಳಿಗೆ ಸೀತೆಯ ಸೆರಗು ಜಾರುತ್ತದೆ. ಕಾವಲು ನಿಂತ ಲಕ್ಷ್ಮಣನಿಗೆ ಸಂದಿಗ್ಧ ಪರಿಸ್ಥಿತಿ. ಸೀತೆ ಪರಸ್ತ್ರೀ, ಮುಟ್ಟುವಂತಿಲ್ಲ... ಪಕ್ಕನೆ ಬೇರೆ ಯಾರಾದರೂ ಸೀತೆಯನ್ನು ಈ ಪರಿಸ್ಥಿತಿಯಲ್ಲಿ ಕಂಡರೆ ಅವಮಾನ... ಏನು ಮಾಡಬೇಕು... ಕೊನೆಗೆ ಲಕ್ಷ್ಮಣ ಒಂದು ತೀರ್ಮಾನಕ್ಕೆ ಬರುತ್ತಾನೆ : 'ಸ್ತ್ರೀಯ ಎದೆಯನ್ನು ಮುಟ್ಟುವ ಹಕ್ಕು ಇರುವುದು ಇಬ್ಬರಿಗೆ ಮಾತ್ರ. ಒಂದು ಗಂಡನಿಗೆ, ಇನ್ನೊಂದು ಮಗನಿಗೆ'. ಗಂಡನಂತೂ ಶ್ರೀರಾಮ ತಾನು ... ತಾನು ಸೀತೆಯ ಮಗ ಎಂದುಕೊಂಡು ಲಕ್ಷ್ಮಣ ಸೆರಗನ್ನು ಬಾಯಲ್ಲಿ ಕಚ್ಚಿ ಹಿಡಿದು ಸರಿಪಡಿಸುತ್ತಾನೆ... ಕತೆ ಹೀಗೆ ಸಾಗುತ್ತದೆ.

ಅತ್ಯಂತ 'ಸಹಜ'ವಾಗಿ ಬದುಕಿದ, ಮೈಮೇಲೆ ಲಂಗೋಟಿ ಬಿಟ್ಟು ಬೇರೇನೂ ಇಲ್ಲದಿದ್ದ ದಲಿತ ಪಂಗಡದ 'ಪಕ್ರಿ'ಯ ಪ್ರಾಕೃತಿಕ ಜ್ಞಾನ ಸಂಪತ್ತು ಅಗಣಿತ. ಅವನೊಬ್ಬ ಅದ್ಭುತ ವೈದ್ಯ. ನೂರು ವರ್ಷಗಳಿಗೂ ಮಿಕ್ಕಿ ಬದುಕಿದ್ದ 'ಪಕ್ರಿ' ಎಷ್ಟು ಮುಗ್ಧ ಎಂದರೆ - ಆತನ ಫೋಟೋ ತೆಗೆಯ ಹೊರಟಾಗ – ''ನಾನೇ ಇರುವಾಗ ಮತ್ತೆ ನನ್ನ ಫೋಟೋ ಯಾಕೆ ?'' ಎಂದು ಕೇಳಿದಾತ. ಪ್ರಕೃತಿಗೆ ತೀರಾ ಹತ್ತಿರವಾಗಿ ಬದುಕಿದ 'ಪಕ್ರಿ'ಯ ರಾಮಾಯಣ ಕೇಳಿ ಥ್ರಿಲ್ ಆದದ್ದು ಮಾತ್ರ ಅಲ್ಲ ಗಂಟಲು ಕಟ್ಟಿದ್ದೂ ಹೌದು.

ವಿಟ್ಲ, ದ.ಕ. **ಮೂರ್ತಿ ದೇರಾಜೆ**

ಮಹರ್ಷಿ ವಾಲ್ಮೀಕಿ ಸಂಸ್ಕೃತದಲ್ಲಿ ರಚಿಸಿದ ರಾಮಾಯಣ ಮಹಾಕಾವ್ಯವೇ ನಮ್ಮ ಹಿಂದಿ, ತಮಿಳು ಮೊದಲಾದ ಭಾಷೆಗಳೇ ಅಲ್ಲದೆ ಏಷ್ಯಾ ವಲಯದ ಟಿಬೆಟ್, ಥಾಯ್ಲೆಂಡ್, ಕಾಂಬೋಡಿಯ, ಬರ್ಮ ಮುಂತಾದ ರಾಷ್ಟ್ರಗಳ ಭಾಷೆಗಳವರ ಸ್ಥಳೀಯ ನಂಬಿಕೆ, ಸಂಸ್ಕೃತಿ, ಸಾಹಿತ್ಯ, ಭಕ್ತಿ-ಭಾವಗಳು ಮತ್ತು ದೃಷ್ಟಿಕೋನಗಳ ಹಿನ್ನೆಲೆಯಲ್ಲಿ ರಚಿತವಾಗಿವೆ. ಎ. ಕೆ. ರಾಮಾನುಜನ್ ಅವರ ಓದಿನ ಆಳ, ವಿಸ್ತಾರ, ವಿದ್ವತ್‌ಗಳು ಅವರ ಪ್ರಬಂಧದಲ್ಲಿ ಅತ್ಯುತ್ತಮವಾಗಿ ಮೂಡಿಬಂದಿವೆ. ಆದರೂ ಅವರ ಜೀವಿತಾವಧಿಯಲ್ಲಿ ಕನ್ನಡದಲ್ಲಿ ಪ್ರಕಟವಾದ ಕುವೆಂಪು ಅವರ ಮಹಾಕಾವ್ಯ 'ಶ್ರೀ ರಾಮಾಯಣ ದರ್ಶನಂ' (೧೯೪೯), ರಾಮಾನುಜನ್ ಅವರ ಗಮನ ಸೆಳೆದಿರಲಿಲ್ಲವೇ ಎಂಬ ಅನುಮಾನ ಉಂಟಾಗುವುದು ಸಹಜ. 'ಶ್ರೀ ರಾಮಾಯಣ ದರ್ಶನಂ' ಪ್ರಕಟವಾದ ಸುಮಾರು ೩೫ ವರ್ಷಗಳ ಅವಧಿಯ ನಂತರ 'ತ್ರೀ ಹಂಡ್ರೆಡ್ ರಾಮಾಯಣಾಸ್' ಮಹಾ ಪ್ರಬಂಧ ಪ್ರಕಟವಾಯಿತು (೧೯೮೫). ಆದರೂ ಶ್ರೀ ರಾಮಾಯಣ ದರ್ಶನಂ ರಾಮಾನುಜನ್ ಅವರ ಗಮನಕ್ಕೆ ಹೇಗೆ ಬರಲಿಲ್ಲವೋ ಎಂಬ ಅನುಮಾನ ಉಳಿದಿದೆ. ಮೂಲ ವಾಲ್ಮೀಕಿ ರಾಮಾಯಣ ಹಾಗೂ ಅನಂತರ ಪ್ರಕಟವಾದ ನೂರಾರು ರಾಮಾಯಣಗಳಲ್ಲಿ ವ್ಯಕ್ತವಾದ ಅಭಿಪ್ರಾಯಗಳಿಗೆ ವ್ಯತಿರಿಕ್ತವೆನ್ನಬಹುದಾದ, ಆಧುನಿಕ ದೃಷ್ಟಿಕೋನಗಳಿಗೆ ಹತ್ತಿರವಾದ ಹೆಚ್ಚಿನ ತಿರುವುಗಳನ್ನು 'ಶ್ರೀ ರಾಮಾಯಣ ದರ್ಶನಂ'ನಲ್ಲಿ ನೋಡಬಹುದು.

ಶಿವಮೊಗ್ಗ **ಡಾ|| ಎಚ್. ಡಿ. ಚಂದ್ರಪ್ಪಗೌಡ**

ರಾಮಾಯಣ ಕುರಿತು ರಾಮಾನುಜನ್ ಅವರ ಲೇಖನ ತಾವು ಪ್ರಕಟಿಸಿರುವುದು ಅತ್ಯಂತ ಶ್ಲಾಘನೀಯ. ಅದಕ್ಕೇನಾದರೂ ವಿರೋಧವಿದ್ದರೆ ಅದು ಕೇವಲ ಸ್ವಲಾಭಕ್ಕಾಗಿಯೇ ಹೊರತು ಭಾರತೀಯ ಸಂಸ್ಕೃತಿಯನ್ನು ಅರಿಯಬೇಕೆಂದಲ್ಲ, ಉಳಿಸಬೇಕೆಂದೂ ಅಲ್ಲ.

ಸೇಡಂ **ಬಿ. ಆರ್. ಅಣ್ಣಾಸಾಗರ್**

### ದೇವರು, ಧರ್ಮ ನಿರಾಕರಿಸಿದ ಐನ್‌ಸ್ಟೈನ್

ಅಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) ಭೌತಶಾಸ್ತ್ರದಲ್ಲಿ ದೊಡ್ಡ ಹೆಸರು. ಆತನಿಗೆ ೧೯೨೧ರಲ್ಲಿ ನೊಬೆಲ್ ಪ್ರಶಸ್ತಿ ಲಭಿಸಿತು. ಆತನ 'ಸೈನ್ಸ್ ಅಂಡ್ ರಿಲಿಜನ್' ಎಂಬ ಪ್ರಬಂಧ ಪ್ರಸಿದ್ಧವಿದೆ. ಅದರಲ್ಲಿ ಆತ 'ವಿಜ್ಞಾನವಿಲ್ಲದ ಧರ್ಮ ಕುಂಟು, ಧರ್ಮವಿಲ್ಲದ ವಿಜ್ಞಾನ ಕುರುಡು' ಎಂದು ಹೇಳಿದ್ದಾನೆ. ಇದನ್ನು ಪ್ರಪಂಚದ ಎಲ್ಲಾ ಮತದ ಮುಖಂಡರುಗಳು, ಅಧ್ಯಾತ್ಮವಾದಿಗಳು, ವಿಜ್ಞಾನಿಗಳು, ತತ್ವಜ್ಞಾನಿಗಳು, ಸಾಹಿತಿಗಳು ಸಾಮಾನ್ಯವಾಗಿ ಉಲ್ಲೇಖಿಸುತ್ತಿದ್ದಾರೆ. ಐನ್‌ಸ್ಟೈನ್‌ನಂಥ ಮಹಾನ್ ವಿಜ್ಞಾನಿಯೇ ದೇವರು ಮತ್ತು ಧರ್ಮದಲ್ಲಿ ನಂಬಿಕೆ ಇಟ್ಟಿದ್ದ ಎಂದು ಎಲ್ಲರೂ ಹೇಳುವುದು ಪರಿಪಾಠವಾಗಿದೆ.

ಆದರೆ ಜನವರಿ ಮೂರು ೧೯೫೪ರಲ್ಲಿ ತತ್ವಜ್ಞಾನಿ ಎರಿಕ್ ಗೂಟ್‌ಕಿಂಡ್‌ಗೆ ಬರೆದ ಪತ್ರದಲ್ಲಿ ಐನ್‌ಸ್ಟೈನ್ ದೇವರು ಮತ್ತು ಧರ್ಮ ಕುರಿತು ತಳೆದಿರುವ ನಿಲುವು ಮಾನವ ಜನಾಂಗವನ್ನು ಎಚ್ಚರಿಸುವಂತಿದೆ.

ಐನ್‌ಸ್ಟೈನ್ ಹೇಳುತ್ತಾರೆ: ''ದೇವರು ಎಂಬ ಶಬ್ದ, ನನ್ನಷ್ಟಕ್ಕೆ ಹೇಳುವುದಾದರೆ, ಮಾನವ ದೌರ್ಬಲ್ಯಗಳ ಉತ್ಪನ್ನ ಹಾಗೂ ಅಭಿವ್ಯಕ್ತಿ. ಬೈಬಲ್ ಗೌರವಾರ್ಹವಾದರೂ ಅದು ಪುರಾತನ ದಂತಕತೆಗಳ ರಾಶಿ. ಇವು ಪೂರಾ ಬಾಲಿಶ ಕತೆಗಳು... ನನ್ನ ಈ ಅಭಿಪ್ರಾಯವನ್ನು ಎಷ್ಟೇ ಸೂಕ್ಷ್ಮ ವ್ಯಾಖ್ಯಾನದಿಂದಲೂ ಬದಲಾಯಿಸಲು ಸಾಧ್ಯವಿಲ್ಲ.''

ಇಸ್ರೇಲಿನ ರಾಷ್ಟ್ರಾಧ್ಯಕ್ಷರಾಗಿ ಎಂದು ಆಮಂತ್ರಣ ನೀಡಿದಾಗ ಈ ವಿಶ್ವವಿಖ್ಯಾತ ವಿಜ್ಞಾನಿ ಅದನ್ನು ನಿರಾಕರಿಸಿದ. ಅಲ್ಲದೆ ಯಹೂದಿಗಳು ತಾವು ''ದೇವರಿಂದ ಆಯ್ಕೆಗೊಂಡ ಜನಾಂಗ'' ಎಂದು ಹೇಳಿಕೊಳ್ಳುವುದನ್ನು ಸಹ ಆತ ಒಪ್ಪಲಿಲ್ಲ: ''ಯಹೂದಿ ಧರ್ಮ, ನನ್ನ ಮಟ್ಟಿಗೆ ಹೇಳುವುದಾದರೆ, ಎಲ್ಲಾ ಧರ್ಮಗಳ ಹಾಗೆ, ಅತ್ಯಂತ ಶಿಶುಸಹಜ ಮೂಢನಂಬಿಕೆಗಳ ಅವತರಣ. ನಾನು ಯಹೂದಿ ಜನಾಂಗಕ್ಕೆ ಸೇರಿದವನೆಂದೂ ಅವರ ಮನೋಭಾವದೊಂದಿಗೆ ಗಾಢ ಸಂಬಂಧವುಳ್ಳವನೆಂದೂ ಹೇಳಲು ಸಂತೋಷಪಡುತ್ತೇನೆ. ಅವರು ಇತರ ಎಲ್ಲಾ ಜನಾಂಗಗಳಿಗಿಂತ ಭಿನ್ನಗುಣದವರೆಂದು ನಾನು ಹೇಳಲಾರೆ'' ಎಂದು ಮುಂದುವರಿದು, ''ಅಧಿಕಾರಹೀನರಾಗಿ ಅತ್ಯಂತ ಕೆಟ್ಟ ಕೆಡುಕುಗಳಿಂದ ಅವರು ರಕ್ಷಿತರಾಗಿದ್ದರೂ, ನನ್ನ ಅನುಭವದಲ್ಲಿ ಅವರು ಭಗವಂತನಿಂದ ಆಯ್ಕೆಯಾದ ಜನಾಂಗ ಎಂದು ನನಗೆ ಕಾಣಿಸುವುದಿಲ್ಲ'' ಎಂದಿರುವುದು ಗಮನೀಯ.

ಮೈಸೂರು **ಡಾ|| ಕೆ. ಎಸ್. ಭಗವಾನ್**

---

## ಹೀಗೊಂದು ಟಿಪ್ಪಣಿ

## ನಾಳೆ ನಾನೂ ಮಾಯ !

**ಭಾ**ರತೀಯ ಜನಕಲಾ ಸಮಿತಿ (ಇಪ್ಟಾ) ಮತ್ತು ಇತರ ಪುರೋಗಾಮಿ ಕಲಾಸಂಘಗಳು ಹಾಡುವ ಗೀತೆಗಳಲ್ಲಿ ಒಂದು ''ನಾಳೆ ನಾನೂ ಮಾಯ !'' ಎಂಬುದು. ಬಹುರಾಷ್ಟ್ರೀಯ ಕಂಪನಿಗಳ ಪ್ರಭಾವದಿಂದಾಗಿ ನಮ್ಮೆಲ್ಲ ಸರಕುಗಳು ಮತ್ತು ಸಂಸ್ಕೃತಿ ನಷ್ಟವಾಗಿ, ಕಡೆಗೆ ''ನಾಳೆ ನಾನೂ ಮಾಯ''ವಾಗಿಬಿಡುವ ಅಪಾಯವಿದೆ ಎಂಬುದು ಅದರ ಇಂಗಿತ. ಕೆಲವೇ ದಿನಗಳಲ್ಲಿ ಇಲ್ಲವೇ ವರ್ಷಗಳಲ್ಲಿ ಇದು ಭೌತಿಕವಾಗಿ ಘಟಿಸಬಹುದಾದಂತಹ ಸಂಗತಿಯೆಂದು ಕೆಲವು ವೈಜ್ಞಾನಿಕ ಸಂಶೋಧನೆಗಳು ತಿಳಿಸುತ್ತವೆಂದು ಇತ್ತೀಚೆಗೆ ವರದಿಯಾಗಿತ್ತು. ಅದರ ಪ್ರಕಾರ ಯಾವುದೋ ರಾಸಾಯನಿಕ ಕ್ರಿಯೆಯಿಂದ ವ್ಯಕ್ತಿ ಅಥವಾ ಪದಾರ್ಥವನ್ನು ಅದೃಶ್ಯವಾಗಿಸಬಹುದೆಂದು ಹೇಳಲಾಗಿದೆ. ವ್ಯಕ್ತಿ ಅಥವಾ ಪದಾರ್ಥ ಇಲ್ಲವಾಗುವುದಿಲ್ಲ, ಆದರೆ ಅವು ಕಾಣದಂತೆ ಒಂದು ಮುಸುಕು ಆವರಿಸುತ್ತದೆ. ಅವು ಮಾಯವಾಗಿ ಹೋಗಿಬಿಟ್ಟವೆಂದು ಭಾಸವಾಗುತ್ತದೆ. ಇದು ಪ್ರಾಯೋಗಿಕವಾಗಿ ಸಾಧ್ಯವಾದಾಗ ನಮ್ಮ ಕೆಲವು ಪಂಡಿತರಿಗೆ ವಿದ್ವತ್ಪ್ರದರ್ಶನಕ್ಕೆ ಸುಗ್ಗಿ: ಏಕೆಂದರೆ, ಇದೆಲ್ಲಾ ಭಾರತೀಯ ಪುರಾಣಗಳಲ್ಲಿ ಹಿಂದೆಯೇ ದಾಖಲಾಗಿಬಿಟ್ಟಿದೆ; ನಾರದನಾಗಲಿ, ವಿಷ್ಣುವಿನ ಬೇರೆಬೇರೆ ರೂಪಗಳಾಗಲಿ, ಅಂತರ್ಧಾನವಾಗುವುದರಲ್ಲಿ ನಿಸ್ಸೀಮರು; ಅಂದರೆ, ಅವರು ರಾಸಾಯನಿಕ ಸಂಶೋಧನಾ ನಿಪುಣರಾಗಿ ಸ್ವಯಂ ತಾವೇ ಮಾಯವಾಗಿಬಿಡುತ್ತಿದ್ದರು – ಇತ್ಯಾದಿಯಾಗಿ ವಿದ್ಯಾಪೀಠ, ರಾಮಚಂದ್ರಾಪುರ ಮಠ, ಮುಂತಾದೆಡೆ ಭಾಷಣಗಳನ್ನು ಬಿಗಿಯಬಹುದು. ಪರಿಸರವಾದ, ಪರಮಾಣು ವಿಜ್ಞಾನ, ಚಂದ್ರಯಾನ, ಕ್ವಾಂಟಮ್ ಸಿದ್ಧಾಂತ, ಮುಂತಾದುವನ್ನು ಪ್ರಾಚೀನ ವಿಜ್ಞಾನಶಾಖೆಗಳಿಗೆ ಆರೋಪಿಸಿದ್ದ ಪಂಡಿತರಿಗೆ ಈಗ ಬೇರೆ ಬಗೆಯ ''ಮಾಯಾ ಸಿದ್ಧಾಂತ''ವೂ ದೊರೆತಂತಾಯಿತು. (ಶಂಕರಾಚಾರ್ಯ ಪ್ರಣೀತ ಮಾಯಾ ಸಿದ್ಧಾಂತವೇ ಬೇರೆ ಎನ್ನುತ್ತಾರೋ, ಅದೂ ಇದೇ ಎನ್ನುತ್ತಾರೋ, ಕಾದು ನೋಡಬೇಕು.) ಇವರನ್ನು ''ಪುನರುತ್ಥಾನವಾದಿಗಳು'' ಎನ್ನಬಹುದು. ಅವರಿಗೆ ಒಂದು ಪ್ರಶ್ನೆ ಇದೆ: ''ಸ್ವಾಮಿ, ಆಚಾರ್ಯರೆ, ನಿಮ್ಮ ಪೂರ್ವಜರು ಮಾಡಿದ್ದುದನ್ನು, ತಿಳಿದಿದ್ದುದನ್ನು, ನೀವೇಕೆ ಮಾಡುವುದಿಲ್ಲ, ತಿಳಿಯುವುದಿಲ್ಲ?'' ಅವರ ಉತ್ತರ ಇದು: ''ಅವರೆಲ್ಲಾ ಋಷಿಗಳು. ಸರ್ವಜ್ಞತ್ವವು ಧ್ಯಾನದಿಂದಲೇ ಅವರಿಗೆ ಸಿದ್ಧಿಸಿತ್ತು.'' ನಮ್ಮ ಋಷಿಗಳೆಲ್ಲಾ (ನಮ್ಮ ಯುವಕ-ಯುವತಿಯರಂತೆ) ಅಮೆರಿಕಾಕ್ಕೆ ಪಲಾಯನ ಮಾಡಿಬಿಟ್ಟಿದ್ದಾರೆಂದು ಇದರರ್ಥ. ಋಷಿಗಳಿಗೆ ಅಷ್ಟೂ ''ದೇಶಭಕ್ತಿ'' ಇಲ್ಲವಾಯಿತೆ !

ಈ ತಿಂಗಳು (೩ನೇ ಪುಟದಿಂದ)

ಭಾರತದ ಕಮ್ಯುನಿಸ್ಟ್ ಚಳುವಳಿಗೆ ವಿಶಿಷ್ಟ ಸಾರಥ್ಯ ನೀಡಿದ್ದ ಶ್ರೀ ಹರಿಕಿಶನ್ ಸಿಂಗ್ ಸುರ್ಜೀತ್ ಅವರು ತೀರಿಕೊಂಡದ್ದು ದುಃಖದ ಸಂಗತಿ. ಅವರಿಗೆ 'ಹೊಸತು' ತನ್ನ ಗೌರವಪೂರ್ವಕ ನಮನಗಳನ್ನು ಸಲ್ಲಿಸುತ್ತದೆ. ಒಬ್ಬೊಬ್ಬ ಹಿರಿಯ ಕಮ್ಯುನಿಸ್ಟ್ ನಾಯಕರು ಗತಿಸಿದಾಗಲೂ ನಮ್ಮ ಮುಂದೆ ನಿಲ್ಲುವುದು ಎರಡಂಶಗಳು: ಒಂದು, ತಮ್ಮ ಚಾರಿತ್ರಿಕ ಸನ್ನಿವೇಶಗಳಲ್ಲಿ ಇವರೆಲ್ಲಾ ಹೇಗೆ ಅಪ್ರತಿಮ ಸಾಹಸ ಮೆರೆದರು, ಸಂಘಟಿತ ಹೋರಾಟ ರೂಪಿಸಿದರು, ದೇಶದ ಐಕ್ಯತೆ ಮತ್ತು ಸಮಾನತೆಗಾಗಿ ಸೆಣಸಿದರು, ಎಂಬುದು; ಎರಡು, ದೇಶ ಮತ್ತು ಜನರ ಸ್ವಾತಂತ್ರ್ಯ ಹಾಗೂ ಏಳಿಗೆಯ ದೃಷ್ಟಿಯಿಂದ ಇಂದಿನ ಕಾಲಘಟ್ಟದ ಸವಾಲುಗಳನ್ನು ಎದುರಿಸುವುದು ಹೇಗೆ ಎಂಬುದು. ಮೊದಲನೆಯದು ಸ್ಫೂರ್ತಿಯನ್ನು ನೀಡುವ ಸೆಲೆ; ಎರಡನೆಯದು ಸೈದ್ಧಾಂತಿಕ ತಿಳುವಳಿಕೆ ಮತ್ತು ಕ್ರಿಯೆಯ ವಿಷಯಕ್ಕೆ ಸಂಬಂಧಿಸಿದ್ದು. ಮಾರ್ಕ್ಸ್‌ವಾದದ ಸಿದ್ಧಾಂತವನ್ನು ಕೈಬಿಡದೆ ಐಕ್ಯ ಹೋರಾಟ ನಡೆಸಬೇಕಾದ್ದು ಕಮ್ಯುನಿಸ್ಟರ ಕರ್ತವ್ಯ. ಅದನ್ನು ನಿರ್ವಹಿಸಲು ಕಾಮ್ರೇಡ್ ಸುರ್ಜೀತ್ ಅಂಥವರು ಹೇಗೆ ಮಾರ್ಗದರ್ಶನ ನೀಡಿದ್ದಾರೆ ಮತ್ತು ಇಂದಿನ ಅಗತ್ಯಗಳಿಗೆ ಅದನ್ನು ಅನ್ವಯಿಸಿಕೊಳ್ಳುವುದು ಹೇಗೆ ಎಂಬುದರ ಮಂಥನವು ಸುರ್ಜೀತ್ ಅವರಿಗೆ ನಾವು ಸಲ್ಲಿಸಬೇಕಾದ ಗೌರವ.

* * *

ಕಾಶ್ಮೀರಕ್ಕಿಂತ ಕರ್ನಾಟಕ ಕಮ್ಮಿಯಲ್ಲ ಎಂಬುದನ್ನು ತೋರಿಸಲೆಂದೋ ಏನೋ ಮಾನ್ಯ ಯಡಿಯೂರಪ್ಪನವರ ಸರ್ಕಾರವು ಅಮರನಾಥ ಸಂಘರ್ಷ ಸಮಿತಿಯ ರೀತಿಯಲ್ಲಿ ಗೋಕರ್ಣ ಸಮಿತಿಯು ರಚಿತವಾಗಬೇಕೆಂದು ಉದ್ದೇಶಿಸಿದಂತಿದೆ. ಮಠಗಳು, ಸ್ವಾಮಿಗಳು, ಸಾಧುಗಳು ಮತ್ತು ಸ್ವಯಂಸೇವಕರೆಂದರೆ ಯಡಿಯೂರಪ್ಪನವರ ಸರ್ಕಾರಕ್ಕೆ ಗಣ ದೊರೆಗಳಲ್ಲಿರುವಷ್ಟೇ ಶ್ರದ್ಧೆ ಮತ್ತು ಭಕ್ತಿ. ಆದ್ದರಿಂದಲೇ ಆ ಎರಡು ಬಣಗಳ ಆಶಯಗಳನ್ನು ಮಾನ್ಯಮಾಡುವುದು ಅವರಿಗೆ ಪ್ರಧಾನವಾದ ಜವಾಬ್ದಾರಿ. ಲಾಗಾಯ್ತಿನಿಂದ ರೂಢಿಯಲ್ಲಿದ್ದುದನ್ನು ಹಠಾತ್ತನೆ ಬದಲಾಯಿಸಬೇಕಾದ ತುರ್ತೇನೂ ಇಲ್ಲದಿದ್ದಾಗ್ಯೂ, ಗೋಕರ್ಣ ಕ್ಷೇತ್ರವನ್ನು ರಾಮಚಂದ್ರಾಪುರ ಮಠಕ್ಕೆ ಹಸ್ತಾಂತರ ಮಾಡಿದ್ದು ಸರ್ವಥಾ ಅಸಮರ್ಥನೀಯ. ಹಲವು ದಶಕಗಳಿಂದ ಯಾತ್ರಿಗಳು ಅಮರನಾಥನನ್ನು ನೋಡಲು ಹೋಗಿಬರುತ್ತಿದ್ದರು. ಅವರಿಗೆ ಸೌಲಭ್ಯ ಕಲ್ಪಿಸಲು ಸಮಿತಿಯೊಂದನ್ನು ರಚಿಸಿ ಅದಕ್ಕೆ ಭೂಮಿ ಕೊಡಬೇಕಾದ ಅವಶ್ಯಕತೆ ಇರಲಿಲ್ಲ. ಈವರೆಗೆ ನಡೆದಂತೆ ಅದು ಮುಂದುವರಿಯಬಹುದಿತ್ತು. ಅದನ್ನು ಬದಲಾಯಿಸಲು ಹೋಗಿ ಭೀಕರವಾದ ಕೋಮು ದಳ್ಳುರಿಗೆ ಜಮ್ಮು-ಕಾಶ್ಮೀರಗಳನ್ನು ತಳ್ಳಿದ್ದಾಯಿತು. ಅಲ್ಲಿ ಸಿನ್ಹಾ ತೀರ್ಮಾನ, ಇಲ್ಲಿ ಯಡಿಯೂರಪ್ಪನವರ ತೀರ್ಮಾನ. ಕರ್ನಾಟಕವನ್ನು ಗುಜರಾತನ್ನಾಗಿ ಮಾಡುವುದಾಗಿ ಪ್ರಕಟಿಸಿದ್ದ ಪಕ್ಷದ ನಾಯಕರಾಗಿ ಯಡಿಯೂರಪ್ಪನವರು ಸದ್ಯಕ್ಕೆ ಗೋಕರ್ಣವನ್ನು ಕಾಶ್ಮೀರ ಮಾಡಲು ಹೊರಟಿದ್ದಾರೆ! ಸಾರ್ವಜನಿಕರಿಗೆ ಮುಕ್ತವಾಗಿದ್ದುದನ್ನು ಈಗ ಒಂದು ಮಠಕ್ಕೆ ನೀಡಿ ನಿರ್ಬಂಧಗಳನ್ನು ಹೇರುವ ಪ್ರಕ್ರಿಯೆಗೆ ಚಾಲನೆ ನೀಡಿದಂತಾಗಿದೆ. ಅರುಣ್ ಶೌರಿ ಕಾರ್ಖಾನೆಗಳನ್ನು ಖಾಸಗಿಯವರಿಗೆ ಪುಡಿಕಾಸಿಗೆ ಮಾರಿ ದ್ರೋಹ ಬಗೆದಿದ್ದು ಜನಮಾನಸದಿಂದ ಅಳಿಸಿಹೋಗಿಲ್ಲ. ಈಗ ಯಡಿಯೂರಪ್ಪನವರು ಗೋಕರ್ಣವನ್ನು ಪುಕ್ಕಟೆಯಾಗಿ ದಾನ ಮಾಡಿ ಕೀರ್ತಿ ಭಾಜನರಾಗಲು ಆಶಿಸಿದ್ದಾರೆ. ಅವರಿಗೆ ಲಭಿಸುವುದು ಕೀರ್ತಿಯಲ್ಲ, ಕೇವಲ ಕಿತಾಪತಿ ಶೂರ ಎಂಬ ಹೆಸರು, ಅಷ್ಟೆ. ಅವರ ತೀರ್ಮಾನವನ್ನು ಹಿಂದಕ್ಕೆ ಪಡೆದು ಪೂರ್ವಸ್ಥಿತಿಯನ್ನು ಮನ್ನಿಸಬೇಕಾದ್ದು ಅವರ ಪದವಿಗೆ ತಕ್ಕುದಾದ ಲಕ್ಷಣ. ಮೈಸೂರಿನ ''ಮಹಾರಾಜ'' ಈಗಾಗಲೇ ಮಧ್ಯಪ್ರವೇಶ ಮಾಡಿ, ಹಿಂದೆ ಅವರ ಮನೆತನದ ಸುಬರ್ದಿನಲ್ಲಿದ್ದ ದೇವಸ್ಥಾನಗಳನ್ನು ಅವರಿಗೆ ಹಿಂದಿರುಗಿಸಬೇಕೆಂಬ ಬೇಡಿಕೆಯನ್ನು ಮುಂದಿಟ್ಟಿರುವುದನ್ನು ಸಹ ತಳ್ಳಿಹಾಕಬೇಕು. ಅಮರನಾಥನಿಗೆ ಕಾಶ್ಮೀರದಲ್ಲಿ ಗಲಭೆ ರುಚಿಸುವುದಿಲ್ಲ; ಅಂತೆಯೇ ಕರ್ನಾಟಕದಲ್ಲಿ ಗೋಕರ್ಣಕ್ಕೆ. ಗೌರೀಶ ಕಾಯ್ಕಿಣಿಯವರಂತಹವರಿದ್ದ ಊರು ಶಾಂತಿ, ಸಮಾನತೆ ಮತ್ತು ಸೌಹಾರ್ದಗಳ ಸಂಕೇತವಾಗಬೇಕೇ ವಿನಾ ಮಠದ ಮೌಢ್ಯದ ತಾಣವಾಗಕೂಡದು.

* * *

ಕಳೆದ ತಿಂಗಳು ಲೋಕಸಭೆಯಲ್ಲಿ ಎಡಪಕ್ಷಗಳು ಭಾರತೀಯ ಜನತಾ ಪಕ್ಷದ ಜೊತೆ ಸರ್ಕಾರದ ವಿರುದ್ಧ ಮತ ಚಲಾಯಿಸಿದ್ದು ತಪ್ಪು, ಅದು ಕೋಮುವಾದವನ್ನು ಬೆಂಬಲಿಸುವ ಕ್ರಮ, ಇತ್ಯಾದಿ ಹೇಳಿಕೆಗಳು ಬಂದಿವೆ; ವಿಶೇಷತಃ ಕಾಂಗ್ರೆಸ್ ವಲಯದಿಂದ. ಪರ್ಯಾಯ ರಂಗ ರಚಿಸುವ ಆಕಾಂಕ್ಷೆಯು ಎರಡೇ ಪಕ್ಷಗಳಿರುವ ಸಂದರ್ಭದಲ್ಲಿ ಅಸಂಭವ. ಮೂರನೆಯ ಪಕ್ಷವೊಂದಿದ್ದಾಗ ಅನಿವಾರ್ಯವಾಗಿ ಇನ್ನೆರಡು ಪಕ್ಷಗಳನ್ನು ಇಲ್ಲವೇ ಅವುಗಳ ಪೈಕಿ ಯಾವುದಾದರೂ ಒಂದನ್ನು ವಿರೋಧಿಸುವುದು ಸಹಜ. ಅದು ''ಯಾರ ಜೊತೆಯಲ್ಲಿ'' ಎಂಬುದಕ್ಕಿಂತ ''ಯಾವುದರ ವಿರುದ್ಧವಾಗಿ'' ಎಂಬುದು ಪ್ರಮುಖವಾದ ವಿಷಯ. ಅಷ್ಟೇ ತೀವ್ರವಾಗಿ ಭಾರತೀಯ ಜನತಾ ಪಕ್ಷವನ್ನು ವಿರೋಧಿಸಲು ನಾಳೆ ಎಡಪಕ್ಷಗಳೂ ಕಾಂಗ್ರೆಸ್ ''ಜೊತೆ'' ಮತ ಚಲಾಯಿಸಕೂಡದೆ ? ರಕ್ಷಣಾ ಸಚಿವ ಎ.ಕೆ. ಆಂಟೋನಿ ಇದಕ್ಕೆ ಉತ್ತರ ನೀಡಬೇಕಾಗಿದೆ. ಅದಕ್ಕಿಂತಲೂ ಮುಂಚೆ, ತಮ್ಮ ಪಕ್ಷವು ಅದ್ವಾನಿ ಪಕ್ಷಕ್ಕಿಂತಲೂ ಭಿನ್ನ ಎಂಬುದನ್ನು ಆಂಟೋನಿ ಸಾಬೀತು ಮಾಡಬೇಕಾಗುತ್ತದೆ. ಅವರು ಆ ನಿಟ್ಟಿನಲ್ಲಿ ಕೆಲಸ ಮಾಡುವುದು ಉಪಯುಕ್ತವಾದೀತು. ಬಹುಮತ ಪಡೆಯಲು ಅಂದು ಕಾಂಗ್ರೆಸ್ ವ್ಯಾಪಾರವನ್ನು ಕುದುರಿಸಿಕೊಂಡಿತು. ಈಗ ಶಿಬು ಸೋರೆನ್ ಅದಕ್ಕೆ ಚಕ್ರಬಡ್ಡಿ ಸಮೇತ ಮುಖ್ಯಮಂತ್ರಿ ಪದವಿಗಾಗಿ ಹಠಹಿಡಿದು ಜಾರ್ಖಂಡ್ ಸರ್ಕಾರವನ್ನು ಉರುಳಿಸುವ ತಯಾರಿ ನಡೆಸಿದ್ದಾರೆ. ಈಗ ಹೇಗೆ ತಕ್ಕಡಿ ತೂಗಿಸುತ್ತಾರೋ ಕಾದುನೋಡಬೇಕು. ನಮ್ಮ ರಾಜ್ಯದಲ್ಲಿ ಗಣಿಪತಿಗಳ ಅಧಿಕಾರ, ಕೇಂದ್ರದಲ್ಲಿ ಖಿಚಡಿ ಪತಿಗಳ ಅಧಿಕಾರ !

* * *

ಜುಲೈ ೨೧ರಂದು ಶ್ರೀ ಎ. ಟಿ. ಬಾಬು ಅವರ ಕೊಲೆಯಾಯಿತು. ಅವರನ್ನು 'ಹೊಸತು' ಆತ್ಮೀಯವಾಗಿ ನೆನೆಯುತ್ತದೆ. ಅವರು ಪಾನವಿರೋಧಿ ಚಳುವಳಿಯಲ್ಲಿ ವಿಶೇಷವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಆದರೆ ಬೇರೆ ಪ್ರಜಾಪ್ರಭುತ್ವವಾದಿ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವರೆಂದೂ ವಿಮುಖಿಗಳಾಗಿರಲಿಲ್ಲ. ೧೯೭೦ರ ದಶಕದಲ್ಲಿ ಬೆಂಗಳೂರಿನಲ್ಲಿ ಬಸವರಾಜು ಎಂಬುವವರೊಬ್ಬರಿದ್ದರು. ಎಲ್ಲ ವಿಚಾರವಾದಿ ಕಾರ್ಯಕ್ರಮಗಳಲ್ಲಿ ಅವರು ಭಾಗವಹಿಸುತ್ತಿದ್ದರು. ಅವರೂ ಒಂದು ದಿನ ಎ.ಟಿ.ಬಾಬು ಅವರಂತೆ ಕೊಲೆಗೀಡಾದರು. ಕೊಂದ ಕೇಡಿಗಳು ಅವರ ಶರೀರವನ್ನು ರೈಲ್ವೆ ಹಳಿಗಳ ಬಳಿ ಬಿಸಾಡಿದ್ದರು. ಸಾರಾಯಿ ಮಾರಾಟದಲ್ಲಿ ಅಳತೆಯ ಮೋಸದ ವಿರುದ್ಧ ಅವರು ಕಿಡಿಕಾರುತ್ತಿದ್ದರು. ''ಸಾರಾಯಿ ಸರಿ ಪ್ರಮಾಣದಲ್ಲಿ ನೀಡಿ'' ಎಂದು ಹೇಳಿದ್ದಕ್ಕೆ ಕತ್ತಲಲ್ಲಿ ಸಾಯಿಸಲ್ಪಟ್ಟವರು ಬಸವರಾಜು; ''ಸಾರಾಯಿ ನೀಡಲೇಕೂಡದು'' ಎಂದುದಕ್ಕಾಗಿ ಹಾಡುಹಗಲೇ ಊರ ನಡುವೆ ಸಾಯಿಸಲ್ಪಟ್ಟವರು ಬಾಬು. ಇಬ್ಬರೂ ''ಸಾರಾಯಿ ಹುತಾತ್ಮರು'', ಇಬ್ಬರೂ ಜನಪರ ಹೋರಾಟಗಳ ಬೆಂಬಲಿಗರು. ಅವರಿಬ್ಬರೂ ಸಾಯಿಸಲ್ಪಟ್ಟ ರೀತಿಯು ನಲವತ್ತು ವರ್ಷಗಳಲ್ಲಿ ನಮ್ಮ ಸಾಮಾಜಿಕ ನೀತಿ ಎಷ್ಟು ಕೆಳಕ್ಕಿಳಿದಿದೆ ಎಂಬುದರ ಸೂಚನೆ. ಅಂದು ಕೊಲೆಗಾರರು ತಲೆಮರೆಸಿಕೊಂಡಿದ್ದರು; ಇಂದು, ಸಿಕ್ಕಿಹಾಕಿಕೊಂಡರೂ ತಪ್ಪಿಸಿಕೊಳ್ಳುವ ಮಾರ್ಗ ಇದೆಯೆಂಬುದನ್ನು ತಿಳಿದುಕೊಂಡಿದ್ದಾರೆ. ಇದು ಹೆಮ್ಮೆಯ ವಿಷಯವಂತೂ ಅಲ್ಲ. ಇದನ್ನು ತಡೆಗಟ್ಟಲು ನಮ್ಮ ಇಂದಿನ ವ್ಯವಸ್ಥೆಯಲ್ಲಿ ಇಚ್ಛಾಶಕ್ತಿ ಇದೆಯೇ ಎಂಬುದು ಪ್ರಶ್ನೆ.

* * *

ಸೂರತ್‌ನಲ್ಲಿ ಬಾಂಬುಗಳನ್ನಿಟ್ಟವರು ಸ್ವದೇಶಿಗಳೋ ವಿದೇಶೀಯರೋ ಎಂಬ ಪ್ರಶ್ನೆ ಚರ್ಚೆಗೆ ಬಂದಿದೆ. ಕೆಲವು ಬಾಂಬುಗಳನ್ನು ಮರದ ಮೇಲಿರಿಸಿದ್ದುದು ಕುತೂಹಲ ಕೆರಳಿಸಿದೆ. ಪಾರ್ಲಿಮೆಂಟಿನಲ್ಲಿ ಬಹುಮತ ಪಡೆಯಲು ಕಾಂಗ್ರೆಸ್ ಹಣ ಹಂಚಿದ್ದುದನ್ನು ಜನರು ದೀರ್ಘವಾಗಿ ಚರ್ಚಿಸದಂತೆ ಮಾಡಲು ಅವರ ಗಮನವನ್ನು ಬೇರೆಡೆ ಸೆಳೆಯ ಬೇಕಾಗಿತ್ತು; ಅದಕ್ಕಾಗಿ ಸರ್ಕಾರವೇ ಬೆಂಗಳೂರು, ಅಹಮ್ಮದಾಬಾದ್ ಮತ್ತು ಸೂರತ್‌ಗಳಲ್ಲಿ ಬಾಂಬುಗಳನ್ನಿರಿಸಿ ಸಿಡಿಸಿತು, ಎಂದು ಸುಷ್ಮಾ ಸ್ವರಾಜ್ ಹೇಳಿದ್ದಾರೆ. ಅದು ಪಕ್ಷದ ಅಭಿಪ್ರಾಯವಲ್ಲವೆಂದು ಅದ್ವಾನಿ ವಿವರಣೆ ನೀಡಿದ್ದಾರೆ. ಇಂತಹ ಆಪಾದನೆಗಳನ್ನು ಸಲೀಸಾಗಿ ತಳ್ಳಿಹಾಕಬಾರದು. ಸುಷ್ಮಾ ಅವರ ಪಕ್ಷವೇ ಸೂರತ್‌ನಲ್ಲಿ ಬಾಂಬುಗಳನ್ನಿರಿಸಿತ್ತು, ಆದ್ದರಿಂದಲೇ ಅವೆಲ್ಲಾ ಸಿಡಿಯಲಿಲ್ಲ, ಸಿಡಿಯದಂತೆ ಬಾಂಬುಗಳನ್ನು ಸಂಯೋಜಿಸಲಾಗಿತ್ತು, ಇದೆಲ್ಲಾ ಮುಂದಿನ ಲೋಕಸಭಾ ಚುನಾವಣೆಯಲ್ಲಿ ಗೆಲ್ಲಲು ಸುಷ್ಮಾ ಅವರ ಪಕ್ಷದ ತಂತ್ರ, ಎಂದು ಪ್ರತಿವಾದವೊಂದು ಕೇಳಿಬಂದಿದೆ. ಮಧ್ಯಪ್ರದೇಶದ ಕಾಂಗ್ರೆಸ್‌ನ ಮಾಜಿ ಮುಖ್ಯಮಂತ್ರಿ ಇದನ್ನು ಹೇಳಿದ್ದಾರೆ. ತಮ್ಮ ಅಧಿಕಾರಾವಧಿಯಲ್ಲಿ ಆರೆಸ್ಸೆಸ್‌ನವರು ಬಾಂಬುಗಳನ್ನು ಮಾಡುತ್ತಿದ್ದ ಜಾಗಗಳನ್ನು ಪತ್ತೆಹಚ್ಚಲಾಗಿತ್ತೆಂದು ಸಹ ಅವರು ಹೇಳಿದ್ದಾರೆಂದು 'ತೆಹೆಲ್ಕಾ' ವಾರಪತ್ರಿಕೆ ವರದಿ ಮಾಡಿದೆ. ಅಂದರೆ, ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷಗಳು ದೇಶವನ್ನು ಅಗ್ನಿಪರ್ವತದ ಮೇಲೆ ಕೂರಿಸಿವೆಯೆಂದು ಇದರರ್ಥವೆ ? ಅಥವಾ ಇದು ಸುಮ್ಮನೆ ಪರಸ್ಪರರನ್ನು ದೂಷಿಸಿ ಕೀಳು ರಾಜಕೀಯ ನಡೆಸುವ ವಿಧಾನವೋ ?



# ಕೃಷಿ ಕಾರ್ಮಿಕರಿಗಾಗಿ ರೂಪಿಸಲಾಗಿರುವ ಕಾರ್ಯಕ್ರಮಗಳು ಮತ್ತು ಯೋಜನೆಗಳು

## ಅರ್ಜುನ್ ಸೇನ್‌ಗುಪ್ತ ವರದಿ

ಗ್ರಾಮೀಣ ಸಮುದಾಯಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿರುವ ಕೃಷಿ ಕಾರ್ಮಿಕರು ಮತ್ತು ಅಂಚಿನಲ್ಲಿರುವ ಹಾಗೂ ಸಣ್ಣಪುಟ್ಟ ಕಸುಬುಗಳಲ್ಲಿ ತೊಡಗಿಕೊಂಡಿರುವ ರೈತರು ತೀವ್ರ ಸಂಕಷ್ಟಗಳಿಗೆ ಗುರಿಯಾಗಿದ್ದಾರೆ. ಇತ್ತೀಚಿನ ವರ್ಷಗಳಲ್ಲಿ ಕೃಷಿ ಉತ್ಪಾದನೆಯು ಸಾಕಷ್ಟು ಇಳಿಮುಖ ಕಂಡಿದೆ ಎಂಬುದು ಅಂಕಿಅಂಶಗಳಿಂದ ಕಂಡುಬರುತ್ತದೆ. ಈ ಪ್ರಕ್ರಿಯೆಯು ೯೦ರ ದಶಕದಿಂದಲೂ ಕಡಿಮೆಯಾಗುತ್ತಲೇ ಬಂದಿರುವ ಕೃಷಿ ವೇತನದ ಮೇಲೆ ಪ್ರತಿಕೂಲವಾದ ಪರಿಣಾಮವನ್ನು ಬೀರಲಿದೆ. ಇದೇ ಸಂದರ್ಭದಲ್ಲಿ ಹೆಚ್ಚುತ್ತಿರುವ ಗೊಬ್ಬರ ಮತ್ತಿತರ ಅಗತ್ಯ ವಸ್ತುಗಳ ಬೆಲೆ ಏರಿಕೆ ಮತ್ತು ಮಾರುಕಟ್ಟೆಯ ಅನಿಶ್ಚಿತತೆಗಳಿಂದಾಗಿ ರೈತರ ಪಾಡು, ಅದರಲ್ಲೂ ಅಂಚಿನಲ್ಲಿರುವ ಮತ್ತು ಸಣ್ಣ ರೈತರ ಪಾಡು ಹೇಳತೀರದಂತಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಕೃಷಿ ಕಾರ್ಮಿಕರ ಹಿತರಕ್ಷಣೆಗಾಗಿ ಸರ್ಕಾರವು ಹೊಸ ಉಪಕ್ರಮಗಳು ಮತ್ತು ಯೋಜನೆಗಳನ್ನು ರೂಪಿಸಿ ಕಾರ್ಯರೂಪಕ್ಕೆ ತರಲು ಮುಂದಾಗಬೇಕು.

ಸರ್ಕಾರವು ೯೦ರ ದಶಕದಿಂದಲೇ ಕೃಷಿ ಕ್ಷೇತ್ರದಲ್ಲಿ ತಾನು ಹೂಡುತ್ತಿದ್ದ ಬಂಡವಾಳ ಮತ್ತು ಸಹಾಯಧನ ಎರಡನ್ನೂ ಹಂತಹಂತವಾಗಿ ಕಡಿತಗೊಳಿಸುತ್ತಲೇ ಬಂದಿದೆ. ಇದರಿಂದಾಗಿ ರೈತರು ಗೊಬ್ಬರ, ಬೀಜಗಳಂತಹ ಅಗತ್ಯವಸ್ತುಗಳು, ವಿಸ್ತರಣೆ, ಮಾರಾಟ ಮತ್ತು ಸಾಲಸೋಲಗಳಿಗಾಗಿ ಅನಿವಾರ್ಯವಾಗಿ ಖಾಸಗಿ ಮೂಲಗಳ ಮೊರೆಹೋಗುವಂತಾಗಿದೆ. ಪರಿಣಾಮವಾಗಿ ಕಳೆದ ಕೆಲವು ವರ್ಷಗಳಲ್ಲಿ ರೈತರ ಆತ್ಮಹತ್ಯೆಗಳು ಹೆಚ್ಚುತ್ತಿವೆ. ಇಂತಹವರಲ್ಲಿ ಅಂಚಿನಲ್ಲಿರುವ ಮತ್ತು ಸಣ್ಣ ರೈತರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಬೇಸಾಯಕ್ಕೆ ತಗಲುವ ವೆಚ್ಚ ದಿನೇ ದಿನೇ ಏರುತ್ತಿರುವ ಹಿನ್ನೆಲೆಯಲ್ಲಿ ರೈತರು ತೆಗೆದುಕೊಳ್ಳುತ್ತಿರುವ ಸಾಲದ ಮೊತ್ತವೂ ಹೆಚ್ಚುತ್ತಿದೆ. ಕೃಷಿಕ್ಷೇತ್ರದಲ್ಲಿ ಜಾರಿಗೆ ಬಂದಿರುವ ವ್ಯಾಪಕ ಉದಾರೀಕರಣದಿಂದಾಗಿ ಉಂಟಾಗುತ್ತಿರುವ ಬೆಲೆಯ ಏರಿಳಿತಗಳು, ಅಗತ್ಯ ವಸ್ತುಗಳ ಖರೀದಿಗಾಗಿ ತೆಗೆದುಕೊಳ್ಳುತ್ತಿರುವ ಸಾಲಗಳು, ವಿಪರೀತವಾದ ಬಡ್ಡಿದರ, ಬೆಳೆ ವೈಫಲ್ಯ ಎಲ್ಲವೂ ರೈತರನ್ನು ಕಂಗಾಲಾಗಿಸಿವೆ. ಈ ನೇತ್ಯಾತ್ಮಕ ಬೆಳವಣಿಗೆಗಳಿಗೆ ಪ್ರತಿಕ್ರಿಯಿಸಿದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರೈತ ಸಮುದಾಯಗಳ ಸಮಸ್ಯೆಗಳ ನಿವಾರಣೆಗಾಗಿ ರಾಷ್ಟ್ರೀಯ ಆಯೋಗ ಮತ್ತು ರೈತರ ಸಾಲಬಾಧೆ ಕುರಿತ ಅಧ್ಯಯನ ಕೈಗೊಳ್ಳಲು ಪ್ರತ್ಯೇಕ ಆಯೋಗವನ್ನೇ ಅಲ್ಲದೆ ಇನ್ನಿತರ ಹಲವಾರು ಆಯೋಗಗಳನ್ನು ರಚಿಸಿವೆ.

ಕಳೆದ ಐದು ದಶಕಗಳಿಂದಲೂ ಅನುಸರಿಸಿಕೊಂಡು ಬರುತ್ತಿರುವ ಕೃಷಿ ನೀತಿಯನ್ನು ಮೂರು ಹಂತಗಳಾಗಿ ವಿಂಗಡಿಸಿ ವಿಶ್ಲೇಷಿಸಬಹುದಾಗಿದೆ :

(೧) ರಾಷ್ಟ್ರವು ಸ್ವತಂತ್ರಗೊಂಡ ಕೂಡಲೆ ಸರ್ಕಾರವು ಭೂ ಸುಧಾರಣೆ ಮತ್ತು ಬೃಹತ್ ನೀರಾವರಿ ಯೋಜನೆಗಳನ್ನು ರೂಪಿಸುವುದರ ಮೂಲಕ ಹಲವಾರು ಸಾಂಸ್ಥಿಕ ಬದಲಾವಣೆಗಳನ್ನು ತಂದಿತು. (೨) ೬೦ರ ದಶಕದ ಮಧ್ಯಭಾಗದ ಅವಧಿಯಲ್ಲಿ ತಾಂತ್ರಿಕ ಕ್ಷೇತ್ರದಲ್ಲಿ ಆಧುನಿಕ

**ಯುಪಿಎ ಸರ್ಕಾರದ ಆದೇಶದ ಮೇರೆಗೆ ಡಾ|| ಅರ್ಜುನ್ ಸೇನ್‌ಗುಪ್ತ ಆಯೋಗವು ಅಸಂಘಟಿತ ಕಾರ್ಮಿಕರ ಸಮಸ್ಯೆಗಳನ್ನು ಅಧ್ಯಯನ ಮಾಡಿ ಆ ಸಮುದಾಯದ ಕ್ಷೇಮಾಭಿವೃದ್ಧಿಗಾಗಿ ಸಮಗ್ರ ವರದಿಯೊಂದನ್ನು ಮಂಡಿಸುವುದರ ಮೂಲಕ ಹಲವಾರು ಸಲಹೆಗಳನ್ನು ನೀಡಿದೆ. ಈ ವರದಿಯ ಆಯ್ದ ಭಾಗಗಳನ್ನು 'ಹೊಸತು'ವಿನ ಏಪ್ರಿಲ್ ೨೦೦೮ರ ಸಂಚಿಕೆಯಿಂದ ಮೊದಲ್ಗೊಂಡು ಪ್ರತಿ ತಿಂಗಳೂ ಪ್ರಕಟಿಸಲಾಗುತ್ತಿದೆ. ಈ ಸಂಚಿಕೆಯಲ್ಲಿ ಕಾರ್ಮಿಕ ಯೋಜನೆಗಳ ಕುರಿತು ವರದಿಯಲ್ಲಿ ಚರ್ಚಿತವಾಗಿರುವ ಮುಖ್ಯಾಂಶಗಳನ್ನು ಓದುಗರ ಗಮನಕ್ಕೆ ತರಲಾಗಿದೆ.**

ಮಾದರಿಗಳನ್ನು ಅಳವಡಿಸಿಕೊಳ್ಳುವುದು ಮತ್ತು ಸಾಲ, ಮಾರಾಟಗಳಿಗೆ ಹೆಚ್ಚಿನ ಸೌಲಭ್ಯಗಳನ್ನು ನೀಡಿ ಇಡೀ ಕ್ಷೇತ್ರವನ್ನು ವಿಸ್ತರಿಸುವುದಕ್ಕೆ ಸಾರ್ವಜನಿಕವಾಗಿ ಬೆಂಬಲ ನೀಡುವುದರ ಮೂಲಕ ಸ್ವಾವಲಂಬನೆಯನ್ನು ಸಾಧಿಸುವ ದಿಶೆಯಲ್ಲಿ ಕೃಷಿ ಉತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಆದ್ಯತೆ ನೀಡಲಾಯಿತು. (೩) ಅನಂತರ ಪ್ರಸ್ತುತ ಹಂತದಲ್ಲಿ, ಎಂದರೆ ೮೦ರ ದಶಕದಿಂದೀಚೆಗೆ ಇಡೀ ಕೃಷಿ ಕ್ಷೇತ್ರವನ್ನೇ ಒಂದು ಮಾರುಕಟ್ಟೆ ಆಧಾರಿತ ಉದ್ಯಮವನ್ನಾಗಿ ಪರಿವರ್ತಿಸಲು ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.

ಹಸಿರು ಕ್ರಾಂತಿಯು ಹೊಂದಿದ್ದ ವ್ಯಾಪಕತೆ ಮತ್ತು ಪ್ರಮಾಣ ಹಾಗೂ ಅದರ ಬಂಡವಾಳ ಆಧಾರಿತ ಸ್ವರೂಪದಿಂದಾಗಿ, ಅದು ಸಣ್ಣ ಮತ್ತು ಅಂಚಿನಲ್ಲಿರುವ ರೈತರಿಗೆ ಅಷ್ಟಾಗಿ ಪ್ರಯೋಜನಕಾರಿಯಾಗಲಿಲ್ಲವೆಂದು ೧೯೬೦-೭೦ರ ದಶಕಗಳಲ್ಲಿ ಕೈಗೊಂಡ ಅಧ್ಯಯನಗಳಿಂದ ತಿಳಿದುಬರುತ್ತದೆ. ಆದಾಗ್ಯೂ ಎಂಭತ್ತರ ದಶಕದಲ್ಲಿ ಕೃಷಿ ಕ್ಷೇತ್ರದಲ್ಲಾದ ಪ್ರಗತಿ ಮತ್ತು ಹಿಂದುಳಿದಿದ್ದ ಗ್ರಾಮೀಣ ಪ್ರದೇಶದ ರೈತರಿಗೂ ಅದರಿಂದ ಸ್ವಲ್ಪ ಮಟ್ಟಿಗೆ ಅನುಕೂಲವಾದುದು ಗಮನಾರ್ಹ. ಕೃಷಿ ಕ್ಷೇತ್ರದಲ್ಲಿ ಅಳವಡಿಸಿಕೊಂಡ ಹೊಸ ತಂತ್ರಜ್ಞಾನವೇ ಅಲ್ಲದೆ ಸರ್ಕಾರವು ಸಹ ತಾನಾಗಿಯೇ ಸಾಲದ ಸೌಲಭ್ಯಗಳು ರೈತರಿಗೆ ಸುಲಭವಾಗಿ ದೊರಕುವ ನಿಟ್ಟಿನಲ್ಲಿ ಸೂಕ್ತ ಕ್ರಮಗಳನ್ನು ತೆಗೆದುಕೊಂಡಿತು; ಬೆಳೆಗಳಿಗೆ ಸೂಕ್ತ ಮಾರುಕಟ್ಟೆಗಳನ್ನು ನಿರ್ಮಿಸಲು ಹೊಸ ಉಪಕ್ರಮಗಳನ್ನು ತೆಗೆದುಕೊಳ್ಳಲು ಮುಂದಾಯಿತು. ಇವೆಲ್ಲವೂ ಸಹಜವಾಗಿ ಹಸಿರು ಕ್ರಾಂತಿಯಿಂದಾಗಿ ಲಭಿಸಿದ ಧನಾತ್ಮಕ ಪರಿಣಾಮಗಳು; ಇವು ಸಣ್ಣ ಮತ್ತು ಅಂಚಿನಲ್ಲಿರುವ ರೈತರಿಗೂ ಲಭಿಸುವಂತಾಯಿತು. ಜೊತೆಗೆ, ಸರ್ಕಾರವು ಕಾಲಾನುಕಾಲಕ್ಕೆ ರೂಪಿಸಿದ ಹಲವು ವಿಶೇಷ ಯೋಜನೆಗಳೂ ಕೃಷಿ ಕ್ಷೇತ್ರವು ಇನ್ನಷ್ಟು ಅಭಿವೃದ್ಧಿ ಹೊಂದಲು ನೆರವಾದವು. ಇಲ್ಲಿ ಅಂಚಿನಲ್ಲಿರುವ ಮತ್ತು ಸಣ್ಣ ರೈತರ ಆರ್ಥಿಕ ಮಟ್ಟವನ್ನು ಹೆಚ್ಚಿಸುವ ಸಲುವಾಗಿ 'ಸಣ್ಣ ರೈತರ ಅಭಿವೃದ್ಧಿ ಸಂಸ್ಥೆಗಳು' ಎಂಬ ಯೋಜನೆಯೊಂದನ್ನು ೧೯೭೧ರಲ್ಲಿ ರಚಿಸಲಾಯಿತು. ಅಂತೆಯೇ 'ದಿ ಮಿಲಿಯನ್ ವೆಲ್ಸ್'ಗಳಂತಹ ಹಲವಾರು ಯೋಜನೆಗಳನ್ನು ರೂಪಿಸಲಾಯಿತು. ಕೆಲವೆಡೆ ಇಂತಹ ಸಂಸ್ಥೆಗಳು/ ಯೋಜನೆಗಳಿಂದ ಅಷ್ಟಿಷ್ಟು ಪ್ರಯೋಜನವಾಗಿದ್ದರೂ, ಇವು ಯಾವುವೂ ನಿರೀಕ್ಷಿತ ಫಲಿತಾಂಶಗಳನ್ನು ನೀಡಲು ವಿಫಲವಾಗಿವೆ.

೯೦ರ ದಶಕದಿಂದೀಚೆಗೆ ಹಸಿರು ಕ್ರಾಂತಿಯಿಂದ ಹರಿದುಬಂದ ಉತ್ಪಾದಕ ಅನುಕೂಲತೆಗಳು ಕ್ಷೀಣಿಸುತ್ತಿವೆ. ಸಾರ್ವತ್ರಿಕ ಮಟ್ಟದಲ್ಲಿ ಕೃಷಿ ಕ್ಷೇತ್ರವು ಇಳಿಮುಖ ಕಾಣುತ್ತಿದೆ. ಸಾಮಾನ್ಯವಾಗಿ ಹಲವಾರು ಕ್ಷೇತ್ರಗಳಲ್ಲಿನ, ಅದರಲ್ಲೂ ಪ್ರಮುಖವಾಗಿ ಕೃಷಿಕ್ಷೇತ್ರದಲ್ಲಿನ ತನ್ನ ಹೊಣೆಗಾರಿಕೆಯಿಂದ ಸರ್ಕಾರವು ಹಿಂದೆ ಸರಿಯುತ್ತಿರುವುದು ಈ ಬೆಳವಣಿಗೆಗೆ ಕಾರಣವಾಗಿದೆ. ಉದಾರೀಕರಣದಿಂದಾಗಿ ಕೃಷಿ ಕ್ಷೇತ್ರವು ಗಟ್ಟಿಗೊಳ್ಳುತ್ತದೆ ಎಂಬ ನಿರೀಕ್ಷೆಗಳಲ್ಲಿ ಯಾವ ಹುರುಳೂ ಇಲ್ಲ ಎಂಬುದು ಈಗಾಗಲೇ ಸಾಬೀತಾಗಿದೆ. ರೈತರಿಗೆ, ಅದರಲ್ಲೂ ಸಣ್ಣ ಮತ್ತು ಅಂಚಿನಲ್ಲಿರುವ ರೈತರಿಗೆ ಭವಿಷ್ಯವೇ ಇಲ್ಲದಂತಾಗಿ ಸಾಲದ ಜಾಲದಲ್ಲಿ ಸಿಲುಕಿ ನಲುಗುತ್ತಿದ್ದಾರೆ. ಆತ್ಮಹತ್ಯೆಗೆ ಮೊರೆಹೋಗುತ್ತಿದ್ದಾರೆ.

ಉದಾರೀಕರಣ ಪ್ರಕ್ರಿಯೆ ಬಿರುಸಾಗಿ ಜಾರಿಗೊಳ್ಳುತ್ತಿರುವ ಇಂದಿನ ಸನ್ನಿವೇಶದಲ್ಲಿ ಜಾಗತಿಕ ಮಾರುಕಟ್ಟೆಯೊಂದಿಗೆ ನಮ್ಮ ಆರ್ಥಿಕತೆಯು ಏಕೀಕೃತಗೊಂಡು ಅದರ ಸಹಯೋಗದಡಿಯಲ್ಲಿ ವ್ಯವಹರಿಸಬೇಕಾಗಿರುವುದು ಅನಿವಾರ್ಯವಾಗಿದೆ. ಇಂತಹ ಸಂದರ್ಭದಲ್ಲಿ ಅಂಚಿನಲ್ಲಿರುವ ಮತ್ತು ಸಣ್ಣ ರೈತರ ಹಿತಾಸಕ್ತಿಗಳನ್ನು ರಕ್ಷಿಸಲು ಸರ್ಕಾರಗಳು ಮುಂದೆಬರಬೇಕು. ಅವರ ಕಸುಬಿಗೆ ದಿನನಿತ್ಯದ ಅಗತ್ಯಗಳಾದ ಬೀಜ, ಗೊಬ್ಬರ, ಸಾಲ, ಬೆಳೆಗಳಿಗೆ ಸೂಕ್ತ ಬೆಲೆ ಮುಂತಾದವು ದೊರಕುವಂತಾಗಲು ಸೂಕ್ತ ಕ್ರಮ ತೆಗೆದುಕೊಳ್ಳಬೇಕು.

ರೈತ ಸಮುದಾಯದ ಹಿತಾಸಕ್ತಿಗಳನ್ನು ರಕ್ಷಿಸಲು ಅಗತ್ಯವಿರುವ ಕ್ರಮಗಳನ್ನು ಕುರಿತು ಅಧ್ಯಯನ ಮಾಡಲು ಸರ್ಕಾರವು ರಾಷ್ಟ್ರ ಮಟ್ಟದ ಸಮಿತಿಯೊಂದನ್ನು ರಚಿಸಿತು. ಡಾ|| ಎಂ. ಎಸ್. ಸ್ವಾಮಿನಾಥನ್ ಅಧ್ಯಕ್ಷರಾಗಿದ್ದ ಈ ಸಮಿತಿಯು ನೀಡಿದ ಶಿಫಾರಸ್ಸುಗಳನ್ನು ಆನಂತರ ರೈತರಿಗಾಗಿಯೇ ರೂಪಿಸಲಾದ ರಾಷ್ಟ್ರೀಯ ನೀತಿಯಲ್ಲಿ ಅಳವಡಿಸಿ

## ಮುಲಾಜು



ಮುಲಾಜಿಗಾವ ಇಲಾಜು ?
ಹಲವು ಸಲ ನನ್ನ ಜೀವವನೇ ಹಿಂಡಿ
ಹಾಕುವುದು ಈ ಬೇನೆ !
ಮೈ ಮೇಲೆ ಬಂದ ಅಪಾಯದ ಜ್ವರ
ಇಳಿದು ಹೋಗದಂತಿರೆ ತನ್ನಿಂದ ತಾನೆ
ಏನೆಲ್ಲ ಮುಡಿಪಿಟ್ಟು
ಕೊಡುವುದೆಲ್ಲಾ ಕೊಟ್ಟು
ಪಾರುಗಾಣಿಸಲೆ ಬೇಕು
ಶಿಕಾರಿಗೆ ಸಿಲುಕಿದ ಜೀವವನೆ !

ಬದುಕಿನ ಕಾಲದೊಂದೊಂದು ದಿನ
ನನ್ನೆದುರಿಗೆ, ಹಿಂದೆ, ಮುಂದೆ
ಆಗಲೊ ಈಗಲೊ ಬೆರೆವ ಜನ
ಬೆರೆಸಲಿಕುಂಟೆ ಮನಕೆ ಮನ ?
ಎಲ್ಲಿಯೊ ಬಿಚ್ಚದ ಹಗ್ಗದ ಗಂಟು,
ಎಲ್ಲಿಯೊ ಕೂಡಿದ ದೂರದ ನಂಟು
ದಾರಿಯೆ ಸಿಲುಕದ ಕತ್ತಲ ಕೋಣೆ !
ಇಲಾಜು ಕಾಣದ ಒಳಬೇನೆ !
ಮಾತಾಡಿದರೆ ಮದ್ದಿನ ಸಿಡಿತ
ಮೌನದಾಳದಲಿ ನಿಲ್ಲದ ಮಿಡಿತ !
ನಕ್ಕರೊಪ್ಪಿದೊಲು ನನ್ನದೆ ಸೋಲು
ಅತ್ತರೆ ಕರೆದೊಲು ಒಂಟಿಯ ಹಾಲು !
ಏನು ಮಾಡುವುದೊ ತಿಳಿಯದ ಈ ಗತಿ
ಮುಲಾಜಿನ ಮಂಜಿಗೆ ಬರಿ ಶರಣಾಗತಿ !

ಬಿ. ಎ. ಸನದಿ, ಮಿಲನ್, ವಿನಾಯಕ ಸಾ ಮಿಲ್ ಎದುರು, ಹೆರವಟ್ಟ, ಕುಮಟಾ – ೫೮೧೩೩೨

ಕೊಳ್ಳಲಾಯಿತು. ರೈತರ ಯಾತನಾಮಯ ಬದುಕು, ಕೃಷಿ ಕ್ಷೇತ್ರದ ಬಿಕ್ಕಟ್ಟು, ಕುಸಿಯುತ್ತಿರುವ ಕೃಷಿ ಉತ್ಪನ್ನಗಳ ಬೆಲೆ, ಬದುಕಿಗಾಗಿ ರೈತರು, ಕೃಷಿ ಕೂಲಿಕಾರರು ಗ್ರಾಮೀಣ ಪ್ರದೇಶಗಳಿಂದ ವಲಸೆ ಹೋಗುತ್ತಿರುವುದು ಮುಂತಾದ ಸಮಸ್ಯೆಗಳನ್ನು ಆ ಸಂದರ್ಭದಲ್ಲಿ ಹೊರತಂದ ದಾಖಲೆಗಳಲ್ಲಿ ಗುರುತಿಸಲಾಗಿದೆ. ಅಂತೆಯೇ ಕೃಷಿ ಕ್ಷೇತ್ರದ ಪಾರಂಪರಿಕ ಮಾದರಿಗಳಿಗೆ ಪರ್ಯಾಯವಾಗಿ ರೈತರು ವಾಣಿಜ್ಯ ಬೆಳೆಗಳತ್ತ ಒಲವು ತೋರಿಸುತ್ತಿರುವುದು, ಜಾಗತೀಕರಣಗೊಂಡ ಮಾರುಕಟ್ಟೆಯ ಹಿನ್ನೆಲೆಯಲ್ಲಿ ಅವರಿಗಿರುವ ಇತಿಮಿತಿಗಳು, ದಿನೇ ದಿನೇ ಹೆಚ್ಚುತ್ತಿರುವ ರಸಗೊಬ್ಬರದ ಬೆಲೆಗಳು ಮತ್ತು ಸಾಲದ ಹೊರೆ ಇವೇ ಮೊದಲಾದ ಸಮಸ್ಯೆಗಳ ಬಗ್ಗೆಯೂ ಪ್ರಸ್ತಾಪಿಸಲಾಗಿದೆ. ಒಟ್ಟಿನಲ್ಲಿ ರೈತರ ಒಟ್ಟಾರೆಯ ಪರಿಸ್ಥಿತಿಯನ್ನು ಸುಧಾರಿಸಲು ಸರ್ಕಾರವು ಭಾರತ ನಿರ್ಮಾಣ್ ಮತ್ತು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ ಕಾಯಿದೆಗಳನ್ನು ರೂಪಿಸಿರುವುದನ್ನು ಮಂಡಳಿ ಪ್ರಸ್ತಾಪಿಸಿದೆ. ಇದಲ್ಲದೆ ಕೃಷಿ ಉತ್ಪನ್ನ ಮಾರುಕಟ್ಟೆ ಕಾಯಿದೆಯಲ್ಲಿ ಕೆಲವು ಬದಲಾವಣೆಗಳನ್ನು ತರಲಾಗಿದೆ. ಈ ಕ್ರಮಗಳು ಸ್ವಾಗತಾರ್ಹವೆಂದೆನಿಸಿದರೂ ಅವು ಇನ್ನೂ ಪ್ರಾರಂಭಿಕ ಹಂತದಲ್ಲಿಯೇ ಇವೆ.




ಅಂಚಿನಲ್ಲಿರುವ ಮತ್ತು ಸಣ್ಣ ರೈತರು ಭಾರತದ ಆರ್ಥಿಕತೆಯ ಬೆನ್ನೆಲುಬಿನಂತಿರುವ ಜನವಿಭಾಗದವರು. ಅವರ ಸಮಸ್ಯೆಗಳತ್ತ ವಿಶೇಷವಾಗಿ ಗಮನ ಹರಿಸಬೇಕೆಂದು ರೈತರ ಹಿತರಕ್ಷಣೆಗಾಗಿ ರಚಿಸಲಾಗಿರುವ ಈ ರಾಷ್ಟ್ರೀಯ ಮಂಡಳಿ ಅಭಿಪ್ರಾಯಪಟ್ಟಿದೆ. ಮಂಡಳಿಯು ಪ್ರಕಟಿಸಿರುವ ದಸ್ತಾವೇಜುಗಳಲ್ಲಿ ವಿಶ್ಲೇಷಿಸಿರುವಂತೆ ಗ್ರಾಮೀಣ ಪ್ರದೇಶಗಳಲ್ಲಿನ ಶೇ.೮೪ರಷ್ಟು ಕುಟುಂಬಗಳು ಎರಡು ಹೆಕ್ಟೇರ್‌ವರೆಗಿನ ಹಿಡುವಳಿಗಳನ್ನು ಹೊಂದಿದ್ದು, ಶೇ.೪೩ರಷ್ಟು ಭೂಮಿಯಲ್ಲಿ ಬೇಸಾಯ ಮಾಡುತ್ತಿದ್ದಾರೆ. ಈ ರೈತರು ಹತ್ತುಹಲವು ಮಾರುಕಟ್ಟೆ ಸಂಬಂಧಿತ ಸಮಸ್ಯೆಗಳಿಗೆ ಸಿಲುಕಿ ನಲುಗುತ್ತಿದ್ದಾರೆ. ಇಂತಹ ಸಮಸ್ಯೆಗಳ ನಿವಾರಣೆಗಾಗಿ ಸರಕಾರ ತೆಗೆದುಕೊಂಡಿರುವ ಕ್ರಮಗಳು ಯಾವ ರೀತಿಯಲ್ಲೂ ಪ್ರಯೋಜನಕಾರಿಯಾಗಿಲ್ಲ ಎಂದು ಸಮಿತಿಯು ಅಭಿಪ್ರಾಯಪಡುವುದಲ್ಲದೆ ಈ ಜನವಿಭಾಗದವರ ಹಿತರಕ್ಷಣೆಗಾಗಿ ವಿಮೆ, ಹೆಚ್ಚಿನ ಸಾಲಸೌಲಭ್ಯಗಳು, ಸೂಕ್ತ ಬೆಲೆ, ಹೊಸ ತಂತ್ರಜ್ಞಾನ ಮೊದಲಾದವುಗಳನ್ನು ಒದಗಿಸಲು ಸರ್ಕಾರವು ಹೊಸ ಯೋಜನೆಯೊಂದನ್ನು ರೂಪಿಸಬೇಕೆಂದು ಆಗ್ರಹಿಸಿದೆ.

ಈ ಹಿಂದೆ, ಎಂದರೆ ೭೦ರ ದಶಕದ ಸುಮಾರಿಗೆ ಕೃಷಿ ಕ್ಷೇತ್ರದ ಬೆಳವಣಿಗೆಗೆ ಕೆಲವು ಗ್ರಾಮೀಣ ಸಂಸ್ಥೆಗಳು ರೈತಾಪಿಜನರ ನೆರವಿಗೆ ಬಂದು ಸಾಲಸೌಲಭ್ಯಗಳನ್ನು ನೀಡುತ್ತಿದ್ದವು. ಈ ದಿಶೆಯಲ್ಲಿ ಕೆಲವು ಬ್ಯಾಂಕುಗಳು ರಾಷ್ಟ್ರೀಕರಣಗೊಂಡದ್ದು ಮಹತ್ವದ ಅಂಶ. ಅದೇ ಸಂದರ್ಭದಲ್ಲಿ ಈ ಬ್ಯಾಂಕುಗಳು ಗ್ರಾಮೀಣ ಪ್ರದೇಶಗಳಲ್ಲೂ ಶಾಖೆಗಳನ್ನು ತೆರೆಯಬೇಕೆಂದು ತೀರ್ಮಾನಿಸಿದ್ದು ಕೃಷಿಯ ಬೆಳವಣಿಗೆಗೆ ಮತ್ತಷ್ಟು ಇಂಬು ನೀಡಿತು. ಜೊತೆಗೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಹಾಗೂ ಅಂಚಿನಲ್ಲಿರುವವರ ಮತ್ತು ಸಣ್ಣ ರೈತರ ಅಗತ್ಯತೆಗಳನ್ನು ವಿಶೇಷವಾಗಿ ಗಣನೆಗೆ ತೆಗೆದುಕೊಳ್ಳಲಾಯಿತು. ಇದೇ ವೇಳೆಗೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಮತ್ತು ಭೂ ಅಭಿವೃದ್ಧಿ ಬ್ಯಾಂಕುಗಳನ್ನು ಸ್ಥಾಪಿಸಲಾಯಿತು. ಸಣ್ಣ ಕೈಗಾರಿಕೆ, ಗೃಹ ಕೈಗಾರಿಕೆ, ಕರಕುಶಲಗಾರಿಕೆಗಳಂತಹ ಗ್ರಾಮೀಣ ಜನತೆಯ ಒಟ್ಟಾರೆಯ ಆರ್ಥಿಕ ಚಟುವಟಿಕೆಗಳಿಗೆ ನೆರವಾಗಲು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ರಾಷ್ಟ್ರೀಯ ಬ್ಯಾಂಕನ್ನು ಸರ್ಕಾರವು ೮೦ರ ದಶಕದ ಪ್ರಾರಂಭದಲ್ಲಿ ಅಸ್ತಿತ್ವಕ್ಕೆ ತಂದದ್ದು ಒಂದು ಪರಿಣಾಮಕಾರಿ ಕ್ರಮವಷ್ಟೆ

ಬ್ಯಾಂಕುಗಳು ಮತ್ತಿತರ ಸಂಸ್ಥೆಗಳು ಕೃಷಿ ಸಂಬಂಧಿತ ಚಟುವಟಿಕೆಗಳಿಗೆ, ಅದರಲ್ಲೂ ಅಂಚಿನಲ್ಲಿರುವ ಮತ್ತು ಸಣ್ಣ ರೈತರಿಗೆ ನಿರೀಕ್ಷಿತ ಮಟ್ಟದಲ್ಲಿ ಸಾಲ ನೀಡಲು ಮುಂದೆ ಬರುತ್ತಿಲ್ಲ. ಉದಾಹರಣೆಗೆ, ೧೯೯೪ರಲ್ಲಿ ಶೇ.೧೭ರಷ್ಟಿದ್ದ ಸಾಲದ ಮೊತ್ತ ೨೦೦೪ರಲ್ಲಿ ಶೇ.೯ರಷ್ಟಾಗಿದೆ. ಸರ್ಕಾರವು ಈ ವಾಸ್ತವಾಂಶವನ್ನು ಗಮನಿಸಿ ಬ್ಯಾಂಕುಗಳು ಇನ್ನು ಮುಂದೆ ಶೇ.೭ರಷ್ಟು ಬಡ್ಡಿದರದಲ್ಲಿ ಸಾಲ ನೀಡಬೇಕು ಮತ್ತು ನೀಡುವ ಸಾಲದ ಮೊತ್ತವನ್ನು ಪ್ರತಿವರ್ಷವೂ ಶೇ.೨೫ರಷ್ಟು ಹೆಚ್ಚಿಸಬೇಕು ಎಂದು ಬ್ಯಾಂಕುಗಳಿಗೆ ಆದೇಶ ನೀಡಿದೆ. ಬರಗಾಲಕ್ಕೆ ತುತ್ತಾಗಿರುವ ರೈತರು ಸಂಕಷ್ಟಗಳಿಗೊಳಗಾಗಿರುವ ಪ್ರದೇಶಗಳಲ್ಲಿ ಸಾಲ ಮನ್ನಾ ಮಾಡಬೇಕೆಂದೂ ಸೂಚಿಸಿದೆ. ಅಂತಹ ಪ್ರದೇಶಗಳಲ್ಲಿ ಕೃಷಿಯನ್ನೇ ಅವಲಂಬಿಸಿರುವ ರೈತರು ಸಾಲದ ಜಾಲದಲ್ಲಿ ಸಿಲುಕಿ ನರಳುವುದು ಸಾಮಾನ್ಯವಾಗಿಬಿಟ್ಟಿದೆ. ಅಂತಹವರ ಸಮಸ್ಯೆಗಳನ್ನು ಸಮಗ್ರವಾಗಿ ಅಧ್ಯಯನ ಮಾಡಲು ಪ್ರೊ|| ರಾಧಾಕೃಷ್ಣ ಅವರ ನೇತೃತ್ವದಲ್ಲಿ ಪ್ರತ್ಯೇಕ ಸಮಿತಿಯೊಂದನ್ನು ರಚಿಸಲಾಗಿದೆ. ಕೇಂದ್ರ ಸರ್ಕಾರ ನೀಡಿರುವ ಸೂಚನೆಗಳ ಪರಿಣಾಮವಾಗಿ ಹೆಚ್ಚು ಸಾಲ ಸೌಲಭ್ಯಗಳು ಲಭ್ಯವಿದ್ದರೂ ೨೦೦೬ರಲ್ಲಿ ಅದರ ಪ್ರಮಾಣ ಶೇ.೧೧.೯ರಷ್ಟಿತ್ತು. ಗ್ರಾಮೀಣ ಜನರ ಸಮಸ್ಯೆಗಳ ನಿವಾರಣೆಗಾಗಿ ಬ್ಯಾಂಕುಗಳು, ಸಹಕಾರಿ ಸಂಸ್ಥೆಗಳು, ನೀಡುವ ಸಾಲವೇ ಅಲ್ಲದೆ ಇತರ ಯೋಜನೆಗಳನ್ನು ತುರ್ತಾಗಿ ರೂಪಿಸಬೇಕಿದೆ ಎಂದು ಸ್ವಾಮಿನಾಥನ್ ಸಮಿತಿ ಅಭಿಪ್ರಾಯಪಟ್ಟಿದೆ.

ಮಳೆ ಆಧಾರಿತ ಮತ್ತು ಶುಷ್ಕ ಭೂಮಿ ಸಾಗುವಳಿಗೆ ಹೆಚ್ಚಿನ ಆದ್ಯತೆ ನೀಡುವುದರ ಜೊತೆಗೆ ಲಭ್ಯವಿರುವ ನೀರನ್ನು ಬಳಸುವಲ್ಲಿ ಹೊಸ ವಿಧಾನಗಳನ್ನು ರೂಪಿಸಬೇಕೆಂಬ ಅಂಶವನ್ನು ಸಮಿತಿಯು ಒತ್ತಿ ಹೇಳಿದೆಯಲ್ಲದೆ ೧೧ನೇ ಪಂಚವಾರ್ಷಿಕ ಯೋಜನೆಯಲ್ಲಿ ಈ ಎಲ್ಲ ಕ್ರಮಗಳಿಗೂ ಪ್ರಮುಖ ಸ್ಥಾನವಿರಬೇಕೆಂದು ಸಲಹೆ ನೀಡಿದೆ. ಈ ದಿಶೆಯಲ್ಲಿ ಜಿಲ್ಲಾ ಮಟ್ಟದಲ್ಲಿ ರೂಪಿಸಲಾಗುವ ಯೋಜನೆಗಳು ಉಪಯುಕ್ತವಾಗುತ್ತವೆ. ಇಂತಹ ಯೋಜನೆಗಳನ್ನು ಕಾರ್ಯಗತಗೊಳಿಸುವ ಎಲ್ಲ ಹಂತಗಳಲ್ಲೂ ಆಯಾ ಪಂಚಾಯ್ತಿಗಳೂ ಪಾಲ್ಗೊಳ್ಳುವುದು ಸೂಕ್ತ.

ಬಹುತೇಕವಾಗಿ ಆಂಧ್ರಪ್ರದೇಶ, ಮಹಾರಾಷ್ಟ್ರ, ಕರ್ನಾಟಕ ಮತ್ತು ಕೇರಳ ರಾಜ್ಯಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಈ ರಾಜ್ಯಗಳ ೩೧ ಜಿಲ್ಲೆಗಳಲ್ಲಿ ಸಂಕಷ್ಟಕ್ಕೀಡಾಗಿರುವ ರೈತರ ಪುನರ್ವಸತಿಗಾಗಿ ವಿಶೇಷ ಯೋಜನೆಗಳನ್ನು ರೂಪಿಸಲಾಗಿದೆ. ೩ ವರ್ಷಗಳ ಅವಧಿಯಲ್ಲಿ ಈ ವಿಶೇಷ ಯೋಜನೆಗಳೇ ಅಲ್ಲದೆ ಇತರ ಪರಿಹಾರ ಕ್ರಮಗಳೂ ಜಾರಿಗೆ ಬರಬೇಕಿದೆ. ಈ ಯೋಜನೆಗಳಲ್ಲಿ ಸಾಲ ಮನ್ನಾ, ಹೊಸ ಕೃಷಿ ಪದ್ಧತಿಗಳು, ಹೊಸ ನೀರಾವರಿ ಸೌಲಭ್ಯಗಳೂ ಸೇರಿದಂತೆ ರೈತರು ತಮ್ಮ ವರಮಾನವನ್ನು ಹೆಚ್ಚಿಸಿಕೊಳ್ಳಲು ತೋಟಗಾರಿಕೆ, ಪಶುಸಂಗೋಪನೆ, ಮೀನುಗಾರಿಗೆ ಮುಂತಾದ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವಂತೆ ಪ್ರೋತ್ಸಾಹಿಸಲಾಗುತ್ತಿದೆ.

ಸಾಮಾನ್ಯವಾಗಿ ಇಂತಹ ಸಮಸ್ಯೆಗಳನ್ನೆದುರಿಸುತ್ತಿರುವ ಪ್ರದೇಶಗಳಲ್ಲಿ ರೈತರು ಖಾಸಗಿ ಮೂಲಗಳಿಂದ ಅತಿ ಹೆಚ್ಚಿನ ಬಡ್ಡಿ ದರದಲ್ಲಿ ಸಾಲ ಪಡೆಯುವುದು ಮಾಮೂಲಿನ ವಿಷಯ. ಇದನ್ನು ವಿಶೇಷವಾಗಿ ಗಮನಿಸಿರುವ ಕೇರಳ ಸರ್ಕಾರವು 'ಕೇರಳ ರಾಜ್ಯ ರೈತರ ಸಾಲ ಪರಿಹಾರ ಮಂಡಳಿ' ಎಂಬ ಸಂಸ್ಥೆಯನ್ನು ರಚಿಸಿದೆ. ಈ ಮಂಡಳಿಯು ವ್ಯಾಪಕವಾದ ಸಮೀಕ್ಷೆಯನ್ನು ಕೈಗೊಂಡ ನಂತರ ಇಡುಕ್ಕಿ ಮತ್ತು ವೈನಾಡ್ ಎರಡೂ ಅತಿ ಹೆಚ್ಚಿನ ಕಷ್ಟ ದೆಶೆಗಳಿಗೆ ಗುರಿಯಾಗಿರುವ ಪ್ರದೇಶಗಳೆಂದು ಘೋಷಿಸಿದೆ. ಅಲ್ಲಿನ ರೈತರನ್ನು ಸಾಲಗಾರರ ಬಿಗಿಮುಷ್ಟಿಯಿಂದ ವಿಮುಕ್ತಗೊಳಿಸಲು ಈಗಾಗಲೇ ಹಲವಾರು ಕ್ರಮಗಳನ್ನು ಕೈಗೊಂಡಿದೆ. ಕೇಂದ್ರ ಸರ್ಕಾರವು ರಾಜ್ಯದ ರೈತರ ಸಮಸ್ಯೆಗಳ ನಿವಾರಣೆಗಾಗಿ ಪ್ರತ್ಯೇಕ ಮಂಡಳಿಯನ್ನು ರಚಿಸಬೇಕೆಂದು ಸಮಿತಿ ಶಿಫಾರಸ್ಸು ಮಾಡಿದೆ.

ದಿನೇ ದಿನೇ ಕೃಷಿ ಕಾರ್ಮಿಕರ ಮತ್ತು ಕೃಷಿ ಕೂಲಿಕಾರರ ಸಂಖ್ಯೆ ಹೆಚ್ಚುತ್ತಿದೆ. ಆದರೆ ಕೃಷಿವಲಯದಲ್ಲಿ ಇವರೆಲ್ಲರಿಗೂ ಉದ್ಯೋಗಾವಕಾಶಗಳು ದೊರೆಯುವುದು ಸಾಧ್ಯವಿಲ್ಲದ ಮಾತು. ಎಂದೇ ಗ್ರಾಮೀಣ ಪ್ರದೇಶಗಳಲ್ಲಿ ಕೃಷಿಯೇತರ ಚಟುವಟಿಕೆಗಳನ್ನು ಪ್ರೋತ್ಸಾಹಿಸಿ ಆ ಮೂಲಕ ಉದ್ಯೋಗಾವಕಾಶಗಳನ್ನು ಸೃಷ್ಟಿಸುವುದು ಇಂದಿನ ತುರ್ತು ಅಗತ್ಯವಾಗಿದೆ. ಇವು ಭೂ ಆಧಾರಿತ ಚಟುವಟಿಕೆಗಳಲ್ಲ. ಆದ್ದರಿಂದ ಬಡ ಮತ್ತು ಸಾಮಾಜಿಕವಾಗಿ ಹಿಂದುಳಿದ ಕೂಲಿಕಾರರಿಗೂ ದುಡಿಯಲು ಅವಕಾಶಗಳು ಲಭ್ಯವಾಗುವ ಸಾಧ್ಯತೆಯಿದೆ. ಅಲ್ಲದೆ ಸ್ಥಳೀಯವಾಗಿ ಮಹಿಳೆಯರೂ ದುಡಿದು ತಮ್ಮ ಕುಟುಂಬಗಳ ಆರ್ಥಿಕತೆಗೆ ನೆರವಾಗಬಹುದಾಗಿದೆ. ರಾಷ್ಟ್ರದ ಒಟ್ಟಾರೆ ಅಭಿವೃದ್ಧಿಯ ಕಾರ್ಯವಿಧಾನಗಳಿಂದ ಹೆಚ್ಚು ಹೆಚ್ಚು ಉದ್ಯೋಗಾವಕಾಶಗಳು ಸೃಷ್ಟಿಯಾಗುವಂತಾದರೆ ಸೊರಗಿಹೋಗುತ್ತಿರುವ ಕೃಷಿಕ್ಷೇತ್ರದಲ್ಲಿನ ಉದ್ಯೋಗಿಗಳೂ ಇತರ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಸಾಧ್ಯವಿದೆ. ಈ ನಿಟ್ಟಿನಲ್ಲಿ ಸರ್ಕಾರವು ಹೆಚ್ಚಿನ ಆಸ್ಥೆ ವಹಿಸಿ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕು.

**ಭೂ ಸುಧಾರಣೆ:** ಸಾಧಾರಣ ಮಟ್ಟದಲ್ಲಿಯಾದರೂ ಭೂ ಸುಧಾರಣೆಯನ್ನು ಜಾರಿಗೆ ತಂದರೆ ಬಡಜನತೆಯ ಬವಣೆಯನ್ನು ಗಮನಾರ್ಹವಾಗಿ ನೀಗಿಸಬಹುದು ಎಂಬುದು ಈಗಾಗಲೇ ಸಾಬೀತಾಗಿದೆ. ಗ್ರಾಮೀಣ ಜನತೆಯನ್ನು ಕಿತ್ತು ತಿನ್ನುತ್ತಿರುವ ಬಡತನಕ್ಕೂ ಭೂಹೀನತೆಗೂ ನೇರ ಸಂಬಂಧವಿದೆ. ಭೂ ಸುಧಾರಣೆ [illegible]

ಗ್ರಾಮೀಣ ಆರ್ಥಿಕತೆಯು ಹೆಚ್ಚು ಶಕ್ತಿಯುತವಾಗುತ್ತದೆ, ಹೊಸ ಚೈತನ್ಯ ಪಡೆಯುತ್ತದೆ; ಬಡತನದ ಬೇಗೆಯನ್ನು ನಿವಾರಿಸಲು ನೆರವಾಗುತ್ತದೆ. ಆದ್ದರಿಂದ ಭೂಮಿಯ ಪುನರ್‌ವಿತರಣ ಕಾರ್ಯಕ್ರಮವನ್ನು ಸತತವಾಗಿ ಕೈಗೊಳ್ಳಬೇಕಿದೆ. ಇದರಿಂದಾಗಿ ಹೆಚ್ಚುವರಿ ಜಮೀನು ಮತ್ತು ಬೇಸಾಯಯೋಗ್ಯ ಹಾಗೂ ಬಂಜರು ಭೂಮಿಯನ್ನು ಗ್ರಾಮೀಣ ಬಡಜನತೆಗೆ ವಿತರಿಸಬಹುದಾಗಿದೆ. ಜೊತೆಗೆ, ಗುತ್ತಿಗೆ ವ್ಯವಹಾರಗಳಲ್ಲಿ ಸೂಕ್ತ ಸುಧಾರಣೆಗಳನ್ನು ಜಾರಿಗೆ ತರುವುದು ಮತ್ತು ಬೆಳೆಗಳಿಗೆ ಮಾರುಕಟ್ಟೆ ರೂಪಿಸುವುದು ಸರ್ಕಾರದ ಜವಾಬ್ದಾರಿಯಾಗಿದೆ. ಆದರೆ ಈ ಎಲ್ಲ ಕ್ರಮಗಳೂ ಯಶಸ್ವಿಯಾಗ ಬೇಕೆಂದಾದರೆ, ಅವುಗಳಿಗೆ ಒತ್ತಾಸೆ ನೀಡುವಂತಹ ಪ್ರಗತಿಪರ ನೀತಿಗಳನ್ನು ರೂಪಿಸಬೇಕಿದೆ; ಅದಕ್ಕೆ ಅಗತ್ಯವಿರುವ ಸಂಸ್ಥೆಗಳನ್ನು ಸ್ಥಾಪಿಸಬೇಕಿದೆ. ಜಮೀನುಗಳಿಗೆ ಸಂಬಂಧಿಸಿದ ಓಬಿರಾಯನ ಕಾಲದ ದಾಖಲೆಗಳನ್ನು ಗಣಕೀಕರಣಕ್ಕೊಳಪಡಿಸಿ ಇಂದಿನ ಅಗತ್ಯತೆಗಳಿಗೆ ಸರಿಹೊಂದುವಂತೆ ನವೀಕರಣಗೊಳಿಸಬೇಕಿದೆ.

ಭೂ ಸುಧಾರಣೆ ಪ್ರಕ್ರಿಯೆಯಲ್ಲಿ ಲಿಂಗಾಧಾರಿತ ತೊಡಕುಗಳು ಇತ್ತೀಚಿನ ವರ್ಷಗಳಲ್ಲಿ ಕಾಣಬರುತ್ತಿವೆ. ಕೆಲವು ವೇಳೆ ಪಟ್ಟಾಗಳನ್ನು ಮಹಿಳೆಯರ ಹೆಸರಿನಲ್ಲಿ ಮಾತ್ರ ನೀಡಲಾಗುತ್ತಿವೆ. ಇಲ್ಲವೇ ಗಂಡ ಹೆಂಡತಿಯರ ಜಂಟೀ ಹೆಸರಿನಲ್ಲಿ ನೀಡಲಾಗುತ್ತಿದೆ. ಕೆಲವೊಮ್ಮೆ ವಿಧವೆಯರಿಗೆ ವಿತರಿಸಲು ಆದ್ಯತೆ ನೀಡಲಾಗುತ್ತಿದೆ. ಕೆಲವು ರಾಜ್ಯಗಳಲ್ಲಿ ಭೂ ಶಾಸನಗಳಿಗೆ ತಿದ್ದುಪಡಿ ತರಲಾಗಿದೆ. ಆದರೂ ಕೆಲವೊಂದು ಸಮಸ್ಯೆಗಳು ಪರಿಹಾರ ಕಾಣದೆ ಉಳಿದುಕೊಂಡುಬಂದಿವೆ. ಸ್ವಸಹಾಯ ಗುಂಪುಗಳಂತಹ ಸಂಸ್ಥೆಗಳು ಮಹಿಳೆಯರು ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವಲ್ಲಿ ಪರಿಣಾಮಕಾರಿ ಸಾಧನಗಳಾಗುತ್ತವೆ.

**ಸ್ವಯಂ ಉದ್ಯೋಗ ಯೋಜನೆಗಳು :** ಸ್ವಯಂ ಉದ್ಯೋಗಿಗಳು ರಾಷ್ಟ್ರದಲ್ಲಿರುವ ಅಸಂಘಟಿತ ಕಾರ್ಮಿಕರಲ್ಲಿ ೩/೪ ಭಾಗಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಇವರಲ್ಲಿ ಆಸ್ತಿಪಾಸ್ತಿಗಳನ್ನು ಹೊಂದಿರುವವರು ತೀರ ವಿರಳ. ಈ ಹಿನ್ನೆಲೆಯಲ್ಲಿ ಬಡಜನತೆಯ ಆರ್ಥಿಕ ಅಭಿವೃದ್ಧಿಗಾಗಿ ರೂಪಿಸುವ ಕಾರ್ಯಕ್ರಮಗಳಲ್ಲಿ ಸ್ವಯಂ ಉದ್ಯೋಗ ವಲಯದ ಬೆಳವಣಿಗೆಗೆ ಮತ್ತು ಸ್ವಯಂ ಉದ್ಯೋಗಿಗಳ ವರಮಾನದ ಹೆಚ್ಚಳಕ್ಕೆ ಆದ್ಯತೆ ನೀಡುವ ಅವಶ್ಯಕತೆಯಿದೆ. ಸ್ವಯಂ ಉದ್ಯೋಗಗಳಲ್ಲಿ ನಿರತರಾಗಿರುವವರ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರವು ಈಗಾಗಲೇ ನಾಲ್ಕು ಬೃಹತ್ ಕಾರ್ಯಕ್ರಮಗಳನ್ನು/ಯೋಜನೆಗಳನ್ನು ರೂಪಿಸಿದೆ. ಅವೆಂದರೆ, (೧) ಪ್ರಧಾನ ಮಂತ್ರಿಯವರ ರೋಜ್‌ಗಾರ್ ಯೋಜನೆ (೧೯೯೩); (೨) ಗ್ರಾಮೀಣ ಉದ್ಯೋಗ ಭರವಸೆ ಕಾರ್ಯಕ್ರಮ (೧೯೯೫); (೩) ಗ್ರಾಮೀಣ ಅಭಿವೃದ್ಧಿ ಸಚಿವಾಲಯ ರೂಪಿಸಿದ ಸ್ವರ್ಣ ಜಯಂತಿ ಗ್ರಾಮ ಸ್ವ-ರೋಜ್‌ಗಾರ್ ಯೋಜನೆ (೧೯೯೯) ಮತ್ತು ನಗರ ಪ್ರದೇಶಗಳಲ್ಲಿ ಹೆಚ್ಚು ಉದ್ಯೋಗಾವಕಾಶಗಳನ್ನು ಸೃಷ್ಟಿಸುವ ಸಲುವಾಗಿ ಮತ್ತು ಬಡತನ ನಿರ್ಮೂಲನಕ್ಕೇ ಸಂಬಂಧಪಟ್ಟ ಸಚಿವಾಲಯ ಯೋಜನೆ (೧೯೯೭). ಸಾಕಷ್ಟು ಹಣ ಒದಗಿಸಲಾಗಿರುವ ಈ ಯೋಜನೆಗಳಿಂದಾಗಿ ನಗರ ಪ್ರದೇಶಗಳ ಬಡಜನರಿಗೆ ಮತ್ತು ಸಣ್ಣ ಪುಟ್ಟ ವ್ಯಾಪಾರಿಗಳು ಹಾಗೂ ಸ್ವಸಹಾಯ ಗುಂಪುಗಳಿಗೆ ಅನುಕೂಲವಾಗಿದೆ. ಜೊತೆಗೆ, ದೀನದಲಿತರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುವುದೂ ಕಡಿಮೆಯಾಗಿದೆ. ೧೦ನೇ ಪಂಚವಾರ್ಷಿಕ ಯೋಜನೆಯಲ್ಲಿ ಪ್ರಧಾನಿಯವರ ರೋಜ್‌ಗಾರ್ ಯೋಜನೆ ಮತ್ತು ಗ್ರಾಮೀಣ ಉದ್ಯೋಗ ಭರವಸೆ ಯೋಜನೆಗಳಡಿ ೧,೨೦,೦೦೦ ಯೋಜನೆಗಳನ್ನು ರೂಪಿಸಲಾಯಿತು. ಇದರಿಂದಾಗಿ ಸುಮಾರು ೪೧ ಲಕ್ಷ ಜನರಿಗೆ ಉದ್ಯೋಗವನ್ನು ಒದಗಿಸಲಾಯಿತು. ಈ ಯೋಜನೆಗಳು ಇನ್ನೂ ಹೆಚ್ಚು ಜನಮುಖಿಯಾಗಬೇಕಿದೆ, ಕೃಷಿಯೇತರ ವಲಯಗಳಿಗೂ ಅವುಗಳನ್ನು ವಿಸ್ತರಿಸಬೇಕಿದೆ.

**ವೇತನ - ಉದ್ಯೋಗ ಯೋಜನೆಗಳು ಮತ್ತು ಗ್ರಾಮೀಣ ಉದ್ಯೋಗ ಭರವಸೆ ಕಾಯಿದೆ :** ದಿನಗೂಲಿ ನೌಕರರಿಗೆ ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ಕ್ರಮಬದ್ಧವಾದ ಉದ್ಯೋಗವನ್ನು ಒದಗಿಸಲು ರೂಪಿಸಿರುವ ಯೋಜನೆಗಳನ್ನು ಬರುವ ದಿನಗಳಲ್ಲಿ ನಗರ ಪ್ರದೇಶಗಳಿಗೂ ವಿಸ್ತರಿಸಬಹುದಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿನ ಔದ್ಯೋಗಿಕ ಸಮಸ್ಯೆಗಳು ನಿರ್ದಿಷ್ಟ ಅವಧಿಗೆ ಸಂಬಂಧಪಟ್ಟಂತೆ ತಲೆಎತ್ತುತ್ತವೆ. ಅಂತೆಯೇ ಅಸಂಪೂರ್ಣ ಉದ್ಯೋಗಗಳೂ ಕೂಡ. ಆದ್ದರಿಂದ ಈ ಜನವಿಭಾಗದವರ ನೆರವಿಗೆ ಕ್ರಮಗಳನ್ನು ರೂಪಿಸುವಾಗ ಉಪ-ಉದ್ಯೋಗಗಳನ್ನು ಸೃಷ್ಟಿಸುವುದೂ ಬಹಳ ಅಗತ್ಯ. ಬರಗಾಲ, ನೆರೆ ಹಾವಳಿ ಮತ್ತಿತರ ಅನಾಹುತಗಳು ಸಂಭವಿಸಿದ ಸಂದರ್ಭದಲ್ಲಂತೂ ಇಂತಹ ಕ್ರಮಗಳು ಬಹಳ ಉಪಯುಕ್ತವಾಗುತ್ತವೆ. ಈ ದಿಶೆಯಲ್ಲಿ ಕಡೆಯ ಪಕ್ಷ ಒಂದು ವರ್ಷದಲ್ಲಿ ನೂರು ದಿವಸಗಳವರೆಗೆ ಉದ್ಯೋಗಾವಕಾಶಗಳನ್ನು ದೊರಕಿಸಲು ಜಾರಿಗೆ ತರಲಾಗಿರುವ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ ಕಾಯಿದೆ (೨೦೦೫)ಯು ಅತ್ಯಂತ ಮಹತ್ವದ ಕ್ರಮವಾಗಿದೆ. ಇದರಿಂದಾಗಿ ದುಡಿಮೆಯೂ ಜನರ ಪಾಲಿಗಿರುವ ಒಂದು ಹಕ್ಕು ಎಂದು ಗುರುತಿಸಿದಂತಾಗಿದೆ. ಈ ಯೋಜನೆಯು ಯಶಸ್ವಿಯಾಗಿದೆಯೇ ಇಲ್ಲವೇ, ಎಂಬ ಪ್ರಶ್ನೆಗೆ ನಿಖರವಾಗಿ ಉತ್ತರ ನೀಡಲಾಗದಿದ್ದರೂ, ಒಟ್ಟಾರೆಯಾಗಿ, ತೀವ್ರ ಸಂಕಷ್ಟಗಳಿಗೆ ಸಿಲುಕಿ ಹತಾಶರಾಗಿರುವ ಗ್ರಾಮೀಣ ಜನತೆಗೆ ಈ ಯೋಜನೆ ಬಹುಮಟ್ಟಿಗೆ ನೆರವಿಗೆ ಬಂದಿದೆ ಎಂಬುದನ್ನು ತಳ್ಳಿಹಾಕುವಂತಿಲ್ಲ. ಈಗಿರುವ ೧೦೦ ದಿವಸಗಳ ಮಿತಿಯನ್ನು ತಗೆದುಹಾಕಿ ಇಡೀ ವರ್ಷದ ಅವಧಿಗೆ ಈ ಯೋಜನೆಯನ್ನು ವಿಸ್ತರಿಸುವ ಅಗತ್ಯವಿದೆ ಎಂದು ಸ್ವಾಮಿನಾಥನ್ ಸಮಿತಿ ಅಭಿಪ್ರಾಯಪಡುತ್ತಲೇ ಪಂಚಾಯ್ತಿಯಂತಹ ಸ್ಥಳೀಯ ಸಂಸ್ಥೆಗಳೂ ಈ ಯೋಜನೆಯನ್ನು ಜನತೆಗೆ ತಲುಪಿಸುವ ನಿಟ್ಟಿನಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಬೇಕೆಂದು ಸಲಹೆ ಮಾಡಿದೆ.

ನೂರಾರು ಕಸುಬುಗಳಲ್ಲಿ ತೊಡಗಿಕೊಂಡಿರುವ ರೈತಾಪಿ ಜನರ ಜ್ಞಾನ ಮತ್ತು

ಕೌಶಲಗಳ ಮಟ್ಟವನ್ನು ಹೆಚ್ಚಿಸುವ ಸಲುವಾಗಿ ತರಬೇತಿ ನೀಡಲು ಹಲವಾರು ಕಾರ್ಯಕ್ರಮಗಳನ್ನು ರೂಪಿಸಲಾಗಿದೆ. ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ, ಕಾರ್ಮಿಕ ಮತ್ತು ಉದ್ಯೋಗ ಸಚಿವಾಲಯಗಳಂತಹ ಕೇಂದ್ರ ಸರ್ಕಾರದ ೨೪ ಸಚಿವಾಲಯಗಳು, ರಾಜ್ಯ ಸರ್ಕಾರಗಳು, ಸರ್ಕಾರೇತರ ಸಂಘ ಸಂಸ್ಥೆಗಳು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿವೆ. ರಾಷ್ಟ್ರಮಟ್ಟದಲ್ಲಿ ಸರಿಸುಮಾರು ೮ರಿಂದ ೧೦ಲಕ್ಷ ವಿದ್ಯಾರ್ಥಿಗಳು ತರಬೇತಿ ಪಡೆಯಲು ಮುಂದೆ ಬಂದಿರುವುದು ಗಮನಾರ್ಹ. ಇವರಲ್ಲಿ ಬಹುತೇಕ ವಿದ್ಯಾರ್ಥಿಗಳು ೮ರಿಂದ ೧೦ನೇ ತರಗತಿಯಲ್ಲಿ ತೇರ್ಗಡೆ ಹೊಂದಿದವರಾಗಿದ್ದಾರೆ. ಹೀಗೆ ನೀಡಲಾಗುವ ತರಬೇತಿಗೆ ತಗಲುವ ಖರ್ಚು ತಲಾ ೫೦೦೦ರೂ.ಗಳು ಎಂದು ಅಂದಾಜಿಸಲಾಗಿದೆ. ಈ ಬಗೆಯ ಅನೇಕ ಕಾರ್ಯಕ್ರಮಗಳನ್ನು ಸಾರ್ವಜನಿಕ ಮತ್ತು ಖಾಸಗೀ ಸಂಸ್ಥೆಗಳ ಜಂಟೀ ಆಶ್ರಯದಲ್ಲಿ ನಡೆಸಲಾಗುತ್ತಿದೆ. ಚೀಣಾ ಕೂಡ ಇದೇ ಮಾದರಿಯ ೫ ಲಕ್ಷ ತರಬೇತಿ ಕೇಂದ್ರಗಳನ್ನು ಯಶಸ್ವಿಯಾಗಿ ನಡೆಸುತ್ತಿದೆ. ೫ ವರ್ಷಗಳ ಅವಧಿಯಲ್ಲಿ ಆದಷ್ಟು ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳಿಗೆ ತರಬೇತಿ ನೀಡುವುದು ಸರ್ಕಾರದ ಗುರಿಯಾಗಿದೆ.

ಸ್ವಾಮಿನಾಥನ್ ಸಮಿತಿಯು ಅಭಿಪ್ರಾಯಪಡುವಂತೆ ಇದುವರೆವಿಗೂ ಚರ್ಚಿಸಲಾಗಿರುವ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುವ ನಿಟ್ಟಿನಲ್ಲಿ ತೊಡಗಿಕೊಂಡಿರುವ ಹಲವಾರು ಸಂಘ ಸಂಸ್ಥೆಗಳ ಕಾರ್ಯವಿಧಾನಗಳನ್ನು ನಿರ್ದೇಶಿಸುವ ಸಲುವಾಗಿ ಪ್ರತ್ಯೇಕ ಸಂಸ್ಥೆಯೊಂದು ಅಸ್ತಿತ್ವಕ್ಕೆ ಬರಬೇಕಿದೆ. ಈ ಎಲ್ಲ ಸಂಸ್ಥೆಗಳು ಹೆಚ್ಚಿನ ಹೊಂದಾಣಿಕೆಯಿಂದ ಕೆಲಸ ಮಾಡಲು ಈ ಕ್ರಮ ಅಗತ್ಯವಾಗಿದೆ. ಗ್ರಾಮೀಣ ಭಾಗಗಳಲ್ಲಿನ ಬಡ ಜನತೆಗೆ ಭದ್ರತೆ ಒದಗಿಸಲು ಮತ್ತು ಅವರ ಜೀವನೋಪಾಯಗಳನ್ನು ಉತ್ತಮಪಡಿಸಲು ಇಂತಹ ಸಂಸ್ಥೆಯೂ ಒಂದು ಪರಿಣಾಮಕಾರಿ ಸಾಧನವಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿನ ಇಂದಿನ ಆರ್ಥಿಕ ಸನ್ನಿವೇಶವು ಉದ್ಯಮಗಳು ಮತ್ತು ಕಾರ್ಮಿಕರು ಪರಸ್ಪರ ಸಹಕರಿಸಿ ಕಾರ್ಯನಿರ್ವಹಿಸುವಂತಹ ವಾತಾವರಣವನ್ನು ನಿರ್ಮಿಸಿದೆ. ಜೊತೆಗೆ, ಉದಾರೀಕರಣ ಮತ್ತು ಜಾಗತೀಕರಣ ಪ್ರಕ್ರಿಯೆಗಳು ಅಸಂಘಟಿತ ವಾಣಿಜ್ಯ ಸಂಸ್ಥೆಗಳಿಗೂ ಅಸಂಘಟಿತ ಕಾರ್ಮಿಕರಿಗೂ ಆತಂಕಕಾರಿಯಾಗಿ ಪರಿಣಮಿಸಿವೆ.

ಅಸಂಘಟಿತ ಕಾರ್ಮಿಕರ ಜೀವನೋಪಾಯಗಳನ್ನು ಉತ್ತಮಗೊಳಿಸುವ ಸಲುವಾಗಿ ಸರ್ಕಾರವು ಹಲವಾರು ನೀತಿಗಳನ್ನು ಕಾರ್ಯಕ್ರಮಗಳನ್ನು ರೂಪಿಸಿರುವುದರಲ್ಲಿದೆ. ಅವುಗಳನ್ನು ಕಾರ್ಯಗತಗೊಳಿಸಲು ಹತ್ತು ಹಲವು ಸಂಸ್ಥೆಗಳನ್ನು ನೇಮಿಸಿದೆ. ಇದು ಇಡೀ ವಿಶ್ವದಲ್ಲಿ ಅತಿ ಹೆಚ್ಚಿನ ಪ್ರಮಾಣದ್ದು. ಇಷ್ಟಾದರೂ ಬಹುತೇಕ ಅಸಂಘಟಿತ ಕಾರ್ಮಿಕರು ಮತ್ತು ಸ್ವಯಂ ಉದ್ಯೋಗಿಗಳು ಈ ಯೋಜನೆಗಳ ಹೊರಗೆ ಉಳಿದಿದ್ದಾರೆ. ಸರ್ಕಾರವು ನಿರೂಪಿಸುತ್ತಿರುವ ಆರ್ಥಿಕ ಸುಧಾರಣೆಗಳಿಂದಾಗಿ ಅಸಂಘಟಿತ ವಲಯದ ಉದ್ಯಮಗಳ ಪರಿಸ್ಥಿತಿ ದಿನೇ ದಿನೇ ಹದಗೆಡುತ್ತಿದೆ. ಅಸಂಘಟಿತ ಕಾರ್ಮಿಕರ ಪಾಡಂತೂ ಹೇಳತೀರದಾಗಿದೆ. ಅಸಂಘಟಿತ ಕಾರ್ಮಿಕರ ಸಂಖ್ಯೆ ಸಹ ಹೆಚ್ಚುತ್ತಲೇ ಇದೆ. ಉದ್ಯೋಗ ಮತ್ತು ಉತ್ಪಾದನೆಗಳನ್ನು ಗಮನಿಸಿದರೆ ಭಾರತದ ಇಡೀ ಆರ್ಥಿಕತೆಯಲ್ಲಿ ಅಸಂಘಟಿತ ವಲಯ ವಹಿಸುತ್ತಿರುವ ಪಾತ್ರ ಗಮನಾರ್ಹವಾದುದು. ಈ ಅಂಶವನ್ನು ಸರ್ಕಾರ ಗಣನೆಗೆ ತೆಗೆದುಕೊಳ್ಳದೇ ಇರುವುದು ವಿಷಾದನೀಯ. ಅದೇನೇ ಇರಲಿ, ಹೆಚ್ಚಿನ ಉದ್ಯೋಗಾವಕಾಶಗಳನ್ನು ಸೃಷ್ಟಿಸಲು ಅಸಂಘಟಿತ ವಲಯದಲ್ಲಿ ಅಪಾರ ಅವಕಾಶಗಳಿವೆ ಎಂದು ೧೧ನೇ ಪಂಚವಾರ್ಷಿಕ ಯೋಜನೆಯಲ್ಲಿ ಗುರುತಿಸಲಾಗಿದೆ. ಈ ದಿಶೆಯಲ್ಲಿ ಅಗತ್ಯವಿರುವ ಎಲ್ಲ ಕ್ರಮಗಳನ್ನು ತೆಗೆದುಕೊಳ್ಳುವ ತುರ್ತು ಅವಶ್ಯಕತೆಯಿದೆ ಎಂದೂ ಹೇಳಲಾಗಿದೆ.

ಈ ಹಿನ್ನೆಲೆಯಲ್ಲಿ ಕೃಷಿಯೇತರ/ಅಸಂಘಟಿತ ವಲಯದಲ್ಲಿ ದುಡಿಯುವವರ ಮತ್ತು ಕೃಷಿಕ್ಷೇತ್ರದಲ್ಲಿ ಅಂಚಿನಲ್ಲಿರುವ ಸಣ್ಣ ಹಿಡುವಳಿದಾರರ ಏಳಿಗೆಗಾಗಿ ಸರ್ಕಾರವು ಹೊಸ ಉಪಕ್ರಮಗಳನ್ನು ತೆಗೆದುಕೊಳ್ಳಬೇಕಿದೆ. ಆ ಮೂಲಕ ಉದ್ಯೋಗಾವಕಾಶಗಳು ಮತ್ತು ಅಸಂಘಟಿತ ಕಾರ್ಮಿಕರ ಆದಾಯ ಎರಡೂ ಹೆಚ್ಚಲಿವೆ ಎಂದು ನಿರೀಕ್ಷಿಸಬಹುದಾಗಿದೆ. ■

## ಏಪ್ರಿಲ್

**ಕಾ**ಡುಗಳು ಮತ್ತೆ ಸುವಾಸನಾಯುಕ್ತವಾಗುತ್ತವೆ.
ಮೇಲೇರುವ ಕೊಕ್ಕರೆಗಳು ತಮ್ಮ ಜೊತೆಗೆ ಎತ್ತುತ್ತವೆ
ಆಕಾಶವನ್ನು, ಇಷ್ಟು ದಿನ ಅದು ನಮ್ಮ ಭುಜಕ್ಕೆ ಭಾರವಾಗಿತ್ತು.
ನಿಜ, ಕೊಂಬೆಗಳ ಮೂಲಕ ನಾನು ದಿನವನ್ನು ನೋಡಿದರೂ,
ಎಷ್ಟು ಖಾಲಿಯಾಗಿತ್ತು ಅದು –

ಆದರೆ ಬಹಳ ಮಳೆ – ತುಂಬಿದ ಮಧ್ಯಾಹ್ನಗಳ ನಂತರ
ಸೂರ್ಯನಿಂದ ತೋಯ್ದು ಹೊಸ ತಾಸುಗಳು ಬರುತ್ತವೆ,
ಅದಕ್ಕೆ ಮುಂಚೆ, ದೂರದ ಮನೆಗಳ ಮೇಲೆ.

ಗಾಯಗೊಂಡ ಎಲ್ಲ ಕಿಟಕಿಗಳು
ಭಯದಿಂದ ತೆರಳುತ್ತವೆ, ತಮ್ಮ ರೆಕ್ಕೆಗಳನ್ನು ಬಡಿಯುತ್ತಾ.

ನಂತರ ಎಲ್ಲ ನಿಶ್ಯಬ್ದವಾಗುತ್ತದೆ. ಮಳೆ ಕೂಡ ಸೂಕ್ಷ್ಮವಾಗಿ ಹರಿಯುತ್ತದೆ
ಕಲ್ಲಿನ ಸದ್ದಿಲ್ಲದ, ಕಪ್ಪಗಾಗುತ್ತಿರುವ ಹೊಳಪಿನ ಮೇಲೆ.
ಎಲ್ಲ ಶಬ್ದಗಳೂ ಸಂಪೂರ್ಣವಾಗಿ ಮಾಯವಾಗುತ್ತವೆ
ಪೊದೆಗಳಲ್ಲಿ ಹೊಳೆಯುತ್ತಿರುವ ಮೊಗ್ಗುಗಳೊಳಗೆ.

ರೈನರ್ ಮಾರಿಯಾ ರಿಲ್ಕೆ
ಇಂಗ್ಲಿಷ್ ಅನುವಾದ : ಎಡ್ವರ್ಡ್ ಸ್ನೋ
ಕನ್ನಡ ಅನುವಾದ : ಅಂಕುರ್ ಬೆಟಗೇರಿ

೨೦೨, ಹರ್ಷ ಅಪಾರ್ಟ್‌ಮೆಂಟ್ಸ್, ಸ್ನೇಹ ಕಾಲನಿ
ಚಿಕ್ಕಲಕ್ಕಸಂದ್ರ, ಬೆಂಗಳೂರು - ೫೬೦ ೦೬೧



# ಪಡ್ನೂರಿನ ಪಾಠಗಳು

## (ದಕ್ಷಿಣ ಕನ್ನಡ ಅಂದು - ಇಂದು)

# ಅದ್ದುವಿನ ಅವಸ್ಥೆ

ಎಸ್. ಆರ್. ವಿಜಯಶಂಕರ

ಬ್ರಾಯಿಯ ಹಾಗೆ ನನ್ನ ನೆನಪಲ್ಲಿ ಒಳಿದಿರುವ ಇನ್ನೊಬ್ಬ ವ್ಯಕ್ತಿ ಅದ್ದು. ಅವನ ಪೂರ್ತಿ ಹೆಸರು ಅಬ್ದುಲ್ಲ. ಅವ ಅದ್ದು ಬ್ಯಾರಿ ಎಂದೇ ಪರಿಚಿತ. ನಸು ಬಿಳಿ ಮೈ ಬಣ್ಣ. ತುಸು ಸಪೂರ ಮೈಕಟ್ಟು. ಶುಕ್ರವಾರ ಬಿಳಿ ಮುಂಡು(ಪಂಚೆ) ಬಿಳಿ ಅಂಗಿ; ಹೆಗಲಿಗೆ ಹಾಕುವ ಬಿಳಿ ಬೈರಾಸನ್ನು ತಲೆಗೆ ಕಟ್ಟಿಕೊಂಡು ಓಡಾಡುತ್ತಿದ್ದ. ಆ ದಿನ ಅವನಿಗೆ ವಾರದ ರಜೆ.

ಈ ಅದ್ದು ಚಿಕ್ಕವನಾಗಿದ್ದಾಗ ಅಬ್ಬೋಕರೆಯ ಮಣ್ಣ ಕೆಲಸದ ಗುಂಪಿನ ಒಬ್ಬ ಸದಸ್ಯ. ಮಣ್ಣಿನ ಕೆಲಸ ಮಾಡುವವರೆಲ್ಲ ಸ್ವಲ್ಪ ಗಟ್ಟಿ ಆಳುಗಳೆಂದ್ದು ಲೆಕ್ಕ. ಈಗ ದಕ್ಷಿಣ ಕನ್ನಡ ಜಿಲ್ಲೆಯ ಯಾವ ಮೂಲೆಗೆ ಹೋದರೂ ಮಣ್ಣ ಕೆಲಸಕ್ಕೆ ಟಿಪ್ಪರುಗಳು, ಸಣ್ಣ ಮಟ್ಟಿನ ಬುಲ್‌ಡೋಜರ್‌ಗಳು ಕಾಣುತ್ತವೆ. ಅವು ಸೀಮೆಯ ಮೂಲೆಗಳಲ್ಲೂ ಬಾಡಿಗೆಗೆ ಸಿಗುತ್ತವೆ, ತಾಲ್ಲೂಕು ಕೇಂದ್ರದವರೆಗೂ ಹೋಗಬೇಕಾಗಿಲ್ಲ. ಇವನ್ನೇ ನೋಡಿದ ಈಗಿನ ಹುಡುಗರಿಗೆ ಮಣ್ಣ ಕೆಲಸ ಮಾಡುವ ಆಳುಗಳಿಗೆ ನಲವತ್ತು ವರುಷಗಳ ಹಿಂದೆ ದಕ್ಷಿಣ ಕನ್ನಡ ಜಿಲ್ಲೆಯ ಒಳನಾಡು ಪ್ರದೇಶಗಳಲ್ಲಿ ಎಂತಹ ಮಹತ್ವ ಇತ್ತು ಎಂಬುದು ಸುಲಭವಾಗಿ ಅರ್ಥವಾಗಲಿಕ್ಕಿಲ್ಲ.

ಅದ್ದು ಹುಡುಗನಾಗಿದ್ದಾಗ ಅಬ್ಬೋಕರೆ ಬ್ಯಾರಿಯ ಮಣ್ಣಿನ ಕೆಲಸದ ಗುಂಪಿಗೆ ಸೇರಿದವ. ಅದರ ಮೊದಲ ಹಂತ ಅಗೆದ ಮಣ್ಣನ್ನು ತಲೆ ಹೊರೆಯಲ್ಲಿ ಹೊತ್ತು ಸಾಗಿಸುವುದು, ಅಲ್ಲಿಂದ ನಿಧಾನಕ್ಕೆ ಅಗೆದ ಮಣ್ಣನ್ನು ಕುಕ್ಕೆಗೆ (ಮಣ್ಣು ಹೊರುವ ಬುಟ್ಟಿ) ಕೊಟ್ಟೆಸಲ್ಲಿ (ಗುದ್ದಲಿ) ತುಂಬಿಸುವ ಕೆಲಸಕ್ಕೆ ಪ್ರಮೋಶನ್ ಪಡೆದ. ಅಲ್ಲಿಂದ ಪಿಕ್ಕಾಸು ಹಿಡಿದು ಮಣ್ಣು ಅಗೆಯುವ ಮಟ್ಟಕ್ಕೇರಿದ. ಮಾಡುವ ಕೆಲಸವನ್ನು ಅವಲಂಬಿಸಿ ಅಬ್ಬೋಕರೆಯ ಮಣ್ಣ ಕೆಲಸದ ಗುಂಪಲ್ಲಿ ಸಂಬಳದ ವ್ಯತ್ಯಾಸ ಇದೆ. ಕೂಲಿಗಳಲ್ಲಿ ಮಣ್ಣ ಕೆಲಸಕ್ಕೆ ಹೋಗುವವರು ಅದರಲ್ಲೂ ಕಂಟ್ರಾಕ್ಟ್ ಕೆಲಸ ಮಾಡಲು ಮುಂದಾಗುವವರು ಸ್ವಲ್ಪ ಮಹತ್ವಾಕಾಂಕ್ಷೆಯವರು ಎಂದು ಲೆಕ್ಕ. ಅವರು ಶರೀರದಲ್ಲೂ ನಿತ್ಯಕೂಲಿಯ ದಿನ ಕೆಲಸದವರಿಗಿಂತ ಹೆಚ್ಚು ಗಟ್ಟಿಮುಟ್ಟಾಗಿ, ಚುರುಕಾಗಿರುತ್ತಾರೆ. ಅವರಿಗೆ ಊಟಕ್ಕೆ ಆಹಾರವೂ ಹೆಚ್ಚು ಬೇಕು.

ಅಡಿಕೆ ತೋಟಗಳಲ್ಲಿ ಕೆಲಸ ಮಾಡುವ ಕೂಲಿಯವರಿಗೆ ಹೆಚ್ಚಾಗಿ ಬೆಳಗಿನ ಒಂದು ತಿಂಡಿ, ಮಧ್ಯಾಹ್ನದ ಊಟ ಹಾಗೂ ಸಂಜೆಯ ಒಂದು ಕಾಫಿ ತೋಟದ ಯಜಮಾನನ ಮನೆಯಲ್ಲೆ ನೀಡುವ ಕ್ರಮ. ಮನೆಯ ಹೆಂಗಸರೆ ಅಡಿಗೆ ಮಾಡಬೇಕಾಗಿರುವುದರಿಂದ ಯಾವ ಆಳಿಗೆ ಎಷ್ಟು ಅನ್ನ ಬೇಕಾಗುತ್ತದೆ ಎಂಬ ಒಂದು ಅಂದಾಜು ಅವರಿಗಿರುತ್ತದೆ. ಮಧ್ಯಾಹ್ನದ ಊಟ ಹೊಟ್ಟೆತುಂಬ. ಬೆಳಗ್ಗಿನ ತಿಂಡಿ ಲಿಮಿಟೆಡ್. ಸಂಜೆ ಒಂದು ಗ್ಲಾಸು ಕಾಫಿ. ಇದ್ದರೆ ಹಲಸಿನ ಹಣ್ಣು ಒಂದು ಹಪ್ಪಳ ಹೀಗೇನಾದರೂ ಇರಲೂಬಹುದು. ಮನೆ ಹೆಂಗಸರು ತಾವೇ ಮಾತನಾಡುವಾಗ ಅವನ ಹೊಟ್ಟೆ ದೊಡ್ಡ, ಇವನ ಹೊಟ್ಟೆ ಸಣ್ಣ ಎಂದರೆ ಆಳಿನ ಆಹಾರಕ್ಕೆ ಅನುಗುಣವಾದ ಮಾತದು.

ಕೆಲಸದಲ್ಲಿ ಬಲವಾದರೂ ಅದ್ದುವಿನ ಹೊಟ್ಟೆ ದೊಡ್ಡದಲ್ಲ ಎಂಬುದು ಅವನ ಬಗ್ಗೆ ಮನೆ ಹೆಂಗಸರ ಮಾತು. ಅವನಿಗೆ ಒಂದು ಗ್ಲಾಸು ಚಾಯವೋ ಕಾಫಿಯೋ ಹೆಚ್ಚಿಗೆ ಸಿಕ್ಕಿದರೆ ಸಂತೋಷವೇ ಹೊರತು ಒಂದು ಮುಷ್ಟಿ ಅನ್ನ ಹೆಚ್ಚು ತಿನ್ನಲಾರ ಎಂಬುದು ಅವರ ಅಭಿಪ್ರಾಯ.

ಇಂತಹ ಅದ್ದು ಸಣ್ಣ ಪ್ರಾಯದಿಂದಲೇ ಅಬ್ಬೋಕರೆಯ ಮಣ್ಣಿನ ಕೆಲಸಗಳಿಂದಾಗಿ ನಮ್ಮ ಮನೆಯಲ್ಲಿ ಪರಿಚಿತ. ಯಾರೊಡನೆಯೂ ಜಗಳಾಡುವ ಜಬರ್ದಸ್ತಿನ ಮನುಷ್ಯ ಅಲ್ಲ. ಆವು, ಆವು (ಆಯಿತು, ಆದೀತು) ಎಂದು ಹೇಳಿ ಅದು ಇದು ಕೆಲಸ ಮಾಡುತ್ತಿದ್ದ. ಒಣಗಿದ ಸಲಿಕೆ, ಸೌದೆ ತುಂಡುಗಳನ್ನು ಅಡಿಗೆ ಸೌದೆ ಅಟ್ಟಿಗೆ ತಂದು ಸೇರಿಸುತ್ತಿದ್ದ. ಒಣಗಿದ ತೆಂಗಿನ ಮಡಲಿನ ತುದಿಭಾಗವನ್ನು ಕತ್ತರಿಸಿ ಹೆಂಗಸರಿಗೆ ಒಲೆ ಹೊತ್ತಿಸಲು ಅನುಕೂಲವಾಗುವಂತೆ ಸೌದೆ ಅಟ್ಟೆ ಮೇಲೆ



ಇರಿಸುತ್ತಿದ್ದ. ಅವನ ಸಹಜವಾದ ನಯ ವಿನಯಗಳಿಂದಾಗಿ ಅವನು 'ಅಕ್ಕೆ, ಒಂಚೂರು ತರೆ ಬೇನೆ' (ಅಕ್ಕಾ ಸ್ವಲ್ಪ ತಲೆ ನೋವು) ಎಂದೇನಾದರೂ ಹೇಳಿದರೆ, ಅವನಿಗೆ ಒಂದು ಎಕ್ಸ್ಟ್ರಾ ಗ್ಲಾಸು ಚಹಾ ಅಥವಾ ಮಳೆಗಾಲದಲ್ಲಿ ಬಿಸಿ ಕಾಫಿ ಕೊಡಲು ಮನೆ ಹೆಂಗಸರು ಮುಂದಾಗುತ್ತಿದ್ದರು.

ಮನೆಯಲ್ಲಿ ಎಲ್ಲರಿಗೂ ಅದ್ದುವಿನ ಮೇಲಿದ್ದ ಪ್ರೀತಿ ಕಾರಣವಾಗಿ ಅವ ನಿತ್ಯ ಕೆಲಸಕ್ಕೆ ನಮ್ಮ ಮನೆಗೆ ಬರತೊಡಗಿದ. ಮನೆಯಲ್ಲಿ ಅವನ ಮೇಲಿನ ಪ್ರೀತಿ ವಿಶ್ವಾಸಗಳ ಪರಿಚಯ ನನಗಾದ್ದು ಅವನ ಮದುವೆಯ ಸಂದರ್ಭದಲ್ಲಿ. ವಿಟ್ಲ ಪಡ್ನೂರು ಗ್ರಾಮದಲ್ಲಿ ನಮ್ಮ ಮನೆ ತೋಟ. ನಮ್ಮ ತೋಟ ಪಡ್ನೂರು ಹಾಗೂ ಕೊಳ್ನಾಡು ಗ್ರಾಮಗಳ ಗಡಿ ಪ್ರದೇಶ. ತೋಟದ ಕೊನೆಗೆ ಹರಿಯುತ್ತಿದ್ದ ತೋಡಿನ (ಸಣ್ಣ ತೊರೆ) ಆಚೆ ಕೊಳ್ನಾಡು ಗ್ರಾಮ. ಆ ತೋಡನ್ನು ದಾಟಿ, ಗದ್ದೆ ಹುಣಿ ಮೇಲೆ ನಡೆದು ಬೆಟ್ಟಗಳ ಬುಡದಲ್ಲಿ ಸಾಗಿದರೆ ತುಸು ದೂರ ತಾಳಿತ್ತನೂಜಿ ಆ ಕಡೆ ಒಂದು ಬೆಟ್ಟದ ಬುಡದಲ್ಲಿ ಅದ್ದುವಿನ ಮನೆ. ಸುಮಾರು ಒಂದು ಮೈಲಿಗೂ ಹೆಚ್ಚು ನಡೆದು ಅವನು ನಮ್ಮ ಮನೆಗೆ ಕೆಲಸಕ್ಕೆ ಬರುತ್ತಿದ್ದ.

ಅದ್ದುವಿಗೆ ಮದುವೆ ನಿಶ್ಚಯವಾದಾಗ ನಮ್ಮ ಮನೆಯವರು ಅವನಿಗೆ ಮದುವೆ ಖರ್ಚಿಗೆ ಸಾಲ

ಕೊಡುವುದಕ್ಕೆ ಒಪ್ಪಿದರು. ಅದರ ಅರ್ಥ ಅವ ಹೆಚ್ಚು ಸಮಯ ನಮ್ಮ ಮನೆಯಲ್ಲಿ ಕೆಲಸ ಮಾಡಿ ಆ ಸಾಲವನ್ನು ಚೂಟಿಯಾನು (ಮುಗಿಸಿಯಾನು) ಎಂಬುದು. ಅವನು ವಿಶ್ವಾಸಕ್ಕೆ ಅರ್ಹ ಎಂಬ ಒಂದು ವಿಚಾರ ಅಲ್ಲಿಗೇ ಸಾಬೀತಾಯಿತು.

ಅವನಿಗೆ ಮದುವೆ ನಿಶ್ಚಯವಾದ ಹುಡುಗಿ ಉಕ್ಕುಡದವಳು. ಉಕ್ಕುಡ ಎಂಬುದು ವಿಟ್ಲದಿಂದ ಕಾಸರಗೋಡು ದಾರಿಯಲ್ಲಿ ಎರಡು ಮೈಲು ದೂರ. ವಿಟ್ಲಕ್ಕೆ ನಮ್ಮ ಮನೆಯಿಂದ ಕನಿಷ್ಠ ಐದು ಮೈಲು. ಉಕ್ಕುಡದಲ್ಲಿ ಹೆಣ್ಣಿನ ಮನೆಗೆ, ಮದುವೆಗೆ ಹೋಗುವ ಅದ್ದುವಿನ ಆಪ್ತರ ದಿಬ್ಬಣ ಹೆಚ್ಚುಕಮ್ಮಿ ಇಪ್ಪತ್ತು ಜನರು ನಮ್ಮ ಮನೆ ಎದುರಿನ ರಸ್ತೆಯಲ್ಲಿ ನಡೆದು ಪಾಲತ್ತಿಮಾರಿಗೆ ಹೋಗಿ ಅಲ್ಲಿಂದ ವಿಟ್ಲದ ಮೂಲಕ ಉಕ್ಕುಡ ಸೇರಬೇಕು. ಮದುವೆಯ ಸಂದರ್ಭಕ್ಕಾಗಿ ಅದ್ದು ಅರ್ಥಬಾಯಿಯ (ಸ್ಲಿಪ್ ಆನ್) ಬೂಟ್ಸ್ ತೆಗೆದಿದ್ದ. ಅವ ಬಿಳಿ ಪಂಚೆ ಸುತ್ತಿ ಆ ಶೂಸ್ ಹಾಕಿಕೊಂಡು ದಿಬ್ಬಣದಲ್ಲಿ ಇತರರೊಡನೆ ರಸ್ತೆಯಲ್ಲಿ ನಡೆದುಕೊಂಡು ಹೋಗುವಾಗ ನನಗೆ ಅದೊಂದು ಸಣ್ಣ ಗುಂಪು ರಸ್ತೆಯಲ್ಲಿ ನಡೆದು ಹೋಗುವಂತೆ ಭಾಸವಾಯಿತು. ಆ ದಿನ ನಮ್ಮ ಮನೆಯ ಹೆಂಗಸರು, ಮನೆಯಲ್ಲಿದ್ದ ಮಕ್ಕಳು, ಅಂಗಳದಲ್ಲಿದ್ದ ಹೆಣ್ಣಾಳುಗಳೆಲ್ಲಾ ರಸ್ತೆ ಕಾಣುವ ಹಾಗೆ ನಿಂತು ಅವ ನಡೆದು ಹೋಗುವುದು ಕಾಣುವಷ್ಟು ದೂರ ನೋಡುತ್ತಾ ನಿಂತಿದ್ದರು. ನಮ್ಮ ಮನೆ ಹೆಂಗಸರು ಅದ್ದು ಮದುವೆಗೆ ಮಾಡಿಸಿದ ಹೊಸ ಅಂಗಿ ಇತ್ಯಾದಿ ಹಾಕಿಕೊಂಡಿದ್ದಾನೆ; ಒಳ್ಳೆಯ ಹುಡುಗ, ಅವನಿಗೆ ಸಿಕ್ಕಿದ ಹುಡುಗಿ ಒಳ್ಳೆಯವಳಾದರೆ ಸಾಕು ಇತ್ಯಾದಿ ಮಾತಾಡಿಕೊಂಡರು. ಅದ್ದುವ ಬಗ್ಗೆ ಮನೆಯಲ್ಲಿ ಎಲ್ಲರಿಗೂ ಆ ರೀತಿ ಪ್ರೀತಿ, ವಿಶ್ವಾಸ ಇತ್ತು. ಅದು ಹೇಗೆ ಬದಲಾಯಿತು ಎಂಬುದನ್ನು ಹೇಳುವುದಕ್ಕಾಗಿ ಈ ವಿವರ ನೀಡಬೇಕಾಯಿತು.

ಅಂತಹ ಅದ್ದು ಮದುವೆಯಾಗಿ ಸಂಸಾರ ಹೂಡಿದ. ಬೆಳಿಗ್ಗೆ ಬೇಗ ಕೆಲಸಕ್ಕೆ ಬರುತ್ತಿದ್ದ. ಹೆಚ್ಚಿಗೆ ಆದಾಯ ಬರುವ ಯಾವ ಕೆಲಸವನ್ನಾದರೂ ಮಾಡಿ ಅವ ಚೆನ್ನಾಗಿ ಬದುಕಬೇಕು ಎಂದು ಆಸೆ ಪಡುತ್ತಿದ್ದ. ಅದ್ದುವಿನ ಹೆಂಡತಿ ಕೆಲಸಕ್ಕೆ ಬರುತ್ತಿರಲಿಲ್ಲ. ಅವಳಿಗೆ ಸ್ವಲ್ಪ ಬೀಡಿಕಟ್ಟುವುದಕ್ಕೆ ತಿಳಿಯುತ್ತದೆ ಎಂದು ಅವ ಹೇಳಿದ್ದ.

ಇಂತಹ ಅದ್ದುವಿಗೆ ಒಂದು ಗುಪ್ತವಾದ ಆಸೆ ಇತ್ತು ಮತ್ತು ಅದು ಬಹುದಿನಗಳಿಂದ ಅವನೊಳಗೆ ಭದ್ರವಾಗಿ ಕುಳಿತು ಮೊಳಕೆಯೊಡೆದಿತ್ತು ಎಂದು ನನಗೆ ನಿಧಾನವಾಗಿ ತಿಳಿಯಿತು. ಅವನಿಗಿದ್ದ ಆಸೆ: ತನ್ನದೇ ಆದ ಒಂದು ಪುಟ್ಟ ಟ್ರಾನ್ಸಿಸ್ಟರ್ ರೇಡಿಯೋ ಬೇಕು. ಬ್ಯಾಟರಿಯಲ್ಲಿ ನಡೆಯುವ ಆ ರೇಡಿಯೋವನ್ನು ಕೈಯಲ್ಲಿ ಎತ್ತಿಕೊಂಡು ಶುಕ್ರವಾರ ಪದವಿಗೆ ಅಥವಾ ಮದಕ್ಕದ ಅಂಗಡಿಗೆ ಹೋಗಬೇಕು. ಅವನ ಮನೆಯಲ್ಲಿ ವಿದ್ಯುತ್ ಇಲ್ಲ. ಸಂಜೆ ಕೆಲಸ ಮುಗಿಸಿ ಮನೆಗೆ ಹೋದ ಬಳಿಕ ಬ್ಯಾಟರಿಯಲ್ಲಿ ನಡೆಯುವ ಟ್ರಾನ್ಸಿಸ್ಟರ್ ರೇಡಿಯೋದಲ್ಲಿ ಸಂಗೀತ, ಸಿನಿಮಾ ಗೀತೆ ಕೇಳಬೇಕು. ಕೃಷ್ಣಪ್ಪನ ಕೈಯಲ್ಲಿ ಇರುವಂತಹ ರೇಡಿಯೋ ಆದರೆ ಸಾಕು. ಅಕಸ್ಮಾತ್ ಅದಾಗದಿದ್ದರೆ ಅದರಿಂದ ತುಸು ದೊಡ್ಡದಾದ ಮರ್ಫಿ ರೇಡಿಯೋವೂ ಆದೀತು.

ಈ ಕೃಷ್ಣಪ್ಪ ಅಲಿಯಾಸ್ ಕೃಷ್ಣಪ್ಪ ಗೌಡ ಅಂದರೆ ನಮ್ಮೂರಿನ ಕೂಲಿ ಇತ್ಯಾದಿ ತರುಣ ಕೆಲಸಗಾರರ ಆಸೆಯ ಪ್ರತೀಕದಂತಿದ್ದ. ಅವ ಯಾವಾಗಲೂ ಅಂದವಾದ ಲುಂಗಿ (ಬಣ್ಣ ಬಣ್ಣದ ಪಂಚೆ) ಧರಿಸುತ್ತಿದ್ದ. ಅರ್ಧ ಕೈಯ ಸ್ಯಾಂಡೋ ಬನಿಯನ್ ಹಾಕುತ್ತಿದ್ದ. ಮಣ್ಣು ಮುತ್ತಿತರ ಕೆಲಸಗಳ ಕಾಂಟ್ರಾಕ್ಟ್ ಕೆಲಸ ತೆಗೆದುಕೊಳ್ಳುತ್ತಿದ್ದ. ಆವ ಅಪ್ಪೋಕರೆಯ ಕಂಟ್ರಾಕ್ಟರ್ ಪಾರ್ಟ್ನರ್ ಆಗಿ ಮಣ್ಣು ಅಗೆಯುವ ಕೆಲಸಮಾಡುತ್ತಿದ್ದ. ವಿಟ್ಲದಲ್ಲಿ ಸಿನಿಮಾ ನೋಡುತ್ತಿದ್ದ. ಅವನ ಕೈಯಲ್ಲಿ ಯಾವಾಗಲೂ, ಚರ್ಮದ ಕವರು ಇರುವ ಒಂದು ಟ್ರಾನ್ಸಿಸ್ಟರ್ ರೇಡಿಯೋ ಇರುತ್ತಿತ್ತು. ಅದರಲ್ಲಿ ಅವ ಸಂಗೀತ, ವಾರ್ತೆ ಹೀಗೆ ಏನಾದರೂ ಕೇಳುತ್ತಿದ್ದ. ಗುಡ್ಡದ ಹಾದಿಯಲ್ಲಿ, ಗದ್ದೆಯ ಹುಣಿಗಳಲ್ಲಿ ರೇಡಿಯೋ ಸ್ವರ ಕೇಳಿಸಿತೆಂದರೆ ಕೃಷ್ಣಪ್ಪ ಬರುತ್ತಿದ್ದಾನೆ ಎಂದೇ ಅರ್ಥ. ಅವ ಹೆಚ್ಚು ಕಮ್ಮಿ ಅದ್ದುವಿಗಿಂತ ಎರಡೋ ನಾಲ್ಕೋ ವರುಷಗಳಷ್ಟು ಹಿರಿಯನಾಗಿದ್ದಿರಬಹುದು.

ಅಂತಹ ಒಂದು ರೇಡಿಯೋದ ಆಸೆ ಮನಸ್ಸಿಗೆ ಹೊಕ್ಕ ಅದ್ದು ಕಷ್ಟ ಪಟ್ಟು ಹೆಚ್ಚಿಗೆ ಸಂಪಾದಿಸಿ ಒಂದು ಟ್ರಾನ್ಸಿಸ್ಟರ್ ರೇಡಿಯೋ ಕೊಳ್ಳಲು ಎಲ್ಲಾ ರೀತಿಯ ಪ್ರಯತ್ನ ಪಡುತ್ತಿದ್ದ. ಆಗ ಒಂದು ಟ್ರಾನ್ಸಿಸ್ಟರ್ ರೇಡಿಯೋ ಬೆಲೆ ಸುಮಾರು ನಾಲ್ಕುನೂರು ರೂಪಾಯಿಗಳು. ಅದ್ದುವಿನ ದಿನಕೂಲಿ ಮೂರು ರೂಪಾಯಿ ಚಿಲ್ಲರೆ. ಅದು ಪೆಟ್ರೋಲಿನ ಬೆಲೆ ಲೀಟರ್‌ಗೆ ಐದು ರೂಪಾಯಿ ಆಗುವ ಮೊದಲಿನ ಕಾಲ. ಇಂದಿರಾ ಗಾಂಧಿಯವರ ದೊಡ್ಡ ಕೊರತೆಯ ಕೇಂದ್ರ ಬಜೆಟ್‌ಗಳು ಬರುವ ಮುಂಚಿನ ದಿನಗಳು.

ಆಗ ನಮ್ಮ ಊರಿನ ಮುಸಲ್ಮಾನರ ಒಂದಿಬ್ಬರು ಸಂಬಂಧಿಕರು ಗಲ್ಫ್ ದೇಶಗಳಲ್ಲಿ ಕೆಲಸಮಾಡುತ್ತಿದ್ದರು. ಅವರು ನಮ್ಮ ಊರಿನ ಸಂಬಂಧಿಕರ ಮನೆಗೆ ಬರುವಾಗ ಕೈಯಲ್ಲಿ ದೊಡ್ಡ ಸೈಜಿನ ಟೂ-ಇನ್-ಒನ್ ಪೆಟ್ಟಿಗೆ ಹೊತ್ತುಕೊಂಡು ತಿರುಗಾಡುತ್ತಿದ್ದರು. ಅದರಲ್ಲಿ ಟೇಪ್‌ರೆಕಾರ್ಡರ್ ಹಾಗೂ ರೇಡಿಯೋ ಎರಡೂ ಇರುತ್ತಿತ್ತು. ಅದನ್ನು ಕೈಯಲ್ಲಿ ಹೊತ್ತುಕೊಂಡು ತಿರುಗಾಡುವುದೇ ಒಂದು ಪ್ರತಿಷ್ಠೆಯ ಸಂಕೇತ. ಅದರ ಬೆಲೆ ಆಗ ಸುಮಾರು ಎರಡು ಸಾವಿರ. 'ಎಂಕು ಅತು ಚಲ್ಲವು ಬೋಡ್ಚಿ' (ನನಗೆ ಅಷ್ಟು ದೊಡ್ಡದೆಲ್ಲಾ ಬೇಡಪ್ಪ), ಒಂದು ಪುಟ್ಟ ಟ್ರಾನ್ಸಿಸ್ಟರ್ ರೇಡಿಯೋ ಇದ್ದರೆ ಸಾಕು ಎನ್ನುತ್ತಿದ್ದ ಅದ್ದು.

ಇಂತಹ ಅದ್ದು ಒಂದು ರೇಡಿಯೋ ತೆಗೆಯಲು ಸಕಲ ಸಾಹಸ ಮಾಡುತ್ತಿದ್ದ. ನಮ್ಮ ಮನೆಯಿಂದ ಇಪ್ಪತ್ತು ಮೈಲಿ ದೂರದಲ್ಲಿದ್ದ ತಾಲ್ಲೂಕು ಕೇಂದ್ರ ಪುತ್ತೂರಿನಲ್ಲಿ ತಿಲಕ ವಾಚ್ ವರ್ಕ್ಸ್ ಅಂಗಡಿಯಲ್ಲಿ ನಾರಾಯಣ ತಿಲಕರು ರೇಡಿಯೋ ರಿಪೇರಿ ಮಾಡುತ್ತಿದ್ದರು. ನಾರಾಯಣ ತಿಲಕರು ಕುಟುಂಬದಲ್ಲಿ ನನಗೆ ದೊಡ್ಡಪ್ಪ. ಅವರ ಮೂಲಕ ಸೆಕೆಂಡ್ ಹ್ಯಾಂಡ್ ಉತ್ತಮ ರೇಡಿಯೋ ಸಿಗಬಹುದೋ ಹೇಗೆಂದು ಒಮ್ಮೆ ನನ್ನಲ್ಲಿ ಕೇಳಿದ್ದ. ತಿಲಕ ದೊಡ್ಡಪ್ಪ ಇನ್ನೊಮ್ಮೆ ಮನೆಗೆ ಬಂದಾಗ ಸೆಕೆಂಡ್ ಹ್ಯಾಂಡ್ ರೇಡಿಯೋ ಎಷ್ಟು ಬೇಕಾಗಬಹುದು ಎಂಬುದನ್ನು ತಿಳಿಯ ಬಯಸಿದ್ದ.

ಅದ್ದುವಿನ ರೇಡಿಯೋದ ತೀವ್ರ ಆಸೆ ನನಗೊಂದು ವಿಶಿಷ್ಟ ಸಂದರ್ಭದಲ್ಲಿ ಅರಿವಾಯಿತು. ಅದು ನಡೆದದ್ದರ ಹಿನ್ನೆಲೆ ಹೀಗೆ:

೧೯೬೮-೭೦ನೇ ಇಸವಿಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನಲ್ಲಿ ಕ್ಯಾವೆಂಡಿಶ್ ಬಾಳೆ (ಬೆಂಗಳೂರಿನಲ್ಲಿ ಸಿಗುವ ದೊಡ್ಡ ಸೈಜಿನ ಪಚ್ಚೆ ಬಾಳೆ) ಬೆಳೆಯುವುದಕ್ಕೆ ವಿಶೇಷ ಪ್ರೋತ್ಸಾಹ ಬಂತು. ಆ ಮೊದಲು

ಊರಿಗೆ ಕಟ್ಟೆ ರೋಗ (ಒಂದು ರೀತಿಯ ವೈರಸ್) ಬಂದು ಊರಲ್ಲಿದ್ದ ಬಾಳೆಯ ತಿರಿಯೆಲ್ಲಾ ಮೊಂಡಾಗಿ ತೋಟಗಳಲ್ಲಿ ಬಾಳೆಯೇ ಇಲ್ಲ ಎಂಬ ಸ್ಥಿತಿ ತಲುಪಿತ್ತು. ಬಾಳೆಗಿಡಗಳನ್ನು ಅಡಿಕೆ ತೋಟದ ಹೊರಗೂ ಬೆಳೆಯುವುದನ್ನು ಪ್ರೋತ್ಸಾಹಿಸಲು ವಿಟ್ಲದ ಸಮೀಪದ ಕೇಂದ್ರ ಸರಕಾರದ ಅಡಿಕೆ ಸಂಶೋಧನಾ ಕೇಂದ್ರದವರು ಕ್ಯಾವೆಂಡಿಶ್ ಬಾಳೆ ಕಂದುಗಳನ್ನು ನೀಡಿ ಪ್ರೋತ್ಸಾಹಿಸುತ್ತಿದ್ದರು.

೧೯೭೨ರಲ್ಲಿ ಹೈಸ್ಕೂಲು ಓದುತ್ತಿದ್ದ ನಾನು ನಮ್ಮ ಮನೆ ಬಳಿ ಕೆಲವು ಕ್ಯಾವೆಂಡಿಶ್ ಬಾಳೆಗಳನ್ನು ಬೆಳೆದು ಸ್ವಲ್ಪ ಹಣ ಸಂಪಾದಿಸುವ ಯೋಚನೆ ಮಾಡಿದೆ. ನಮ್ಮ ಮನೆ ಬಲ ಭಾಗದಲ್ಲಿದ್ದ ಬಿಸಿಲು ಬಾಯಿ (ಮರಗಳ ನೆರಳು ಇಲ್ಲದ) ಪುಟ್ಟ ಗದ್ದೆಯ ತುಂಡೊಂದು ಖಾಲಿ ಬಿತ್ತು. ಒಂದು ವರುಷದಿಂದ ಅಲ್ಲಿ ಗದ್ದೆ ಸಾಗುವಳಿ ಮಾಡುವುದು ಸಾಧ್ಯವಾಗಲಿಲ್ಲ. ಸ್ವಲ್ಪ ತರಕಾರಿ ಅದು ಇದು ಬೆಳೆಯುತ್ತಿದ್ದೆವು.

ಆ ಜಾಗದಲ್ಲಿ ನಾನು ಕ್ಯಾವೆಂಡಿಶ್ ಬಾಳೆ ಬೆಳೆಯುವುದು. ಅದರ ಖರ್ಚು ಕಳೆದು ಉಳಿದ ದುಡ್ಡು ನನಗೆ ಪೊಕೆಟ್ ಮನಿ. ಅದಕ್ಕೆ ನೀರು ಹಾಯಿಸುವಾಗ ನಡುವೆ ಬೆಳೆವ ತರಕಾರಿಗೂ ನೀರು ಹಾಕಬೇಕು. ಆ ತರಕಾರಿ ಮನೆಗೆ ಎಂದು ನನ್ನ ತಂದೆಯವರೊಡನೆ ಒಪ್ಪಂದವಾಯಿತು. ನಾನು ಸೈಕಲಿನಲ್ಲಿ ವಿಟ್ಲದಿಂದ ಅಡಿಕೆ ಸಂಶೋಧನಾ ಕೇಂದ್ರಕ್ಕೆ ಹೋಗಿ ವಿವರ ತಿಳಿದು ಬಂದೆ.

ಎರಡು ಅಡಿ ಅಗಲ, ಎರಡು ಅಡಿ ಆಳದ ಬಾಳೆ ಗುಂಡಿ (ಹೊಂಡ) ಅಗೆಯಲು ನಾನು ಅಂತರ ಬಿಟ್ಟು ನೇರವಾಗಲು ಹಗ್ಗ ಹಿಡಿದು ಕುಟ್ಟಿ ಹಾಕಿದೆ (ಸಣ್ಣ ಅಡಿಕೆ ಸಲಿಕೆ - ಸೌದೆಚೂರುಗಳನ್ನು ಬಾಳೆ ಗಿಡ ನಿಲ್ಲಬೇಕಾದಲ್ಲಿ ಊರಿ ತೋಟದ ಪ್ಲಾನು ಮಾಡುವುದು). ಒಟ್ಟು ಮೂವತ್ತೆರಡು ಕುಟ್ಟಿಗಳು ನಿಂದವು. ಅಂದರೆ ಮೂವತ್ತ ಎರಡು ಬಾಳೆ ಹೊಂಡಗಳು ಆಗಬೇಕು.

ನನಗೆ ಹಗ್ಗ ಹಿಡಿಯುವುದು ಇತ್ಯಾದಿಗಳಲ್ಲಿ ಸಹಕರಿಸುತ್ತಿದ್ದ ಅದ್ದು, ಬಾಳೆಗುಂಡಿಗಳನ್ನು ಅವನಿಗೆ ಕಂಟ್ರಾಕ್ಟ್ ಕೊಡಬೇಕೆಂದೂ, ಅವ ಬೆಳಿಗ್ಗೆ ಬೇಗ ಬಂದು ಎರಡು ದಿನಗಳಲ್ಲೇ ಕೆಲಸ ಮುಗಿಸುವುದಾಗಿಯೂ, ಹಾಗೆ ದಿನ ಮಜೂರಿಯಿಂದ ಹೆಚ್ಚಿಗೆ ಆಗುವ ಸಂಪಾದನೆ ಅವನ ರೇಡಿಯೋ ಕೊಳ್ಳುವುದಕ್ಕೆ ಸಹಕಾರ ಎಂದು ಅವನ ಬೇಡಿಕೆ ಮುಂದಿಟ್ಟ. ಒಂದು ಗುಂಡಿಗೆ ಇಪ್ಪತ್ತೈದ ಪೈಸೆಯ ಹಾಗೆ ಅವನಿಗೆ ಕಂಟ್ರಾಕ್ಟ್ ನಿಶ್ಚಯವಾಯಿತು.

ಅದ್ದು ಬೆಳಿಗ್ಗೆ ಕಾಗೆ ಕೂಗುವುದರೊಳಗೆ ಮನೆ ತಲುಪಿ ಗುಂಡಿ ತೋಡಲು ಶುರು ಮಾಡಿದ. ಆದರೆ ಅದ್ದುವಿನ ಗ್ರಹಚಾರ ಚೆನ್ನಾಗಿರಲಿಲ್ಲ. ಆ ಗದ್ದೆಯ ಕೆಳಗೆ ಮುರಕಲ್ಲು (ಲ್ಯಾಟ್‌ರೈಟ್ ಸ್ಟೋನ್). ಅದನ್ನು ಅಷ್ಟು ವೇಗವಾಗಿ ಅಗೆಯಲು ಆಗುತ್ತಿರಲಿಲ್ಲ. ಹಗಲೆಲ್ಲಾ ಗದ್ದೆಗೆ ವಿಪರೀತ ಬಿಸಿಲು. ಅದ್ದು ಬಸವಳಿದುಹೋದ. ಅವನಿಗೆ ದಿನಕೂಲಿ ಸಂಬಳ ಆಗುವಷ್ಟು ಕೂಡ ಗುಂಡಿಗಳನ್ನು ತೆಗೆಯಲು ಆಗಲಿಲ್ಲ.

ಕಂಟ್ರಾಕ್ಟ್ ನಿಯಮದ ಪ್ರಕಾರ ಅವನಿಗೆ ಸಂಪೂರ್ಣ ಆದ ಒಂದು ಗುಂಡಿಗೆ ಇಪ್ಪತ್ತೈದು ಪೈಸೆಯಂತೆ ಲೆಕ್ಕಾಚಾರ ಮಾಡಿ ಕೊಡಬೇಕು. ಮಧ್ಯಾಹ್ನ ಊಟ ಮನೆಯಲ್ಲೆ, ಕಂಟ್ರಾಕ್ಟ್ ಆದರೂ ತೊಂದರೆ ಇಲ್ಲ ಎಂದು ಅದ್ದು ಬಗ್ಗೆ ಅಲಿಖಿತ ಒಪ್ಪಂದ ಇತ್ತು. ಅವನಿಗೆ ದುಡ್ಡಿನಲ್ಲಿಯೂ ಸೋಲಾಯಿತು. ಆದರೆ ಅದ್ದುವಿನ ಬಗ್ಗೆ ಇದ್ದ ಸದಭಿಪ್ರಾಯದಿಂದ ಮನೆಯಲ್ಲಿದ್ದ ನನ್ನ ಅತ್ತೆ ಹಾಗೂ ತಂದೆಯವರು ಅದ್ದು ಮಾಡಿದ ಗುಂಡಿಗಳು ಕಮ್ಮಿಯಾದರೂ ಅವನಿಗೆ ಇಪ್ಪತ್ತೈದು ಪೈಸೆ ಲೆಕ್ಕಾಚಾರದಲ್ಲಿ ದಿನಕೂಲಿಯ ಎಷ್ಟು ಕಮ್ಮಿಯಾಗುತ್ತದೋ ಅಷ್ಟನ್ನು ತುಂಬಿ ಅವನ ದಿನಕೂಲಿ ಪೂರ್ತಿ ಕೊಡಲು ನಿಶ್ಚಯಿಸಿದರು. ಅವನಿಗೆ ದಿನಕೂಲಿಗೆ ಕಮ್ಮಿಯಾದ್ದನ್ನು ತುಂಬಿಕೊಡಬಹುದು ಎಂದೂ ಹೇಳಿದರು.

ಆದರೂ, ಸ್ವಾಭಿಮಾನಿಯಾದ ಅದ್ದು ಮಾರನೆ ದಿನವೂ ಬೆಳಿಗ್ಗೆ ಬೇಗ ಬಂದು ಸಂಜೆ ಕತ್ತಲಾಗುವವರೆಗೆ ಇದ್ದು ಕಂಟ್ರಾಕ್ಟ್‌ನಂತೆ ದಿನಗೂಲಿಗಿಂತ ಸ್ವಲ್ಪ ಹೆಚ್ಚೇ ಕೆಲಸ ಮಾಡಿದ. ಕಂಟ್ರಾಕ್ಟ್ ಲೆಕ್ಕ ಅಲ್ಲದೆ ಅವನಿಗೆ ನಷ್ಟವಾಗದಿರಲಿ ಎಂದು ಒಂದು ದಿನದ ಕೂಲಿಯನ್ನು ಇನಾಮು ಬಹುಮಾನ ಎಂದು ಮನೆಯಲ್ಲಿ ನೀಡಿದರು. ಅದಕ್ಕೆ ಪ್ರತಿಯಾಗಿ ಅದ್ದು, ಸಂಜೆ ನಾನು ಶಾಲೆಯಿಂದ ಬಂದ ಬಳಿಕ, ಅಡಿಕೆ ಸಂಶೋಧನಾ ಕೇಂದ್ರದಿಂದ ನನ್ನ ಸೈಕಲಿಗೆ ಕಟ್ಟಿತಂದಿದ್ದ ಬಾಳೆಕಂದುಗಳನ್ನು ಕ್ರಿಮಿನಾಶಕಗಳಲ್ಲಿ ಅದ್ದಿ ಬಾಳೆಗುಂಡಿಯಲ್ಲಿಟ್ಟು ಮಣ್ಣುಹಾಕಲು ರಾತ್ರಿವರೆಗೆ ಸಹಾಯ ಮಾಡಿದ.

ಅವ ಬಾಳೆ ಗುಂಡಿ ತೆಗೆಯುವಾಗ ಬಿಸಿಲಿಗೆ ಬಸವಳಿದು ಸುಸ್ತಾಗಿ ಹೋಗಿದ್ದ. ಸಂಜೆ ಅವನಿಗೆ ವಿಪರೀತ ತಲೆ ನೋಯುತ್ತಿತ್ತು. ಅವ ನಮ್ಮ ಮನೆಯ ಮಾಡಿನ ಬದಿಯಲ್ಲಿ ಸಂಜೆ ತಲೆಗೆ ಕೈ ಅಮುಕಿ ಸುಸ್ತಾಗಿ ನಿಂತಿದ್ದ. ಆ ಕಡೆ ಬಂದ ನನ್ನ ಅಮ್ಮನಲ್ಲಿ 'ತರೆ ಬೇನೆ ದಾಲ ತೀರುಜ್ಜಿ ಅಕ್ಕೆ' (ತಲೆ ನೋವು ಏನೂ ಕೂಡುವುದಿಲ್ಲ ಅಕ್ಕಾ) ಎಂದು ಹೇಳಿದ. ನನ್ನ ತಾಯಿಗೂ ವಿಪರೀತ ಮೈಗ್ರೇನ್ ತಲೆನೋವು ಬರುತ್ತಿತ್ತು . ಯಾವಾಗಲೂ ಅವರ ಬಳಿ ಒಂದು ಅಮೃತಾಂಜನದ ಡಬ್ಬಿ ಇರಬೇಕು. ಆ ದಿನ ಅವರಲ್ಲಿದ್ದ ಅಮೃತಾಂಜನ ಮುಗಿಯುತ್ತಾ ಬಂದಿತ್ತು. ಅಮ್ಮನಿಗೆ ಮೈಗ್ರೇನ್ ಎಟ್ಯಾಕ್ ಆಗುವಾಗ ಅಮೃತಾಂಜನ ಹಚ್ಚಿ ಒಂದು ಗಂಟೆ ಕಣ್ಣು ಮುಚ್ಚಿ ಮಲಗಿದರೆ ಒಮ್ಮೊಮ್ಮೆ ಅಲ್ಲಿಗೇ ಅದರ ಎಟ್ಯಾಕ್ ಹಾರಿಹೋಗುತ್ತಿತ್ತು. ಆದ್ದರಿಂದ ಅಮೃತಾಂಜನ ಇಲ್ಲದೆ ಇರುವುದಕ್ಕೆ ಒಂದು ದಿನವೂ ಅವಳು ಬಿಡುತ್ತಿರಲಿಲ್ಲ.

ತಲೆ ನೋವಿನಿಂದ ಬಾಡಿದ ಅದ್ದುವಿನ ಮುಖ ಕಂಡು ನನ್ನ ಅಮ್ಮ ಮಾಳಿಗೆಗೆ ಹೋಗಿ ಅವಳ ಬಳಿ ಇದ್ದ ಮುಗಿಯುತ್ತಾ ಬಂದಿದ್ದ ಅಮೃತಾಂಜನದ ಡಬ್ಬಿಯನ್ನು ಅದ್ದುವಿಗೆ ಕೊಟ್ಟು ''ಇದನ್ನು ಹಾಕಿಕೋ ಸ್ವಲ್ಪ ತಲೆನೋವು ಕಮ್ಮಿಯಾಗುತ್ತದೆ'' ಎಂದು ಹೇಳಿದಳು. ''ಬಿಸಿಲ ಬಾಯಿಗೆ ಕೆಲಸ ಮಾಡುವಾಗ ತಲೆಗೊಂದು ಬಟ್ಟೆಯಾದರೂ ಹಾಕಿಕೊಳ್ಳಬಾರದೆ. ಸಣ್ಣಪ್ರಾಯ, ತ್ರಾಣ ಉಂಟು ಎಂದು ನೆಲ ಅಗೆಯುವಾಗ ಬಿಸಿಲಿಗೆ ಹಾಗೆ ಕಾಲಿ ತಲೆ ಬಿಡುವುದೆ'' ಎಂದು ಗದರಿದಳು. ''ಎಲ್ಲೆ ಬಂಜಿವಲ್ಲಿ ತರೆಕ್ಕು ಪಾಡೋಣ್‌ಬೆ, ಅಕ್ಕೆ'' (ನಾಳೆ ತಲೆಗೆ ಒಂದು ಬಟ್ಟೆ ಕಟ್ಟಿಕೊಳ್ಳುತ್ತೇನೆ ಅಕ್ಕ) ಎಂದು ಹೇಳಿ ಹಣೆಗೆ ಅವ ಅಮೃತಾಂಜನ ತಿಕ್ಕಿಕೊಂಡ. ಅಮ್ಮನಿಗೆ ಮೈಗ್ರೇನ್ ಎಟ್ಯಾಕ್ ಆದಾಗ ಅಮೃತಾಂಜನ ಇಲ್ಲದಿದ್ದರೂ ಪರವಾಗಿಲ್ಲ, ಈಗ ಅವನ ತಲೆನೋವಿಗೆ ಅದನ್ನು ಕೊಡೋಣ ಎಂದು ಅವಳು ಯೋಚಿಸಿದಳು. ಮನುಷ್ಯ ಪ್ರೀತಿಯ ಸಹಜ ಮಾತುಗಳಾಗಿ ನನಗದು ಇನ್ನೂ ನೆನಪಿದೆ.

ಬಾಳೆ ತೋಟದ ನನ್ನ ಹೊಸ ಸಾಹಸಕ್ಕೆ ಅದ್ದು ಒಬ್ಬ ನೈನಾತಿ ಹಾಗೂ ವಿಶೇಷ ಕನ್‌ಸಲ್‌ಟೆಂಟ್ ಆಗಿ ಇನ್ನೂ ಹೆಚ್ಚು ಹತ್ತಿರವಾದ. ನಾನು ಬಾಳೆ ಬೆಳೆದು ಸುಪುಷ್ಟವಾದ ಕ್ಯಾವೆಂಡಿಶ್ ಗೊನೆಗಳನ್ನು ಅಂಗಡಿಗಳಿಗೆ ಮಾರಿ ನನ್ನ ಪಾಕೆಟ್ ಮನಿ ಮಾಡಿಕೊಂಡೆ. ಹೊಸ ಕಲಿಯುವಿಕೆಗಾಗಿ ಏನು ಮಾಡಿದರೂ ತಂದೆಯವರು ಬೇಡ ಎನ್ನುತ್ತಿರಲಿಲ್ಲ. ಬಾಳೆಯ ತೋಟದ ನೆಪದಲ್ಲಿ ಅದ್ದುವಿನ ರೇಡಿಯೋ ಕನಸು ನನಗೆ ಹೆಚ್ಚು ಮನದಟ್ಟಾಯಿತು. ನಾನು ಕೂಡ ಮರ್ಫಿ, ಫಿಲಿಪ್ಸ್, ಟೆಲ್ಕೋ ಇತ್ಯಾದಿ ರೇಡಿಯೋಗಳಿಗಿರುವ ಬೆಲೆಗಳ ವ್ಯತ್ಯಾಸ ಅವನಿಗೆ ಹೇಳುತ್ತಿದ್ದೆ. ನನ್ನ ಬಾಳೆಯ ಪೊಕೆಟ್ ಮನಿಯಿಂದ ಎಪ್ಪತ್ತೈದು ರೂಪಾಯಿ ವರೆಗೆ ಅವನಿಗೆ ರೇಡಿಯೋ ಕೊಳ್ಳುವುದಕ್ಕೆ ಸಾಲ ಕೊಡುವುದಕ್ಕೂ ತಯಾರಿದ್ದೆ. ಆದರೆ ಅವನಿಗೆ ಮದುವೆಗೆ ಮಾಡಿದ ಸಾಲ ಇತ್ಯಾದಿ ಇದ್ದುದರಿಂದ ನಮ್ಮ ಮನೆಯಲ್ಲಿ ರೇಡಿಯೋಕ್ಕಾಗಿ ಸಾಲ ಕೇಳುವುದು ಅವನಿಂದ ಸಾಧ್ಯವಾಗುತ್ತಿರಲಿಲ್ಲ.

ಅವನ ಈ ರೇಡಿಯೋ ಆಸೆಯಿಂದಲೇ ಮುಂದೆ ಅವನ ಬದುಕಿನಲ್ಲಿ ಸಾಕಷ್ಟು ಕಷ್ಟ, ನಷ್ಟ, ಅವಮಾನಗಳಾದುವು. ಮುಂದಿನ ಕಂತಿನಲ್ಲಿ ಅದನ್ನು ಸಂಕ್ಷಿಪ್ತವಾಗಿ ಹೇಳಲು ಯತ್ನಿಸುತ್ತೇನೆ.

ಎಸ್.ಆರ್.ವಿಜಯಶಂಕರ
ಸಿ-೨/೧೦೩, ಓಂಕಾರ್ ಅಪಾರ್ಟ್‌ಮೆಂಟ್ಸ್, ೮ನೇ ಮುಖ್ಯರಸ್ತೆ
ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

# ಆಹಾರ ಸುಭದ್ರತೆ

ಡಾ|| ಸೋಮಸುಂದರ್ ಮರ್ಲ

**ಆಹಾರ ಸುಭದ್ರತೆಯ ಸಮಸ್ಯೆ ವಿಶ್ವದಾದ್ಯಂತ ಇಂದು ಆದ್ಯತೆಯನ್ನು ಪಡೆದಿದೆ. ಮೊದಲಿಗೆ, ಅಗತ್ಯಕ್ಕೆ ಹೋಲಿಸಿದರೆ ಸಾಕಷ್ಟು ಆಹಾರದ ಉತ್ಪಾದನೆ ಇಲ್ಲದಿರುವ ಆತಂಕ. ಇನ್ನೊಂದು, ಇಂದಿನ ಮಾರುಕಟ್ಟೆಯ ವ್ಯವಸ್ಥೆಯಲ್ಲಿ ವಾಯಿದೆ ಮಾರುಕಟ್ಟೆಯಂಥ ಹಲವಾರು ಸ್ವರೂಪದ ದಲ್ಲಾಳಿ ಮತ್ತು ಸಟ್ಟಾ ವ್ಯಾಪಾರಕ್ಕೆ ದಿನೇ ದಿನೇ ಆಹಾರವೂ ಒಂದು ಸರಕಿನಂತೆ ಸಿಕ್ಕಿಕೊಂಡು, ಅದರ ಬೆಲೆ ಗಗನಕ್ಕೇರಿ, ಇರುವ ಅಲ್ಪಸ್ವಲ್ಪ ಆಹಾರವೂ ಬಹುಪಾಲು ಜನಕ್ಕೆ ದಕ್ಕದೆ ಹೋಗುತ್ತಿರುವ ಆತಂಕ. ಸಾರ್ವಜನಿಕ ವಿತರಣಾವ್ಯವಸ್ಥೆಯ ಅಗತ್ಯದಲ್ಲಿ ನಂಬಿಕೆ ಇರದ ಸರ್ಕಾರಗಳು ಸಮಸ್ಯೆಯ ತೀವ್ರತೆಯನ್ನು ಹೆಚ್ಚಿಸಿವೆ. ಬೆಳೆಯನ್ನು ಹೆಚ್ಚಿಸುವುದು ಹೇಗೆ, ಇರುವುದನ್ನು ನ್ಯಾಯಯುತವಾಗಿ ಹಂಚುವುದು ಹೇಗೆ, ದುರ್ಬಳಕೆಯನ್ನು, ಪೋಲುಮಾಡುವುದನ್ನು ತಡೆಯುವುದು ಹೇಗೆ ಎಂಬೀ ಚರ್ಚೆಗಳು ಈ ಆಧಾರ ಸುಭದ್ರತೆ ಚರ್ಚೆಯ ಹಲವು ಆಯಾಮಗಳು. ಪರಿಸರನಾಶ ಮಾಡದೆ ಕೃಷಿಭೂಮಿಯ ವಿಸ್ತರಣೆ ಸಾಧ್ಯವಿಲ್ಲ ಎಂಬುದನ್ನು ಸತತ ಗಮನದಲ್ಲಿಡಬೇಕು. ಸಾಕಷ್ಟು ಲಭ್ಯತೆ, ಖಾತರಿ, ಎಲ್ಲರಿಗೂ ನಿಲುಕುವುದು ಮತ್ತು ಪೌಷ್ಟಿಕಾಂಶಗಳ ಸಮರ್ಪಕತೆ ಇವೆಲ್ಲವುಗಳ ತಳಹದಿಯ ಮೇಲೆ ಆಹಾರ ಸುಭದ್ರತೆ ನಿಲ್ಲಬೇಕು.**

ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಜೂನಿಯರ್, ಆಹಾರದಲ್ಲಿ ಕೊರತೆ ಉಂಟಾಗಿರುವುದಕ್ಕೆ ಕಾರಣ ಭಾರತ ಮತ್ತು ಚೀನಾದೇಶಗಳ ಜನರು ಹೆಚ್ಚು ಆಹಾರವನ್ನು ಬಳಸುತ್ತಿರುವುದು ಎಂದು ಹೇಳಿದರು. ಇನ್ನೇನು ಅಸ್ತಂಗತನಾಗಲಿರುವ ಈ ಜೂನಿಯರ್ ಹೀಗೆ ಬಾಲಿಶವಾಗಿ ಮಾತನಾಡಿದನೆಂದು, ಆತನ ಬುದ್ಧಿವಂತಿಕೆಯ ಮಟ್ಟ ಜಗಜ್ಜಾಹೀರಾಗಿರುವಾಗ, ಅದನ್ನು ಗಂಭೀರವಾಗಿ ಚರ್ಚಿಸುವುದು ಅಗತ್ಯವಿಲ್ಲ. ಕಾರಣ ಆತನದೇ ಸರ್ಕಾರದ ಕೃಷಿ ಇಲಾಖೆ ತನ್ನ ೨೦೦೭ರ ಮಾಹಿತಿ ವರದಿಯಲ್ಲಿ ಭಾರತದ ತಲಾ ಆಹಾರ ಸ್ವೀಕಾರ ವಾರ್ಷಿಕ ಕೇವಲ ೧೭೮ ಕಿಲೋಗ್ರಾಂಗಳೆಂದು ತಿಳಿಸಿದೆ. ೨೦೦೩-೦೭ರ ನಡುವೆ ಅಮೆರಿಕಾದ ಪ್ರಜೆಯ ತಲಾ ವಾರ್ಷಿಕ ಆಹಾರ ಬಳಕೆ ೧೦೪೬ ಕೆಜಿ ಆಗಿತ್ತು. ಅಂದರೆ ವಾರ್ಷಿಕ ಸರಾಸರಿ ಅದು ೨೬.೨ ಕೆಜಿಗಳಾಗಿತ್ತು. ಈ ಅವಧಿಯಲ್ಲಿ ತಲಾ ಬಳಕೆ ಅಮೆರಿಕಾದಲ್ಲಿ ೪೫.೫ ಕೆಜಿಗಳಷ್ಟು ಹೆಚ್ಚಿದ್ದರೆ ಅದೇ ಅವಧಿಯಲ್ಲಿ ಭಾರತದಲ್ಲಿ ಯಾವ ವ್ಯತ್ಯಾಸವೂ ಆಗಲಿಲ್ಲ. ಇತ್ತೀಚಿನವರೆಗೆ ಕೆಲವು ವರ್ಷಗಳ ಹಿಂದೆಯೂ ಭಾರತದಲ್ಲಿ ಆಹಾರದ ವಿಷಯದಲ್ಲಿ ಸ್ವಯಂ ನಿರ್ಭರತೆ ಇತ್ತೆಂದು ಸರ್ಕಾರ ಹೇಳಿಕೊಂಡರೂ, ವಾಸ್ತವದಲ್ಲಿ ಇಂದಿಗೂ ಭಾರತದ ಬಹುಜನರಿಗೆ ದಿನಕ್ಕೆ ಎರಡು ಒಳ್ಳೆಯ ಗುಣಮಟ್ಟದ, ಸಾಕಷ್ಟು ಪ್ರಮಾಣದ ಊಟ ದೊರೆಯುತ್ತಿಲ್ಲವೆಂಬುದು ಕಟುವಾಸ್ತವ.

ವಿಶ್ವ ಆಹಾರ ಸಂಸ್ಥೆಯ ಏಪ್ರಿಲ್ ೨೦೦೭ರ ವರದಿಯಂತೆ, ೨೦೦೭-೦೮ರಲ್ಲಿ ಆಹಾರಧಾನ್ಯಗಳ ಬೆಲೆ ಶೇ. ೮೮ರಷ್ಟು ಹೆಚ್ಚಿತು. ತರಕಾರಿಗಳು, ಸೊಪ್ಪುಪಲ್ಲೆ, ಮತ್ತು ಖಾದ್ಯ ತೈಲಗಳ ಬೆಲೆಯಲ್ಲಿ ಶೇ. ೧೦೬ರಷ್ಟು ಏರಿಕೆ ಉಂಟಾಯಿತು. ಅಕ್ಕಿಯನ್ನು ರಫ್ತುಮಾಡುವ ಪ್ರಮುಖ ರಾಷ್ಟ್ರ ಥೈಲ್ಯಾಂಡ್‌ನಲ್ಲಿ ಟನ್ನಿಗೆ ೨೨೩ ಅಮೆರಿಕನ್ ಡಾಲರ್‌ನಿಂದ ದಿಢೀರನೆ ೧೦೦೦ ಡಾಲರಿಗೆ ಏರಿತು. ೩೩ ರಾಷ್ಟ್ರಗಳಿಗೆ ಸೇರಿದ ೨೬೦೦ ಕೋಟಿ ಜನರ ಜೀವನ ಈ ಅಪಾರ ಬೆಲೆ ಏರಿಕೆಯಿಂದ ಸಂತ್ರಸ್ತವಾಗಿದೆ. ಇವರ ದಿನಂಪ್ರತಿ ಕೂಲಿಯ ಸಂಪಾದನೆ ತಲಾ ೮೦ ರೂ.ಗಳಷ್ಟಿದ್ದರೆ ಹೆಚ್ಚು. ಈ ಬೆಳವಣಿಗೆಯ ವಿರುದ್ಧ ಈ ದೇಶಗಳಲ್ಲೆಲ್ಲಾ ತೀವ್ರ ಪ್ರತಿಭಟನೆಗಳು ನಡೆದುವು. ಹಲವು ಬಡದೇಶಗಳಲ್ಲಿ ರೊಚ್ಚಿಗೆದ್ದ ಜನ ಕಾಳಸಂತೆ ಕೋರರ ಗೋದಾಮುಗಳನ್ನು ಲೂಟಿಮಾಡಿದರು. ಪಾಕಿಸ್ತಾನ ಮತ್ತು ಥೈಲ್ಯಾಂಡ್ ದೇಶಗಳಲ್ಲಿ ಕೊಯ್ಲಿಗೆ ನಿಂತ ಫಸಲಿಗೂ ಪೊಲೀಸರ ಕಾವಲು ನೀಡಬೇಕಾಯ್ತು.

ಆಹಾರ ಧಾನ್ಯಗಳ ಬೆಲೆ ಉಬ್ಬರಕ್ಕೆ ಕಾರಣಗಳು ಹಲವು. ಮುಖ್ಯವಾದುವೆಂದರೆ (ಅ) ಆಹಾರ ಧಾನ್ಯಗಳಲ್ಲೂ ವಾಯಿದೆ ಮಾರುಕಟ್ಟೆಯ ಪ್ರವೇಶವಾದುದು; (ಆ) ಬೆಳೆಯುತ್ತಿರುವ ಪೆಟ್ರೋಲ್ ಮತ್ತು ಇಂಧನಗಳ ಮುಗ್ಗಟ್ಟಿಗೆ ಪರಿಹಾರವೆಂಬಂತೆ ಆಹಾರ ಧಾನ್ಯಗಳನ್ನು ಬಯೋಫ್ಯೂಯಲ್ ಅಂದರೆ ಇಥನಾಲ್‌ನಂಥ ಜೈವಿಕ ಇಂಧನಗಳ ತಯಾರಿಗೆ ಬಳಸುವುದು ಮತ್ತು ಇಂಥ ಧಾನ್ಯಗಳನ್ನೇ, ಮುಖ್ಯವಾಗಿ ಮೆಕ್ಕೆಜೋಳ, ಕಬ್ಬು ಮತ್ತು ಸೋಯಾಗಳನ್ನು ಬೆಳೆಯಲು, ಅಕ್ಕಿ, ಗೋಧಿ, ಎಣ್ಣೆ ಕಾಳುಗಳನ್ನು ಬೆಳೆಯುತ್ತಿದ್ದ ಭೂಮಿಯನ್ನು ಹೆಚ್ಚು ಹೆಚ್ಚು ಬಳಸಲು ಪ್ರಾರಂಭಿಸಿರುವುದು; (ಇ) ಜನಸಂಖ್ಯೆಯಲ್ಲಿ ಹೆಚ್ಚಳ; (ಈ) ವಿಶ್ವ ವ್ಯಾಪಾರ ಸಂಸ್ಥೆ, ವಿಶ್ವ ಹಣಕಾಸು ಸಂಸ್ಥೆ ಮತ್ತು ವಿಶ್ವ ಬ್ಯಾಂಕ್ ನಿರ್ದೇಶಿತ ಸಾಲದ ನೀತಿಗಳು ಮತ್ತು ನಿಬಂಧಗಳು; ಮತ್ತು (ಉ) ಕೃಷಿ ಸಂಶೋಧನೆಯನ್ನು ನಿರ್ಲಕ್ಷಿಸಿದ್ದು.

**ವಾಯಿದೆ ವ್ಯಾಪಾರ:** ಮುಂಬರುವ ತಿಂಗಳಲ್ಲೋ ವರ್ಷದಲ್ಲೋ ಇಷ್ಟಿಷ್ಟು ಪ್ರಮಾಣದ ಧಾನ್ಯಕ್ಕೆ ಇಂಥ ಬೆಲೆ ಬರುತ್ತದೆ ಎಂದು ಇಂದೇ ಪಣತೊಡುವುದು. ಗೊತ್ತಾದ ಆ ದಿನ ಬೆಲೆ ಅಷ್ಟೇ ಆದರೂ ಅದಕ್ಕೂ ಹೆಚ್ಚಿದರೂ ಪಣತೊಟ್ಟವನಿಗೆ ಲಾಭ. ಇಲ್ಲದಿದ್ದರೆ ನಷ್ಟ. ಇಲ್ಲಿ ವಾಸ್ತವದಲ್ಲಿ ಆಹಾರಧಾನ್ಯವೆಂಬ ಸರಕು ಕೈ ಕೈ ಬದಲಾಯಿಸಬೇಕಿಲ್ಲ. ಈ ವ್ಯವಹಾರದಲ್ಲಿ ತೊಡಗುವ ಹಣದ ಪ್ರಮಾಣಕ್ಕೂ ವಾಸ್ತವಕ್ಕೂ ಏನೂ ಸಂಬಂಧವಿಲ್ಲ. ಈ ಪ್ರಕ್ರಿಯೆಯಲ್ಲಿ ಆಹಾರ ಸರಕಿನ ನಿಜವಾದ ಬೆಲೆ ಹೊರಬೀಳುತ್ತದೆ ಎನ್ನುವುದು ಇದಕ್ಕಿರುವ ಸಮರ್ಥನೆ. ಆದರೆ ಇಲ್ಲಿ ಹೊರಗೆಡಹುವ ಈ ನಿಖರವಾದುದೆನ್ನುವ ಬೆಲೆ ಸಾಮಾನ್ಯ ಮಾರುಕಟ್ಟೆಯ ಬೆಲೆಯ ಮೇಲೆ ಊಹಾಪೋಹದ ಬೆಲೆಯಾಗಿ ಅಸ್ತವ್ಯಸ್ತ ಉಂಟುಮಾಡುತ್ತದೆ. ದಳ್ಳಾಳಿಗಳು ಪೈಪೋಟಿಯಿಂದ ಬೇಕೆಂತಲೇ ಮಾರುಕಟ್ಟೆಯ ಪೂರೈಕೆ ಬೇಡಿಕೆಗಳನ್ನು ನಿಯಂತ್ರಿಸಬಹುದು. ಇದರಲ್ಲಿ ರೈತನಿಗೆ ಯಾವ ಹೆಚ್ಚಿನ ಪ್ರಯೋಜನವಾಗುವುದಿಲ್ಲ. ಬಳಕೆದಾರನ ಮೇಲೆ ತೀವ್ರ ಪರಿಣಾಮ ಬೀರುತ್ತದೆ. ಜಾಗತಿಕವಾಗಿ ಅನೇಕ ನೈಜ ಮತ್ತು ಕೃತಕ ಕಾರಣಗಳಿಂದಾಗಿ ಆಹಾರದ ಅಭಾವ ಪರಿಸ್ಥಿತಿ ತಲೆದೋರಿರುವ ಈ ಸಂದರ್ಭದಲ್ಲಿ, ಈ ವಾಯಿದೆ ಮಾರುಕಟ್ಟೆಯ ದುಷ್ಪರಿಣಾಮವನ್ನು ಅರ್ಥಮಾಡಿಕೊಳ್ಳಬೇಕು.

ವಾಯಿದೆ ಮಾರುಕಟ್ಟೆಯಲ್ಲಿ ಬೆಲೆಯ ಊಹಾಪೋಹಕ್ಕೆ ಹಲವಾರು ಬೆಳವಣಿಗೆಗಳನ್ನು ಗಮನಿಸುತ್ತಾರೆ. ಬೆಳೆಯಲ್ಲಿ ತೊಡಗಿರುವ ಭೂಮಿಯೆಷ್ಟು, ಈ ಸಲದ ಹವಾಗುಣ ಬದಲಾವಣೆಗಳು ಹೇಗಿರುತ್ತವೆ, ಹುಳ-ಹುಪ್ಪಟೆ ಮತ್ತಿತರ ಪ್ರಾಕೃತಿಕ ಹಾವಳಿಗಳ ಕುರಿತು ಏನು ಮಾಹಿತಿ ದೊರೆತಿದೆ, ಮಾರುಕಟ್ಟೆಯಲ್ಲಿ ಬೇಡಿಕೆಯ ಪರಿಸ್ಥಿತಿ ಹೇಗಿದೆ ಇವೆಲ್ಲವನ್ನೂ ಪರಿಗಣಿಸಲಾಗುತ್ತದೆ. ಆಹಾರಸರಕಿನ ವಾಯಿದೆ ಮಾರುಕಟ್ಟೆಗಳಲ್ಲಿ ಜಾಗತಿಕವಾಗಿ ಚಿಕಾಗೋ ಸರಕು ಎಕ್ಸ್‌ಛೇಂಜ್, ಮತ್ತು ಬೇಸಾಯ ಸರಕುಗಳ ಎಕ್ಸ್‌ಛೇಂಜ್ ಇರುವ ಹಾಲೆಂಡಿನ ಆಂಸ್ಟರ್‌ಡಾಂ ಮುಖ್ಯವಾದುವು. ಈ ಸ್ಟಾಕ್ ಎಕ್ಸ್‌ಛೇಂಜ್‌ನಲ್ಲಿ ಮುಖ್ಯವಾಗಿ ಷೇರು ಪಡೆದಿರುವವರು ರೈತರೇ ಆದರೂ, ಮುಖ್ಯಪಾತ್ರ ವಹಿಸುವವರು ಧಾನ್ಯಗಳ ಸಗಟು ವರ್ತಕರು, ಮಾರುಕಟ್ಟೆಯ ದಳ್ಳಾಳಿಗಳು, ಬೃಹತ್ ಪ್ರಮಾಣದ ವ್ಯಾವಸಾಯಿಕ ಕಾರ್ಪೊರೇಷನ್‌ಗಳು. ಈ ಎಲ್ಲರೂ ಬೆಲೆಯನ್ನು ಹಲವು

ರೀತಿ ಹೆಚ್ಚಿಸಿದುದರ ಪರಿಣಾಮವಾಗಿ ಈ ವರ್ಷದ ಮೊದಲ ನಾಲ್ಕು ತಿಂಗಳಲ್ಲಿ ಜಾಗತಿಕವಾಗಿ ಆಹಾರದ ಬೆಲೆ ಶೇ. ೩೦ರಷ್ಟು ಹೆಚ್ಚಿತು. ಕೈಗಾರಿಕಾ ಉತ್ಪನ್ನಗಳಿಗೂ ವ್ಯಾವಸಾಯಿಕ ಉತ್ಪನ್ನಗಳಿಗೂ, ಸರಕುಗಳಾಗಿ ಮೂಲಭೂತ ವ್ಯತ್ಯಾಸವಿದೆ. ಆದರೂ ಅಮೆರಿಕಾದ ಸರ್ಕಾರ ಈ ಎರಡೂ ಸರಕುಗಳ ಎಕ್ಸ್‌ಛೇಂಜ್‌ಗಳನ್ನು ಒಂದೇ ಎಂಬಂತೆ ಐಕ್ಯತೆ ಮಾಡಿ ಇತ್ತೀಚೆಗೆ ಒಂದೇ ಸರಕಿನ ಎಕ್ಸ್‌ಛೇಂಜ್ ಮಾಡಿತು. ಇದು ತಕ್ಷಣದಲ್ಲೇ ಆಹಾರ ಪದಾರ್ಥಗಳ ಬೆಲೆಯಲ್ಲಿ ಅಸ್ಥಿರತೆ ಉಂಟುಮಾಡಿತು. ಟನ್ನಿಗೆ ೩೦೦ ಡಾಲರ್‌ಗಳಿದ್ದ ಅಕ್ಕಿಯ ಬೆಲೆ ದಿಢೀರನೆ ೧೦೦೦ ಡಾಲರಿಗೆ ಏರುವಂತಾಯ್ತು.

ನಮ್ಮ ಸರ್ಕಾರ ವ್ಯವಸಾಯ ಉತ್ಪನ್ನಗಳ ವಾಯಿದೆ ಮಾರುಕಟ್ಟೆಯನ್ನು ಮುಂದುವರಿಸಬಹುದೇ ಎಂದು ರೈತರ ಪ್ರಾತಿನಿಧ್ಯವಿಲ್ಲದ ಅಭಿಜಿತ್ ಸೆನ್ನರ ಅಧ್ಯಕ್ಷತೆಯಲ್ಲಿ, ಸಲಹೆ ನೀಡಲು ಸಮಿತಿಯೊಂದನ್ನು ರಚಿಸಿತು. ಅದಕ್ಕೆ ಇತ್ತೀಚಿನ ಬೆಲೆಯ ಏರಿಕೆಗೂ, ಈ ಮಾರುಕಟ್ಟೆಗೂ ಏನೂ ಸಂಬಂಧ ಕಾಣಲಿಲ್ಲ. ಅಷ್ಟೇ ಅಲ್ಲ, ಆಹಾರ ಪದಾರ್ಥಗಳಿಗೆ ಬೆಂಬಲ ಬೆಲೆ ನೀಡುವುದೂ ತಪ್ಪು, ಅದನ್ನು ನಿಲ್ಲಿಸಿ, ವಾಯಿದೆ ಮಾರುಕಟ್ಟೆ ಸರಿಯಾಗಿ ನಡೆಯಲು ನೆರವು ನೀಡಬೇಕು ಎಂದಿತು! ಈ ಸಮಿತಿಯಲ್ಲಿದ್ದವರೆಲ್ಲಾ ಆಹಾರ ವ್ಯಾಪಾರದಲ್ಲಿ ತೊಡಗಿರುವ ದಳ್ಳಾಳಿಗಳು, ಕಾರ್ಪೊರೇಷನ್‌ಗಳು ಎಂದಮೇಲೆ ಈ ಸಲಹೆ ಬರುವುದರಲ್ಲಿ ಅಚ್ಚರಿಯಿಲ್ಲ. ಎಡಪಕ್ಷಗಳ ಒತ್ತಡಕ್ಕೆ ಮಣಿದು, ವಾಯಿದೆ ಮಾರುಕಟ್ಟೆಯಿಂದ ಗೋಧಿ, ಅಕ್ಕಿ, ಕಡಲೆ ಮತ್ತು ಉದ್ದು ಇವುಗಳನ್ನು ಮಾತ್ರ ಹೊರಗಿಡಲಾಗಿದೆ. ಆದರೆ ಇವುಗಳಲ್ಲೂ, ಸರಿಯಾದ ಸರ್ಕಾರಿ ಮೇಲುಸ್ತುವಾರಿ ಇಲ್ಲದೆ, ಕದ್ದುಮುಚ್ಚಿ ಇನ್ನೂ ವಾಯಿದೆ ಮಾರುಕಟ್ಟೆಯ ವ್ಯವಹಾರ ನಡೆಯುತ್ತಲೇ ಇದೆ. ಇನ್ನು ಜನಸಂಖ್ಯೆಯಲ್ಲಿ ಹೆಚ್ಚಳವೆಂಬ ನೆಪಕ್ಕೆ ಅರ್ಥವಿಲ್ಲ. ಕಳೆದ ಕೆಲವೇ ತಿಂಗಳಲ್ಲಿ ಇದೇನೂ ವಿಪರೀತ ಹೆಚ್ಚಿಬಿಡಲಿಲ್ಲವಲ್ಲ!

**ಜೈವಿಕ ಇಂಧನಗಳ ತಯಾರಿಕೆ :** ಆಹಾರ ಬೆಳೆಯುವ ಭೂಮಿಯನ್ನು ಮುಖ್ಯ ಆಹಾರ ಬೆಳೆಯದೆ ಮುಸುಕಿನ ಜೋಳ, ಜತ್ರೋಪದಂಥ ಬೆಳೆಗೆ ಬದಲಾಯಿಸಲಾಗುತ್ತಿದೆ. ಬೀನ್ಸ್ ಮತ್ತು ಕಬ್ಬು ಇದಕ್ಕೆ ಬಳಸಲಾಗುತ್ತದೆ. ಇವುಗಳನ್ನು ಬಳಸಿ ಇಥನಾಲ್ ತಯಾರಿಸಿ, ಪೆಟ್ರೋಲ್ ಜತೆ ಮಿಶ್ರಣ ಮಾಡುತ್ತಾರೆ. ಸುಮಾರು ೨೩.೨ ಕೆಜಿ ಮುಸುಕಿನ ಜೋಳವನ್ನು ಬಳಸಿ ೫೦ ಲೀಟರ್ ಪೆಟ್ರೋಲ್ ತಯಾರಿಸಬಹುದು. ಇಷ್ಟು ಧಾನ್ಯ ಒಬ್ಬ ಮನುಷ್ಯನ ವಾರ್ಷಿಕ ಊಟದ ಅಗತ್ಯವನ್ನು ಪೂರೈಸಬಹುದು. ಅಮೆರಿಕಾ ಪ್ರಪಂಚಕ್ಕೆ ಹೆಚ್ಚುವರಿ ಆಹಾರ ತಯಾರಿಸುವ ಬುಟ್ಟಿ. ಈ ದೇಶ ಈಗ ತನ್ನ ಒಟ್ಟು ಮುಸುಕಿನ ಜೋಳ (ಗೋವಿನ ಕಾಳು)ದ ಬೆಳೆಯ ಮೂರನೆಯ ಒಂದು ಭಾಗವನ್ನು ಇಂಧನ ತಯಾರಿಕೆಗೆ ಬಳಸುತ್ತಿದೆ. ವಿಶ್ವ ಆಹಾರ ಮಾರುಕಟ್ಟೆಯ ಬೆಲೆಯಲ್ಲಿ ಇದರ ಪರಿಣಾಮವಾಗಿ ಶೇ. ೧೬ರಷ್ಟು ಹೆಚ್ಚಳ ಉಂಟಾಯಿತು. ಬ್ರೆಜಿಲ್ ದೇಶ ತನ್ನ ಆಂತರಿಕ ಆದ್ಯತೆಗಳನ್ನು ಬದಿಗೊತ್ತಿ, ಆಹಾರ ಬೆಳೆಯುವ ಭೂಮಿಯಲ್ಲಿ, ಈ ಜೋಳ ಬೆಳೆದು ಅಮೆರಿಕಾಕ್ಕೆ ಇಂಧನ ತಯಾರಿಕೆಗೆ ಪೂರೈಸುತ್ತಿದೆ. ಭಾರತದಲ್ಲೂ ಅಲ್ಲಲ್ಲೇ ಕಾಳು ಬಳಸಿ ಇಂಧನ ಭಟ್ಟಿ ಇಳಿಸುವ ಘಟಕಗಳು ತಲೆಎತ್ತುತ್ತಿವೆ. ಸರ್ಕಾರ ಜತ್ರೋಪವೇ ಮುಂತಾದುವನ್ನು ಹೆಚ್ಚು ಬೆಳೆಯಲು ಪ್ರೋತ್ಸಾಹಿಸುತ್ತಿದೆ. ಅಂದರೆ ಆಹಾರದ ಬೆಳಸಿಗೆ ಬೇಕಾದ ಗೊಬ್ಬರ, ನೀರು, ಭೂಮಿ ಎಲ್ಲದಕ್ಕೂ ಇಂಧನದೊಡನೆ ಈಗ ಪೈಪೋಟಿಯುಂಟಾಗಿದೆ!

**ವಿಶ್ವ ವ್ಯಾಪಾರ ಸಂಸ್ಥೆ, ಹಣಕಾಸು ಸಂಸ್ಥೆ ಮತ್ತು ಬ್ಯಾಂಕುಗಳ ಪಾತ್ರ :** ಲಾಗಾಯ್ತಿನಿಂದ ಅಭಿವೃದ್ಧಿ ಪಡೆದ ಶ್ರೀಮಂತ ರಾಷ್ಟ್ರಗಳು ಮತ್ತು ಅಭಿವೃದ್ಧಿಶೀಲ ಮತ್ತು ಬಡದೇಶಗಳ ನಡುವೆ, ಈ ಮೂರೂ ಸಂಸ್ಥೆಗಳು ತಾರತಮ್ಯ ನೀತಿಯನ್ನು ಅನುಸರಿಸುತ್ತ ಬಂದಿವೆ. ಅಶಕ್ತ ರಾಷ್ಟ್ರಗಳನ್ನು ಆರ್ಥಿಕವಾಗಿ ಶೋಷಿಸುವುದೇ ಇದರ ಮೂಲನೀತಿ ಧೋರಣೆ. ಆರ್ಥಿಕ ಸುಧಾರಣೆ ಎಂಬ ಹೆಸರಿನಲ್ಲಿ ಸಡಲೀಕರಣ ನೀತಿಯನ್ನು ಬಲವಂತವಾಗಿ ಅವುಗಳ ಮೇಲೆ ಹೇರಲಾಗಿದೆ. ರಾಜಕೀಯವಾಗಿ ನಮ್ಮ ಅರ್ಥ ವ್ಯವಸ್ಥೆಯನ್ನು ಪುನಾರಚಿಸಿ, ನಮ್ಮ ಹಣವನ್ನು ಅಪಮೌಲ್ಯಮಾಡುವುದು, ಶ್ರೀಮಂತ ರಾಷ್ಟ್ರಗಳಿಂದ ಆಮದಾಗಿ ಬರುವ ವಸ್ತುಗಳ ಮೇಲಿನ ಆಮದು ಸುಂಕವನ್ನು ಕಡಿತ ಮಾಡುವುದು ಇಲ್ಲವೆ ನಿಲ್ಲಿಸುವುದು, ನಾವು ಯಾವುದೇ ರೀತಿಯ ಸಹಾಯಧನವನ್ನು ನೀಡುವುದನ್ನು ನಿಲ್ಲಿಸುವುದು, ವಿದ್ಯುತ್ತು, ನೀರು, ಗೊಬ್ಬರಗಳ ಮೇಲಿನ ಸಹಾಯಧನವನ್ನು ನಿಲ್ಲಿಸುವುದು, ಬೆಂಬಲ ಬೆಲೆ ನೀಡದಿರುವುದು, ಸಾರ್ವಜನಿಕ ಪಡಿತರ ಪದ್ಧತಿಯನ್ನು ನಿಲ್ಲಿಸುವುದು ಮುಂತಾದುವು ಈ ರೀತಿಯ ಒತ್ತಾಯಗಳು. ಈಗಾಗಲೇ ನಮ್ಮ ಸರ್ಕಾರವೂ ಸ್ವಲ್ಪ ಸ್ವಲ್ಪವಾಗಿ ಈ ಒತ್ತಡಕ್ಕೆ ಮಣಿಯುತ್ತಿರುವುದು ಸ್ಪಷ್ಟ. ಸೈದ್ಧಾಂತಿಕವಾಗಿ ಇದು ಸರಿ ಎನ್ನುವವರೆ ನಮ್ಮ ಆಡಳಿತಸೂತ್ರವನ್ನು ಇಂದು ಹಿಡಿದಿದ್ದಾರೆ.

ಹೈಟಿ ಎಂಬುದು ಒಂದು ಸಣ್ಣ ದ್ವೀಪದೇಶ. ೧೯೯೫ರವರೆಗೆ ಈ ದೇಶ ತನಗೆ ಬೇಕಾದಷ್ಟು ದವಸಧಾನ್ಯ ಬೆಳೆದುಕೊಳ್ಳುತ್ತಿತ್ತು. ಆ ವರ್ಷ ಸದ್ಯದ ಆರ್ಥಿಕ ಮುಗ್ಗಟ್ಟನ್ನು ನಿರ್ವಹಿಸಿಕೊಳ್ಳಲು ವಿಶ್ವ ಹಣಕಾಸು ಸಂಸ್ಥೆಯಿಂದ ಸಾಲ ಪಡೆಯಿತು. ಸಾಲಕೊಡಲು ವಿಧಿಸಿದ ಒಂದು ನಿಬಂಧನೆ, ಹೈಟಿ ಅಮೆರಿಕಾದಿಂದ ಆಮದು ಮಾಡಿಕೊಳ್ಳುವ ವಸ್ತುಗಳ ಮೇಲಿನ ಸುಂಕವನ್ನು ಶೇ. ೩೫ರಿಂದ ಶೇ. ೩ಕ್ಕೆ ಇಳಿಸಬೇಕು ಎಂಬುದು. ಒಂದೇ ವರ್ಷದಲ್ಲಿ ಇದರ ಪರಿಣಾಮವಾಗಿ, ಅಲ್ಲಿಯ ರೈತರು ತಾವು ಬೆಳೆದ ಬೆಳಸನ್ನು ಮಾರಲಾರದೆ ದಿಕ್ಕುಗೆಟ್ಟರು, ಪಟ್ಟಣಕ್ಕೆ ಗುಳೆಹೋದರು, ಕೂಲಿಗಳಾದರು. ಕಾರಣ ಅಮೆರಿಕಾದಿಂದ ಆಮದಾದ ಆಹಾರ ಸ್ಥಳೀಯವಾದುದಕ್ಕಿಂತ ತೀರ ಕಡಿಮೆ ಬೆಲೆಯದಾಗಿತ್ತು. ಅದಕ್ಕೆ ಕಾರಣ ಅಮೆರಿಕಾ ಸರ್ಕಾರ ತನ್ನ ರೈತರ ಬೆಳೆಗೆ ಅಪಾರವಾದ ಸಹಾಯಧನ, ಬೆಂಬಲ ಬೆಲೆ ನೀಡುತ್ತದೆ. (ವಾಯಿದೆ ಮಾರುಕಟ್ಟೆಗಳು ಪರೋಕ್ಷವಾಗಿ ನಮ್ಮ ಮಾರುಕಟ್ಟೆಗಳನ್ನೂ ಆಮದಿಗೆ ಮುಕ್ತವಾಗಿಸುವ ಒತ್ತಡ ಬೀರುತ್ತವೆ.) ಒಮ್ಮೆ ಸ್ಥಳೀಯ ಮಾರುಕಟ್ಟೆ ಕುಸಿದ ಮೇಲೆ, ಹೈಟಿಯಲ್ಲಿ ಮರುವರ್ಷವೇ ಅಮೆರಿಕಾದಿಂದ ಆಮದಾದ ಆಹಾರದ ಬೆಲೆ ವಿಪರೀತ ಏರಿತು. ಅದಕ್ಕೆ ಸ್ಥಳೀಯವಾದ ಪೈಪೋಟಿ ಈಗಾಗಲೇ ಸತ್ತಿತ್ತು. ಈ ಬೆಲೆಯನ್ನು ತಾಳಲಾರದೆ ದೇಶದಲ್ಲೆಲ್ಲಾ ದಂಗೆಯುಂಟಾಯಿತು. ರಾಜಕೀಯ ಅಸ್ಥಿರತೆ ಕಾಲಿಟ್ಟಿತು. ಬಲಶಾಲಿ ಅಮೆರಿಕಾ ಮತ್ತು ಯೂರೋಪಿಯನ್ ಒಕ್ಕೂಟ ತಮ್ಮ ರೈತರಿಗೆ ಅಪಾರವಾದ ಬೆಂಬಲ ನೀಡುತ್ತಲೇ ನಾವು ಮಾತ್ರ ನೀಡಬಾರದು ಎನ್ನುತ್ತವೆ. ಇದೇ ಇತ್ತೀಚೆಗೆ ದೋಹ ಮಾತುಕತೆ ಮುರಿದುಬಿದ್ದುದರ ಹಿನ್ನೆಲೆ. ಈ ಜಾಗತಿಕ ಕಾರಣಗಳಿಂದಾಗಿಯೇ ನಮ್ಮ ಹತ್ತಿ ಮತ್ತು ಕಬ್ಬು ಮುಂತಾದ ಆಹಾರೇತರ ಬೆಳೆಗಳನ್ನು ಬೆಳೆದವರು ಆತ್ಮಹತ್ಯೆ ಮಾಡಿಕೊಂಡಿದ್ದು. ಈಗ ಈ ಪಿಡುಗು ನಮ್ಮ ಆಹಾರ ಬೆಳೆಯುವವರನ್ನೂ ಆವರಿಸೀತು ಎಂಬ ಹೆದರಿಕೆ ಅವಾಸ್ತವವಲ್ಲ. ಇತ್ತೀಚೆಗೆ ಡೆಹ್ರಾಡೂನಿನಲ್ಲಿ, ತನ್ನಿಂದ ಸಾಲಪಡೆಯುವ ರಾಜ್ಯ ಸರ್ಕಾರಗಳ ಪ್ರತಿನಿಧಿಗಳ ಸಮಾವೇಶವನ್ನು ವಿಶ್ವ ಬ್ಯಾಂಕ್ ಏರ್ಪಡಿಸಿತ್ತು. ಅಲ್ಲೂ ಸರ್ಕಾರಗಳು ತಾನು ನೀರಾವರಿಗೆ ನೆರವು ನೀಡಬೇಕಾದರೆ ಆ ಪ್ರದೇಶಗಳಲ್ಲಿ ಎಲ್ಲ ವಿಧದ ಸಹಾಯಧನಗಳನ್ನೂ ಕಡಿತ ಇಲ್ಲವೇ ನಿಲ್ಲಿಸಬೇಕೆಂಬ ಷರತ್ತು ವಿಧಿಸಿದೆ. ರೈತ ಪ್ರತಿನಿಧಿಗಳು ಹೋರಾಟಕ್ಕಿಳಿಯದೆ ಬೇರೆ ದಾರಿ ಇಲ್ಲ.

೨೦೦೫ರಲ್ಲಿ ೨೧೬ ರಾಷ್ಟ್ರಗಳ ಪೈಕಿ ೨೦೭ ರಾಷ್ಟ್ರಗಳು ಗೋಧಿಯನ್ನೂ, ೧೦೭ ರಾಷ್ಟ್ರಗಳು ಅಕ್ಕಿಯನ್ನೂ ಆಮದು ಮಾಡಿಕೊಳ್ಳಬೇಕಾಯ್ತು. ಇಷ್ಟೊಂದು ವಹಿವಾಟಿರುವಾಗ ಲಾಭ ಯಾರದು ಎಂಬುದು ಸ್ಪಷ್ಟ. ಈ ವರ್ಷ ವಿಶ್ವ ಆಹಾರ ಸಂಸ್ಥೆ ಜಾಗತಿಕವಾಗಿ ಹಿಟ್ಟಿನ ಧಾನ್ಯಗಳ ಬೆಳೆಯಲ್ಲಿ ಶೇ. ೩.೫ರಷ್ಟು ವೃದ್ಧಿಯನ್ನು, ಅಕ್ಕಿಯಲ್ಲಿ ಶೇ. ೨.೩ರಷ್ಟು ವೃದ್ಧಿ, ಅಂದರೆ ದಾಖಲು ಪ್ರಮಾಣದಲ್ಲಿ ೬೬೮ ದಶಲಕ್ಷ ಟನ್ ಅಕ್ಕಿಯ ಬೆಳೆಯನ್ನು, ನಿರೀಕ್ಷಿಸುತ್ತಿದೆ. ಇಷ್ಟಾದರೂ ಬಳಕೆದಾರನಿಗೆ ಬೆಲೆ ಇಳಿಯುವ ಭರವಸೆ ಏನೂ ಇಲ್ಲ. ಭಾರತ ಸ್ವಲ್ಪ ಎಣ್ಣೆಕಾಳು ಮತ್ತು ಬೇಳೆಯನ್ನು ಮಾತ್ರ ಆಮದು ಮಾಡಿಕೊಳ್ಳುತ್ತಿತ್ತು. ಕಳೆದ ಮೂರು ವರ್ಷಗಳಿಂದ ಗೋಧಿಯನ್ನೂ ಆಮದು ಮಾಡಿಕೊಳ್ಳುತ್ತಿದ್ದೇವೆ. ಹೀಗಿದ್ದೂ, ಕೃಷಿಯಲ್ಲಿ ಸ್ವಾವಲಂಬನೆಯ ನೀತಿ ಕೈಬಿಟ್ಟ ನಮ್ಮ ಸರ್ಕಾರದಿಂದ ಆಂತರಿಕವಾಗಿ ಆಹಾರದ ಬೆಲೆ ನಿಯಂತ್ರಣ ಅಸಾಧ್ಯ, ಅದನ್ನು ನಿರೀಕ್ಷಿಸಲಾಗದು.

**ಯಾರಿಗೆ ಲಾಭ ?** ಬೆಳೆಯುವವನೂ, ಬಳಸುವವನೂ



ಆರಂಭದಲ್ಲಿ 'ಗಣಪತಿ'ಯನ್ನು ಅಲ್ಲಲ್ಲಿ, 'ಗಣಿ'ಪತಿಯನ್ನು ನೆನೆದು ಸಭೆ ಆರಂಭಿಸೋಣ

ಉತ್ತಮ ಬೆಲೆ ಸಿಗದೆ ಹಾಗೂ ವಿಪರೀತ ಬೆಲೆ ತೆರಬೇಕಾಗಿದ್ದು, ಇಬ್ಬರೂ ಕಂಗಾಲಾಗಿದ್ದಾರೆ. ನಿಜವಾಗಿ ಲಾಭ ದೊರೆಯುತ್ತಿರುವುದು ಧಾನ್ಯ ಮಾರಾಟದಲ್ಲಿ ತೊಡಗಿರುವ ಬಹುರಾಷ್ಟ್ರೀಯಗಳು, ಗೊಬ್ಬರ ತಯಾರಕರು, ಕ್ರಿಮಿನಾಶಕಗಳನ್ನು ತಯಾರಿಸುವವರು, ಬೀಜ ಉತ್ಪಾದಕರು, ಈ ಎಲ್ಲವುಗಳ ವರ್ತಕರಿಗೆ. ಉದಾಹರಣೆಗೆ, ಮೊನ್ಸಾಂಟೊ ಕಂಪನಿ ೨೦೦೬ರವರೆಗೆ ನಷ್ಟ ಅನುಭವಿಸುತ್ತಿತ್ತು. ಧಾನ್ಯ ಮಾರಾಟ ಪ್ರಾರಂಭಿಸಿದ ಒಂದೇ ವರ್ಷದಲ್ಲಿ, ೨೦೦೭ರಲ್ಲಿ ಅದು ಸಹಸ್ರ ಕೋಟಿ ರೂ.ಗಳ ಲಾಭ ಗಳಿಸಿತು. ಇದೇ ವರ್ಷ ಅಮೆರಿಕಾದ ಬಹುರಾಷ್ಟ್ರೀಯ ಕಾರ್ಗಿಲ್‌ನ ಲಾಭ ಅಭೂತಪೂರ್ವವಾಗಿ ಹತ್ತು ಸಹಸ್ರ ಕೋಟಿ ರೂ.ಗಳಷ್ಟಾಗಿತ್ತು. ಈ ಕ್ಷೇತ್ರದಲ್ಲಿ ಬೃಹತ್ ಕಂಪನಿಗಳೂ ಅಪಾರ ಲಾಭ ಗಳಿಸಿದುವು.

**ವ್ಯವಸಾಯ ಕ್ಷೇತ್ರದಲ್ಲಿ ವೈಜ್ಞಾನಿಕ ಸಂಶೋಧನೆ ಹಿಂದೆ ಬಿದ್ದಿದೆ :** ಇದನ್ನು ಎರಡು ಹಂತದಲ್ಲಿ ತಿಳಿದುಕೊಳ್ಳಬೇಕು. ಹಿಂದೆ ನಾವು ಹಸಿರು ಕ್ರಾಂತಿಯನ್ನು ಸಾಧಿಸಿದಾಗ ಕೈಗೊಂಡ ವೈಜ್ಞಾನಿಕ ಕ್ರಮಗಳು ನಾರ್ಮನ್ ಬೊರ್ಲಾ ಮತ್ತು ಎಂ. ಎಸ್. ಸ್ವಾಮಿನಾಥನ್ ನೇತೃತ್ವದಲ್ಲಿ. ಅಂದು ನೀರಾವರಿ ದೊರೆತ ಪ್ರದೇಶಗಳಲ್ಲಿ ಉತ್ತಮವಾದ ಹೊಸ ತಳಿಗಳನ್ನು ಸಂಶೋಧಿಸಿ ಬಳಸಲಾಯ್ತು. ರಾಸಾಯನಿಕ ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಬಳಸಲಾಯ್ತು. ಪ್ರತಿ ಎಕರೆಗೆ ಹೆಚ್ಚು ಇಳುವರಿಯ ಜತೆಗೆ ಈ ಉತ್ತಮ ತಳಿಗಳಿಂದ ಜೈವಿಕ ಸಂಶೋಧನೆಯ ಫಲವಾಗಿ, ಉದಾಹರಣೆಗೆ ಬೆಳೆಯಲ್ಲಿ, ಆಹಾರದ ಗುಣಮಟ್ಟವೂ ಉತ್ತಮವಾಯಿತು. ಇಂದು ಹೊಸ ಪೀಳಿಗೆಯ ಹೊಸ ರಾಜಕೀಯದವರು ಉದ್ದೇಶಪೂರ್ವಕವಾಗಿ ಮಾತುಮಾತಿಗೂ ಟೀಕಿಸುವ ಅಂದಿನ ಜವಹರಲಾಲ್ ನೆಹರೂ ಅವರ ದೂರದೃಷ್ಟಿಯ ಪರಿಣಾಮವಾಗಿ, ರಾಷ್ಟ್ರ ನೀರಾವರಿಯಲ್ಲಿ ಮಹತ್ತರ ಸಾಧನೆ ಮಾಡಿದ್ದು, ಇಂದಿಗೂ ರಾಷ್ಟ್ರದಲ್ಲಿ ೯೭ದಶಲಕ್ಷ ಹೆಕ್ಟೇರುಗಳಿಗೆ ಕೃಷಿ ಭೂಮಿಗೆ ನೀರಾವರಿ ದೊರಕಿರುವುದರಿಂದ ನಮ್ಮ ಪರಿಸ್ಥಿತಿ ಅಷ್ಟು ಹದಗೆಟ್ಟಿಲ್ಲ. ಇದು ನಮ್ಮ ಒಟ್ಟು ಬೆಳೆಯ ಶೇ. ೫೬ರಷ್ಟು ಉತ್ಪಾದನೆ ನೀಡುತ್ತದೆ. ಹಾಗೆಯೇ ಇಂದಿನ ನಮ್ಮ ಕೊರತೆಯ ಸಮಸ್ಯೆಗೆ ಕಾರಣ ಸುಮಾರು ೯೫ ದಶಲಕ್ಷ ಹೆಕ್ಟೇರುಗಳಷ್ಟು ಕೃಷಿ ಭೂಮಿ ಮಳೆಯಾಧಾರಿತವಾಗಿದ್ದು ಇದು ಕೇವಲ ಶೇ. ೯೬ರಷ್ಟು ಬೆಳೆ ನೀಡುತ್ತಿರುವುದು. ಅಂದರೆ ಮಳೆಯಾಧಾರಿತ ಕೃಷಿಗೆ ಬೇಕಾದ ಸಂಶೋಧನೆ ಹಿಂದೆ ಬಿದ್ದಿರುವುದು ಮತ್ತು ನೀರಾವರಿಯನ್ನು ಇನ್ನೂ ಹೆಚ್ಚಿಸುವುದರಲ್ಲಿ ನೀತಿಯ ವೈಫಲ್ಯ ಇವೆರಡೂ ನಮ್ಮ ಇಂದಿನ ಆಹಾರ ಸುರಕ್ಷತೆಯ ಅಭದ್ರತೆಗೆ ಕಾರಣವಾಗಿವೆ. ಹಸಿರುಕ್ರಾಂತಿಯಾದಾಗ ಅದು ಹೆಚ್ಚು ಬಂಡವಾಳ ಹೂಡಬಲ್ಲ ಜಮೀನುದಾರರಿಗೆ ಪ್ರಯೋಜನವಾಯಿತು. ಮಳೆ ನೀರು ಆಧಾರಿತ ಹಿಡುವಳಿ ಸಣ್ಣ ಪ್ರಮಾಣದ್ದು ಹಾಗೂ ಬಡ ರೈತ ಹೆಚ್ಚು ಬಂಡವಾಳ ಹೂಡಲಾರದವ. ದೇಶದ ಆಹಾರ ಸುರಕ್ಷತೆಯನ್ನು ನೀಡುವ ಕೃಷಿಕ್ಷೇತ್ರಕ್ಕೆ ಕಳೆದ ನಾಲ್ಕು ವರ್ಷಗಳಲ್ಲಿ ಕೇಂದ್ರ ಕೇವಲ ೫೦೦೦ ಕೋಟಿ ರೂ.ಗಳಷ್ಟು ವೆಚ್ಚ ಮಾಡಿದೆ. ಅಂದರೆ ನಮ್ಮ ರಾಜಕೀಯ ಆದ್ಯತೆಯ ದಿವಾಳಿತನ ಸ್ಪಷ್ಟವಾಗುತ್ತದೆ.

ಶೇ. ೯ರ ಅಭಿವೃದ್ಧಿ ದರ ಗ್ರಾಮೀಣ ಜನತೆ ಮತ್ತು ಪಟ್ಟಣವಾಸಿ ಬಡಜನರ ಬವಣೆಗೆ ಮುಸುಕು ಹಾಕುತ್ತದೆ. ೧೯೫೧ರಲ್ಲಿ ತಲಾ ೩೯೪ ಗ್ರಾಂಗಳಷ್ಟು ಆಹಾರ ಧಾನ್ಯ ಲಭ್ಯವಿತ್ತು. ಇದರಲ್ಲಿ ತಲಾ ೬೧ ಗ್ರಾಂಗಳ ಬೇಳೆ ಕಾಳುಗಳೂ ಸೇರಿತ್ತು. ೨೦೦೫ರಲ್ಲಿ ಇದು ೪೨೨ ಗ್ರಾಂಗಳಿಗೆ ಏರಿತ್ತು. ಆದರಲ್ಲಿ ಬೇಳೆಕಾಳುಗಳ ಲಭ್ಯತೆ ಕೇವಲ ೩೧ ಗ್ರಾಂಗೆ ಕುಸಿದಿತ್ತು. ದೇಶದ ಒಟ್ಟು ಜನಸಂಖ್ಯೆಯ ಶೇ. ೬೧, ಪೌಷ್ಟಿಕಾಂಶದ ಕೊರತೆಗೆ ಒಳಗಾಗಿದ್ದಾರೆ. ಇದರಲ್ಲಿ ಶೇ. ೭೬ರಷ್ಟು ಮಹಿಳೆಯರು ಮತ್ತು ಮಕ್ಕಳು ಪೌಷ್ಟಿಕಾಂಶದ ಕೊರತೆ ಮತ್ತು ರಕ್ತವಿಹೀನತೆಗೆ ತುತ್ತಾಗಿದ್ದಾರೆ. ಹೀಗಿರುವಾಗ ಭಾರತ ಪ್ರಕಾಶಿಸುತ್ತಿದೆ ಎನ್ನುವುದು ಹಸಿದವರನ್ನು ಕುರಿತು ನುಡಿದ ಕುಹಕವೆನಿಸುತ್ತದೆ. ಈ ಪರಿಸ್ಥಿತಿ ಇನ್ನೂ ಹದಗೆಡುವ ಸೂಚನೆಗಳೂ ಇವೆ.

ಮೇಲೆ ಹೇಳಿದಂತೆ, ನಮ್ಮ ರೈತರಲ್ಲಿ ಬಹುಭಾಗ ಸಣ್ಣ ಹಿಡುವಳಿಯವರು, ಮಳೆಯನ್ನು ಕೃಷಿಗೆ ಅವಲಂಬಿಸಿದವರು, ಇವರಿಂದ ಹೆಚ್ಚು ಬಂಡವಾಳ ಹೂಡುವುದು ಸಾಧ್ಯವಿಲ್ಲ. ಇವರ ಉತ್ಪಾದಕತೆ ಒಂದು ಹೆಕ್ಟೇರಿಗೆ ಕೇವಲ ೧.೧ ಟನ್‌ಗಳಷ್ಟು. ಇದು ಬಡ ಬಾಂಗ್ಲಾದೇಶದ ರೈತನ ಮಟ್ಟ. ಇವರ ಕೃಷಿ ಉತ್ಪಾದನೆಯ ಪಾಲು ದೇಶದ ಉತ್ಪಾದನೆಯ ಶೇ. ೪೪ರಷ್ಟು. ಇವರು ಬಳಸುವ ಭೂಮಿಯ ಪಾಲು ಶೇ. ೬೬ರಷ್ಟು. ಅಂದರೆ ಯಾವುದೇ ಕೃಷಿ ಸಂಶೋಧನೆಯೂ ಇವರಿಗೆ ಸಂಬಂಧಪಟ್ಟಿದ್ದಾಗಬೇಕು. ಯಾವುದೇ ಯೋಜನೆಯೂ ಇವರತ್ತ ಗುರಿಯಿಡಬೇಕು. ನೀರಾವರಿಯ ಅಭಿವೃದ್ಧಿ ಆಗಬೇಕು. ಆದರೆ ಇದಕ್ಕೆ ಇರುವ ಅವಕಾಶ ಮಿತಿಯುಳ್ಳದ್ದು. ಹೀಗಾಗಿ ಮಳೆಯಾಧಾರಿತ ಕೃಷಿಗೆ ತಕ್ಕ ಬೀಜಗಳ ಸಂಶೋಧನೆ ಮತ್ತು ಕಡಿಮೆ ಬಂಡವಾಳದಲ್ಲಿ ಉತ್ತಮ ಕೃಷಿ ಇವೆರಡೂ ದಿಕ್ಕಿನಲ್ಲಿ ಸಂಶೋಧನೆ ಅಗತ್ಯ. ಇವಲ್ಲದೆ ಸರ್ಕಾರ ಈ ರೈತರಿಗೆ ನೇರವಾಗಿ ತಲಪಿಸಬಲ್ಲ ಶಿಕ್ಷಣ, ಆರೋಗ್ಯ ಮತ್ತು ಇತರ ಸಾಮಾಜಿಕ ಸೇವಾಕ್ಷೇತ್ರಗಳನ್ನು ಅಪಾರವಾಗಿ ವಿಸ್ತರಿಸುವುದು ಆಹಾರ ಸುಭದ್ರತೆಯ ಸಾಧನೆಗೆ ಅನಿವಾರ್ಯವಾದ ಹೆಜ್ಜೆಗಳು. ಸ್ವಾತಂತ್ರ್ಯಾನಂತರ ಕೃಷಿ ಸಂಶೋಧನೆಗೆ ವರ್ಷವರ್ಷವೂ ಹೆಚ್ಚು ಹೆಚ್ಚು ಹಣ ವಿನಿಯೋಗವಾಗುತ್ತಿರುವಂತೆ ಸಂಖ್ಯೆಗಳು ತೋರಿದರೂ, ವಾಸ್ತವದಲ್ಲಿ, ಹಣದುಬ್ಬರವನ್ನು ಗಮನಿಸಿ ಲೆಕ್ಕಹಾಕಿದರೆ, ಈ ವೆಚ್ಚ ೧೯೭೦ರಿಂದ ಈಚೆಗೆ ಕಡಿಮೆಯಾಗುತ್ತಿದೆ. ಇದೂ ಆತಂಕಕಾರಿ.

ಬೆಂಬಲ ಬೆಲೆಯ ಬಗ್ಗೆ ಸರ್ಕಾರ ಬಹಳ ಪ್ರಚಾರ ಗಿಟ್ಟಿಸಿಕೊಳ್ಳುತ್ತದೆ. ಅದು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಹೆಚ್ಚು ಬೆಲೆಕೊಟ್ಟು ಆಹಾರವನ್ನು ಆಮದು ಮಾಡಿಕೊಳ್ಳುತ್ತದೆ. ಆದರೆ ಸ್ಥಳೀಯ ರೈತನ ಉತ್ಪನ್ನಕ್ಕೆ ಅದಕ್ಕಿಂತ ಕಡಿಮೆ ದರ ನೀಡುತ್ತದೆ! ಎನ್‌ಡಿಎ ಸರ್ಕಾರ ಸರ್ಕಾರದ ಕಣಜದಲ್ಲಿ ಶೇಖರವಾಗಿದ್ದ ಅಪಾರ ಆಹಾರಧಾನ್ಯ ಶೇಖರಣೆಯನ್ನು ಸಾರ್ವಜನಿಕ ವಿತರಣ ವ್ಯವಸ್ಥೆಯಲ್ಲಿ ಧಾರಾಳವಾಗಿ ತೊಡಗಿಸಲೆ ಇಲ್ಲ. ಅಲ್ಲಿಗೆ ಪೂರೈಸುತ್ತಿದ್ದ ಪ್ರಮಾಣವೂ ಹಂಚಿಕೆ ಆಗುತ್ತಿರಲಿಲ್ಲವೆಂಬುದು ಆಪಾದನೆ. ಅಂದರೆ ಜನತೆಯಲ್ಲಿ ಸುಭಿಕ್ಷತೆ ನೆಲೆಸಿದೆ ಎಂದು ಅರ್ಥೈಸಿದರು. ವಾಸ್ತವವೆಂದರೆ ಜನರ ಬಡತನ ಎಷ್ಟಿತ್ತೆಂದರೆ ಪಡಿತರ ಬೆಲೆಯೂ ಅವರಿಗೆ ನಿಲುಕದಾಗಿತ್ತು. ಹಾಗೂ ಫುಡ್ ಕಾರ್ಪೊರೇಷನ್‌ನ ಅವ್ಯವಸ್ಥೆಯ ನಿರ್ವಹಣೆಯಿಂದಾಗಿ ಅಪಾರ ಪ್ರಮಾಣದ ಧಾನ್ಯ ಮುಗ್ಗಿ ಕೊಳೆಯಿತು. ಏತನ್ಮಧ್ಯೆ ಇದೇ ಸರ್ಕಾರ ಹೆಚ್ಚುವರಿ ಧಾನ್ಯವೆಂದು ಹೇಳಿಕೊಳ್ಳುತ್ತಾ, ಅದನ್ನು ದೇಶದ ಆಂತರಿಕ ಬೆಂಬಲ ಬೆಲೆಗಿಂತ ಕಡಿಮೆ ದರದಲ್ಲಿ ರಫ್ತು ಮಾಡಿತು. ಈ ನೀತಿಯ ದಿವಾಳಿತನ ಸ್ಪಷ್ಟ. ಅಂದು ಆರಂಭವಾದ ಈ ಧೋರಣೆಯ ಫಲ ಇಂದು ನಾವು ಆಹಾರವನ್ನು ಆಮದುಮಾಡಿಕೊಳ್ಳುವ ಮಟ್ಟಕ್ಕೆ ತಲುಪಿದ್ದೇವೆ. ಸರ್ಕಾರ ಆಹಾರ ಶೇಖರಣೆಯನ್ನು ಕಡಿತಗೊಳಿಸಿದ್ದು, ಖಾಸಗಿ ವರ್ತಕ ಲಾಭ ಮಾಡಿಕೊಳ್ಳಲು ಅನುಕೂಲವಾಯ್ತು. ಬೆಳೆಯುವ ವೆಚ್ಚ ಹೆಚ್ಚುತ್ತಿದೆ. ಬೆಳೆದ ಆಹಾರಕ್ಕೆ ತಕ್ಕ ಬೆಲೆ ದೊರೆಯುತ್ತಿಲ್ಲ. ಆಗ ರೈತ ಆಹಾರ ಬೆಳೆಯುವುದನ್ನು ಬಿಟ್ಟು ತನ್ನ ಹಿಡುವಳಿಗೆ ಒಗ್ಗದ ವಾಣಿಜ್ಯ ಬೆಳೆಗಳಿಗೆ ಕೈಹಾಕುತ್ತಾನೆ. ಇದು ಅಪಾಯಕಾರಿಯಾಗಿ, ಬೆಳೆ ವಿಫಲವಾಗುತ್ತದೆ. ಸಾಲ ಮಾಡಿದ ಹತ್ತಿ ಬೆಳೆಗಾರ ಆತ್ಮಹತ್ಯೆಗೆ ಮುಂದಾಗುತ್ತಾನೆ. ಆಹಾರ ಸುಭದ್ರತೆ ಬೇಕಾದರೆ ಇವನು ಲಾಭದಾಯಕವಾಗಿ ಆಹಾರ ಬೆಳೆಯಲು ಬೇಕಾದ ಎಲ್ಲಾ ಪ್ರೋತ್ಸಾಹಗಳನ್ನು ನೀಡುವ ನೀತಿ ಬೇಕು. ಈ ವರ್ಷ ಗೋಧಿಗೆ ಬೆಂಬಲ ಬೆಲೆಯನ್ನು ಟನ್ನಿಗೆ ಸಾವಿರ ರೂಪಾಯಿಗೆ ಹೆಚ್ಚಿಸಿದ್ದರಿಂದ ಫುಡ್ ಕಾರ್ಪೊರೇಷನ್‌ಗೆ ಅಭೂತಪೂರ್ವವಾಗಿ ೨೦೦ ದಶಲಕ್ಷ ಟನ್‌ಗಳಿಗೂ ಹೆಚ್ಚು ಧಾನ್ಯ ಸಂಗ್ರಹ ಆಗಿದೆ. ಅಕ್ಕಿಗೂ ಇದೇ ಬೆಲೆ ನೀಡಬೇಕೆಂದು ರೈತ ಸಂಘಗಳ ತೀವ್ರ ಹೋರಾಟದ ಪರಿಣಾಮವಾಗಿ ಅದು ಈಗ ನಿಗದಿಯಾಗಿದೆ. ಬೆಂಬಲ ಬೆಲೆಯ ಮಾರ್ಗವಲ್ಲದೆ ಗೊಬ್ಬರಕ್ಕೆ ನೀಡುವ ಸಹಾಯಧನವನ್ನು ಗೊಬ್ಬರದ ಕಂಪನಿಗಳಿಗೆ ನೀಡುವ ಬದಲು ನೇರವಾಗಿ ಗೊಬ್ಬರ ಬಳಸಿದ ರೈತನಿಗೆ ತಲುಪಿಸುವ ವ್ಯವಸ್ಥೆಯಾಗಬೇಕು. ಇದಾದಾಗ ಬಳಕೆದಾರನಿಗೆ ಸುಲಭದರದಲ್ಲಿ ಧಾನ್ಯ ದೊರೆಯುವ ಪರಿಣಾಮವಾಗುತ್ತದೆ.

ತಿನ್ನುವ ಅನ್ನವನ್ನು ಎಣ್ಣೆ ಮಾಡ ಹೊರಟಿರುವ ಈ ಬಂಡವಳಿಗ ವ್ಯವಸ್ಥೆಯ ಪರವಾದ ಸರ್ಕಾರ ರೈತನ ಪರ ಮಧ್ಯಪ್ರವೇಶಿಸಿ, ಅದಕ್ಕೆ ತಕ್ಕ ನೀತಿಗಳನ್ನು ನಿರೂಪಿಸಿದರೆ ಆಹಾರ ಸುಭದ್ರತೆ ಸಾಧ್ಯವೆಂದು ಈ ವರ್ಷದ ಫುಡ್ ಕಾರ್ಪೊರೇಷನ್ ಅನುಭವ ಸಾಬೀತುಪಡಿಸುತ್ತದೆ. ಆಹಾರ ಸುಭದ್ರತೆಯನ್ನು ಕಾಯ್ದುಕೊಳ್ಳುವುದು ಬಂಡವಾಳ ವ್ಯವಸ್ಥೆಯ ರಕ್ಷಣೆಗೂ ಅಗತ್ಯವೆಂಬುದನ್ನು ಅವರೇಕೆ ಮನಗಾಣುತ್ತಿಲ್ಲವೋ ಎಂದು ಆಶ್ಚರ್ಯವಾಗುತ್ತದೆ. ಹೈಟಿಯಂಥ ಚಿಕ್ಕ ರಾಷ್ಟ್ರಗಳಲ್ಲಿ ಆಹಾರಗಳ ಬೆಲೆ ಏರಿಕೆಯ ವಿರುದ್ಧ ಜನ ದಂಗೆ ಎದ್ದರೆ, ಪರಿಸ್ಥಿತಿಯನ್ನು ಸುಧಾರಿಸಬಹುದು. ಆದರೆ ನಮ್ಮಲ್ಲಿ ಅಂಥ ಪರಿಸ್ಥಿತಿ ಬೆಳೆಯಲು ಅವಕಾಶ ಮಾಡಿಕೊಟ್ಟರೆ ಅದು ವ್ಯವಸ್ಥೆಗೇ ಅಪಾಯಕಾರಿ. ಆಹಾರ ಅಭದ್ರತೆಗೆ ಕಾರಣ ನೀತಿ ನಿರೂಪಣೆಯ ವೈಫಲ್ಯವೇ ವಿನಾ ಅದು ಅನಿವಾರ್ಯವಾದ ಪಿಡುಗಲ್ಲ, ನಾವು ಸಾಧಿಸಲಾಗದ ಗುರಿಯಿಲ್ಲ.

**ಸೋಮಸುಂದರ್ ಮರ್ಲ**
ಸಹ ಪ್ರಾಧ್ಯಾಪಕರು, ಮಾಲಿಕ್ಯುಲರ್ ಬಯಾಲಜಿ ವಿಭಾಗ,
ಜಿ. ಬಿ. ಪಂತ್ ಕೃಷಿ ವಿಶ್ವವಿದ್ಯಾಲಯ
ಪಂತ್ ನಗರ, ಉತ್ತರಾಖಂಡ್
ಕನ್ನಡಕ್ಕೆ ಭಾವಾನುವಾದ : ಕೆ. ಎಸ್. ಪಾರ್ಥಸಾರಥಿ

# ಕನಿಷ್ಠ ಕೂಲಿ ಮತ್ತು ಅಳಿಯದ ಹಸಿವಿನ ತಳಮಳ

ಕೂಲಿಗಾರರ ಪರಿಣತಿ ಮತ್ತು ಶ್ರಮಶಕ್ತಿಯನ್ನು ಬಳಸಿಕೊಳ್ಳುವಲ್ಲಿಯ ಕೊರತೆಯು ಸಾಮಾಜಿಕವಾಗಿ ಹೆಚ್ಚು ಆತಂಕ ಹುಟ್ಟಿಸುವ ಸಂಗತಿಯಾಗಿದೆ. ಮಾನವ ಸಂಪನ್ಮೂಲಗಳು ಬಳಕೆಯಾಗದೆ ಹೋದರೆ ಸಾಮಾಜಿಕ ವಿಷಮತೆಯು ಹೆಚ್ಚಾಗುತ್ತದೆ ಮತ್ತು ಅನಿಯಂತ್ರಿತವು ಗೊಳ್ಳತ್ತದೆ. ಕಾರ್ಮಿಕ ನೀತಿ ಪರಿಣತರು, ಸಾಮಾಜಿಕ ತಜ್ಞರು ಈಗಾಗಲೇ ಅರಾಜಕತೆಯ ಕುರಿತು ಸೂಕ್ತ ಎಚ್ಚರಿಕೆ ನೀಡಿದ್ದಾರೆ. ಪ್ರತಿಯೊಬ್ಬ ಕಾರ್ಮಿಕನ ಬದುಕು ಸಹ್ಯ ಮತ್ತು ನೆಮ್ಮದಿಗೆ ಭಾಜನವಾಗುವಂತಹ ಪರಿಸರ ನಿರ್ಮಾಣ ಮಾಡುವುದು ತುರ್ತಿನ ಕಾರ್ಯವಾಗಿದೆ.

ಸ. ರಾ. ಸುಳಕೂಡೆ

ಶ್ರಮ ಸಂಸ್ಕೃತಿಯನ್ನು ಬೆಳೆಸುವ ತಾರ್ಕಿಕ ಮತ್ತು ಸಶಕ್ತ ಮಾರ್ಗ ಶಿಕ್ಷಣವೇ ಆಗಿದೆ. ಶಿಕ್ಷಣವು ಶ್ರಮದ ಮಹತ್ವವನ್ನು ಅರುಹುವ ಮಾಧ್ಯಮವಾಗಿದೆ. ಶಾರೀರಿಕ ಶ್ರಮ ಮತ್ತು ಬೌದ್ಧಿಕ ಶ್ರಮ ಇವು ಒಂದಕ್ಕೊಂದು ವಿರೋಧ ಚಟುವಟಿಕೆಗಳಲ್ಲ. ಬುದ್ಧಿ ಜೀವಿಗಳಿಗೆ ಹೆಚ್ಚಿನ ಗೌರವ-ವೇತನ ಎಂಬ ತಾರತಮ್ಯ, ವಿಪರೀತದ ಮಟ್ಟ ಮುಟ್ಟಲು ಅನೇಕ ಪೂರಕ - ಪೋಷಕ ಅಂಶಗಳಿವೆ ಎಂದು ಸತತ ನಂಬಿಸಲಾಗುತ್ತಿದೆ. ಇಂಥ ತಾರತಮ್ಯ ಭಾಗ - ಭಾವ ಸಮಾಜದಲ್ಲಿ ದೊಡ್ಡ ಕಂದಕ ನಿರ್ಮಿಸಿದೆ. ಈ ಕಂದಕ ತುಂಬುವ ಕೆಲಸವೂ ಶಿಕ್ಷಣಕ್ಕೆ ಸೇರಿದೆ. ನಮ್ಮ ಶಿಕ್ಷಣ ಪದ್ಧತಿ ಮತ್ತು ಉದ್ಯೋಗ ನೇಮಕಾತಿ ಪ್ರಕ್ರಿಯೆಯಲ್ಲಿ ಶ್ರಮ ಸಂಸ್ಕೃತಿಯನ್ನು ಗುರುತಿಸುವ ಅಂಶಕ್ಕೆ ಪ್ರಾಧಾನ್ಯತೆ ಸಿಗಬೇಕಾಗಿದೆ. 'ಹಸಿವು' ಸರ್ವರ ಬದುಕಿನ ಅಂಗವಾಗಿರುವುದರಿಂದ ಬೌದ್ಧಿಕ ನೆಲೆಗೆ ಹೆಚ್ಚು ಒತ್ತು ಕೊಡುವ ಧೋರಣೆಗೆ ಲಗಾಮು ಹಾಕುವ ಅಗತ್ಯತೆ ಬಹಳಷ್ಟಿದೆ. 'ಹಸಿವಿನ' ನಿವಾರಣೆಯೇ ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ, ಕ್ಷೇತ್ರಗಳ ಆದ್ಯತಾ ಪಟ್ಟಿಯಲ್ಲಡಗಿದೆ. ಹಸಿವಿನ ನಿವಾರಣೆಯಿಂದ ಶಾಂತಿಯ ಪರಿಧಿ ಪಸರಿಸುತ್ತದೆ. ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರದಲ್ಲಿ ಹಸಿವಿನಿಂದ ಬಳಲುತ್ತಿರುವವರ ಸಂಖ್ಯೆ ಅಧಿಕವಾಗಿರುವುದು ಅಭಿವೃದ್ಧಿಯ ಫಲ ಸರ್ವರಿಗೂ ಸಮನಾಗಿ ದೊರೆಯುತ್ತಿಲ್ಲವೆಂಬುದನ್ನು ತೋರಿಸುತ್ತದೆ. ಬಡತನ ನಿವಾರಣೆಗಾಗಿ ಹಾಕಿಕೊಂಡ ೨೦ ಅಂಶಗಳ ಕಾರ್ಯಕ್ರಮ ನಿಶ್ಚಿತ ಗುರಿ ಸಾಧಿಸದಿರುವುದು ವಿವೇಚನೆಯ ಸಂಗತಿಯಾಗಿದೆ. ಅಪೌಷ್ಟಿಕತೆ, ಅನಕ್ಷರತೆ, ಅಸ್ವಚ್ಛತೆ, ಅನಾರೋಗ್ಯ ಕಡುಬಡವರ ಬದುಕನ್ನು ಅಸಹನೀಯ ಗೊಳಿಸಿವೆ. ಇವು ಹಸಿವಿನ ತೀವ್ರತೆಯನ್ನು ಇನ್ನಷ್ಟು ಉಲ್ಬಣಗೊಳಿಸಿವೆ. ಜೀತ ಪದ್ಧತಿ, ಬಾಲ ಕಾರ್ಮಿಕತೆ ಕಡುಬಡವರನ್ನು ಕಾಡುತ್ತಿರುವುದು ಹೊಸದೇನಲ್ಲ. ಯಂತ್ರಗಳ ಬಳಕೆಯಿಂದಾಗಿ ಕೂಲಿ ಕೆಲಸಗಳಲ್ಲಿ ಗಣನೀಯ ಇಳಿಕೆ ಕಂಡುಬಂದಿದೆ. ಕಡು ಬಡತನದ ತೀವ್ರತೆಯನ್ನು ಮನಗಂಡಿರುವ ಸರ್ವೋಚ್ಚ ನ್ಯಾಯಾಲಯ 'ಆಹಾರ ಭದ್ರತೆಗೆ' ಸ್ಪಷ್ಟ ನಿರ್ದೇಶನ ನೀಡಿದೆ. ಹಸಿವಿನಿಂದ ಯಾರೂ ಬಳಲಬಾರದು ಎಂಬ ಸದಾಶಯದ ಈ ನಿರ್ದೇಶನದ ಫಲವಾಗಿ ಬಿಸಿಯೂಟ ಯೋಜನೆ ಜಾರಿಗೆ ಬಂದಿದೆ. ಇದಲ್ಲದೆ ಗ್ರಾಮೀಣ ಅಕುಶಲ ಕೆಲಸಗಾರರಿಗೆ ಒಂದು ಆರ್ಥಿಕ ವರ್ಷದಲ್ಲಿ ೧೦೦ ದಿನಗಳಷ್ಟು ಕೂಲಿ ಒದಗಿಸುವ 'ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆ-೨೦೦೫' ರಾಷ್ಟ್ರದ ಎಲ್ಲ ಜಿಲ್ಲೆಗಳಲ್ಲಿ ಅನುಷ್ಠಾನಕ್ಕೆ ಬಂದಿದೆ. ಉದ್ಯೋಗ ಮಾಡಲು ಅರ್ಹರಿರುವ ಕೂಲಿಕಾರರಿಗೆ ನಿಯಮಿತವಾಗಿ 'ಕೂಲಿ' ಸಿಗುವಂತಹ ವಾತಾವರಣ ನಿರ್ಮಾಣಗೊಂಡಿಲ್ಲ. ಉದ್ಯೋಗ ಸೃಷ್ಟಿಯ ಯೋಜನೆ, ಕಾರ್ಯಕ್ರಮಗಳು ಅನುದಾನ ಅಲಭ್ಯತೆ ಮತ್ತು ಇತರ ಗೊಂದಲಗಳಿಂದಾಗಿ ಮಧ್ಯದಲ್ಲಿಯೇ ಸ್ಥಗಿತಗೊಳ್ಳುವುದರಿಂದ ಕೂಲಿಕಾರರಿಗೆ ಉದ್ಯೋಗ ಭದ್ರತೆ ದೂರದ ಮಾತಾಗುತ್ತದೆ. ಅಸಂಘಟಿತ ವಲಯದ ಕೂಲಿಕಾರರ ಪರಿಸ್ಥಿತಿ ದಿನದಿಂದ ದಿನಕ್ಕೆ ಹೊಸ ತಿರುವು ಪಡೆದುಕೊಳ್ಳತೊಡಗಿದೆ. 'ಕೂಲಿ' ನಿಗದಿತ ದರಗಳಲ್ಲಿ ಸಿಗುತ್ತಿಲ್ಲ. ಅಲ್ಲದೆ, ಉದ್ಯೋಗಗಳ ಕೊರತೆ ಸತತವಾಗಿ ಎದುರಾಗಿ ಕೂಲಿಕಾರರಿಗೆ ಸುನಿಶ್ಚಿತ ಬದುಕು ಸಾಗಿಸಲು ಅಸಾಧ್ಯವಾಗಿದೆ. ಯಾವುದೇ ನಿರ್ದಿಷ್ಟ ಕೆಲಸಕ್ಕೆ ಪುರುಷರಿಗೆ ಸಿಗುವ ಕೂಲಿ ಅದೇ ಕೆಲಸ ಮಾಡುವ ಮಹಿಳೆಯರಿಗೆ ದೊರೆಯುತ್ತಿಲ್ಲ. ಲಿಂಗಭೇದವು ನಮ್ಮ ದೇಶದ ಕೂಲಿ ನೀಡಿಕೆಯಲ್ಲಿ ಇನ್ನೂ ಜೀವಂತವಾಗಿಯೇ ಉಳಿದಿದೆ. ನಮ್ಮ ದೇಶದ ಕೂಲಿ ನೀಡಿಕೆಯ ಒಂದು ವರದಿ ಇಂತಿದೆ : 'ಭಾರತದಲ್ಲಿ ಉತ್ಪಾದಕ ಕಾರ್ಯದಲ್ಲಿ ತೊಡಗಿರುವ ಕಾರ್ಮಿಕರಿಗೆ ತಾಸಿನ ಲೆಕ್ಕದಲ್ಲಿ ನೀಡುವ ವೇತನ ದರವು ಅಮೆರಿಕಾದ ಡಾಲರು ಲೆಕ್ಕದಲ್ಲಿ ೦.೫೬ ಇದ್ದರೆ, ಅದು ಫಿಲಿಪ್ಪೀನ್ಸ್‌ನಲ್ಲಿ ೧.೭೭ ಡಾಲರು ಇದೆ. ಮಲೇಷ್ಯಾದಲ್ಲಿ ೧.೯೬ ಡಾಲರು ಮತ್ತು ಮೆಕ್ಸಿಕೋದಲ್ಲಿ ೨.೧೪ ಡಾಲರುಗಳಷ್ಟಿದೆ. ಅಮೆರಿಕಾ, ಬ್ರಿಟನ್, ಜರ್ಮನಿ ಬಿಟ್ಟರೆ, ಜಗತ್ತಿನಲ್ಲಿ ಅತಿ ಹೆಚ್ಚು ಶತಕೋಟಿ ಡಾಲರ್ ಶ್ರೀಮಂತರು ಇರುವುದು ಭಾರತದಲ್ಲಿಯೇ. ಮಿಲಿಯನ್ ಡಾಲರ್ ಶ್ರೀಮಂತರಂತೂ ಲಕ್ಷಾಂತರ ಮಂದಿ ಇದ್ದಾರೆ. ಆದರೆ ಮಾನವ ಅಭಿವೃದ್ಧಿಯಲ್ಲಿ ಭಾರತಕ್ಕೆ ೧೨೬ನೇ ಸ್ಥಾನ. ಭಾರತವು ಲಕ್ಷಾಂತರ ಮಂದಿ ಮಿಲಿಯನ್ ಡಾಲರ್ ಶ್ರೀಮಂತರಿಂದ ಕೂಡಿದ್ದರೂ ದಿನಕ್ಕೆ ೨೦ ರೂ. ಅಷ್ಟೇ ಗಳಿಸುವ ಎಂಭತ್ತು ಕೋಟಿ ಜನರಿದ್ದಾರೆ. ಇದೇ ಅಭಿವೃದ್ಧಿಗೆ ದೊಡ್ಡ ಸವಾಲಾಗಿದೆ. ಈ ಸವಾಲನ್ನು ಎದುರಿಸಲು ಸರಕಾರ ಹಲವು-ಹತ್ತು ಯೋಜನೆಗಳನ್ನು ಜಾರಿಗೊಳಿಸಿದ್ದರೂ ಅವು ಬಡಜನರಿಗೆ ಮತ್ತು ಕೆಳಹಂತದವರಿಗೆ ಸರಿಯಾಗಿ ತಲುಪುತ್ತಿಲ್ಲದಿರುವ ಕೊರಗು ಎಲ್ಲೆಡೆ ಜನಜನಿತವಾಗಿದೆ. ಬಡ ಕೂಲಿಕಾರರಿಗೆ ಬದುಕು ಕಟ್ಟಿಕೊಳ್ಳುವ ಕನಸಿಗಿಂತಲೂ ಹಸಿವಿನ ಹಂಗು ಹರಿದುಕೊಳ್ಳುವುದೇ ಹರಸಾಹಸವಾಗಿದೆ.

ಕೂಲಿಕಾರರಿಗೆ ವೇತನ ಪಾವತಿ ಯಾವದೇ ಶೋಷಣೆಗೆ ಒಳಗಾಗದಂತೆ ವಿತರಿಸುವ ವ್ಯವಸ್ಥೆ ಮತ್ತು ಕನಿಷ್ಠ ಕೂಲಿ ಸಿಗುವಂತೆ ನೋಡಿಕೊಳ್ಳುವ ಕಾಯ್ದೆ- ಕಾನೂನು ಜಾರಿಯಲ್ಲಿವೆ. ಕನಿಷ್ಠ ಕೂಲಿ ಕೊಡುವುದರಲ್ಲಿ ಯಾವದೇ ಅವ್ಯವಸ್ಥೆ ತಲೆದೋರದಂತೆ ಕಾರ್ಮಿಕ ಇಲಾಖೆಯನ್ನು ತೆರೆಯಲಾಗಿದೆ. ಇಷ್ಟೆಲ್ಲ ವ್ಯವಸ್ಥೆ ಇದ್ದರೂ ಕೂಲಿಕಾರರಿಗೆ, ಕಾರ್ಮಿಕರಿಗೆ, ಮಹಿಳಾ ಕಾರ್ಮಿಕರಿಗೆ ಕನಿಷ್ಠ ಕೂಲಿಯೂ ಸರಿಯಾಗಿ ದೊರೆಯುತ್ತಿಲ್ಲ. ಸರಕಾರ ಜಾರಿಗೆ ತಂದ ಸಂಪೂರ್ಣ ಗ್ರಾಮ ರೋಜಗಾರ್ ಯೋಜನೆಯು ಸ್ಥಳೀಯ ಕೆಲಸಗಾರರಿಗೆ ಉದ್ಯೋಗ ನೀಡಲು ಮತ್ತು ನಿಗದಿತ ವೇತನ ನಗದು -

ಆಹಾರ ಧಾನ್ಯ ವಿತರಣೆಯಲ್ಲೂ ಮುಗ್ಗರಿಸಿದ್ದು ಕನಿಷ್ಠ ಕೂಲಿ ಸಿಗದ ಒಂದು ತಾಜಾ ಉದಾಹರಣೆಯಾಗಿದೆ. ಕರ್ನಾಟಕ ರಾಜ್ಯದ ೨೦೦೫-೦೬ನೇ ಸಾಲಿನ ಆರ್ಥಿಕ ಸಮೀಕ್ಷೆ ಪ್ರಕಾರ ಗ್ರಾಮೀಣ ಭಾಗದ ಕೃಷಿ ಕೆಲಸಗಾರರಿಗೆ ದೊರೆತ ನೈಜ ದಿನಗೂಲಿ ಇಂತಿದೆ:

| ವಿವರ | ರೂ. ದಿನಕ್ಕೆ ೧೯೯೩-೯೪ | ಚಾಲ್ತಿ ಬೆಲೆಗಳಲ್ಲಿ ಮಾರ್ಚ್ - ೨೦೦೬ |
|---|---|---|
| ಗಂಡಸರು | ೨೨.೧೪ | ೬೦.೦೦ |
| ಮಹಿಳೆಯರು | ೧೫.೮೦ | ೩೮.೦೦ |

ಭಾರತದ ಗ್ರಾಮೀಣ ಪ್ರದೇಶದ ದಿನಗೂಲಿ ವಿವರ ಕೆಳಗಿನಂತಿದೆ :

| ಚಟುವಟಿಕೆ | ಪುರುಷರಿಗೆ | | ಮಹಿಳೆಯರಿಗೆ | |
|---|---|---|---|---|
| | ೧೯೯೩-೯೪ | ೧೯೯೯-೨೦೦೦ | ೧೯೯೩-೯೪ | ೧೯೯೯-೨೦೦೦ |
| | ರೂ.ಗಳಲ್ಲಿ | ರೂ.ಗಳಲ್ಲಿ | ರೂ.ಗಳಲ್ಲಿ | ರೂ.ಗಳಲ್ಲಿ |
| ೧. ಲೋಕೋಪಯೋಗಿ ಕಾಮಗಾರಿ | ೨೪.೬೫ | ೩೦.೮೯ | ೧೮.೫೨ | ೧೪.೮೨ |
| ೨. ಕೃಷಿ ಕೆಲಸ | ೨೧.೫೯ | ೨೫.೪೮ | ೧೫.೧೨ | ೧೭.೯೯ |
| ೩. ಕೃಷಿಯೇತರ ಕೆಲಸ | ೩೦.೧೫ | ೩೭.೪೯ | ೧೭.೪೬ | ೨೩.೪೯ |
| ೪. ಎಲ್ಲಾ ಚಟುವಟಿಕೆಗಳ ಕೆಲಸ ಸೇರಿ | ೨೩.೧೮ | ೨೮.೬೫ | ೧೫.೩೩ | ೧೮.೫೧ |

ಕನಿಷ್ಠ ಕೂಲಿ ಕಾಯ್ದೆ ೧೯೮೪ರ ಅನ್ವಯ ಪ್ರತಿಯೊಬ್ಬ ಕೂಲಿಕಾರರಿಗೆ ತನ್ನ ದುಡಿಮೆಗೆ ಸರಿಯಾಗಿ ಕನಿಷ್ಠ ಕೂಲಿ ಪಡೆಯುವ ಹಕ್ಕನ್ನು ಹೊಂದಿರುವ ಅವಕಾಶ ದೊರೆತಿದೆ. ಈ ಬಗ್ಗೆ ಸ್ಪಷ್ಟವಾದ ತಿಳುವಳಿಕೆ ಕೂಲಿಗಾರರಿಗೆ ಇಲ್ಲದಿರುವುದು, ಕಡಿಮೆ ಕೂಲಿ ಪಡೆಯುವಂತೆ ಮಾಡಿದೆ. ಕನಿಷ್ಠ ಕೂಲಿ ಕಾಲಾನುಸಾರ ಆಗಾಗ ಪರಿಷ್ಕರಣೆಯೂ ಆಗುತ್ತಿಲ್ಲ. ಕನಿಷ್ಠ ಕೂಲಿ ಒಂದು ಅರ್ಥದಲ್ಲಿ ಸಚೇತನಗೊಂಡಿಲ್ಲ; ಇದಲ್ಲದೆ ಹಲವು ಗೊಂದಲಗಳಿಗೂ ಕಾರಣವಾಗಿದೆ.

ಕನಿಷ್ಠ ಕೂಲಿ ಎಂದರೇನು ಎಂಬುದರ ಬಗ್ಗೆ ಹಲವು ಜಿಜ್ಞಾಸೆಗಳು, ವಾದ-ವಿವಾದಗಳು ಚರ್ಚೆಯಲ್ಲಿವೆ. ಸಾಮಾನ್ಯವಾಗಿ ಕನಿಷ್ಠ ಕೂಲಿ ಎಂದರೆ ದುಡಿತಕ್ಕೆ ತಕ್ಕ ಕೂಲಿ ಸಂದಾಯವನ್ನು ಮಾಡುವುದಾಗಿದೆ. ಕೂಲಿ ಕೆಲಸ ಹಾಗೂ ಬಂಡವಾಳ ಉಪನ್ಯಾಸದಲ್ಲಿ ಮಾರ್ಕ್ಸ್ 'ಕನಿಷ್ಠ ಕೂಲಿ'ಯ ವಿವರಣೆಯನ್ನು ಈ ರೀತಿ ನೀಡಿದ್ದಾರೆ : ಕೂಲಿಕಾರರ ಶ್ರಮದ ಬೆಲೆಯನ್ನು ಅವಶ್ಯ ಜೀವನಾಧಾರ ಸಾಧನೆಗಳ ಬೆಲೆಯಿಂದ ನಿರ್ಧರಿಸಲಾಗುವುದು. ಸರಳವಾದ ಶ್ರಮಶಕ್ತಿಯ ಉತ್ಪಾದನಾ ವೆಚ್ಚವು ಕಾರ್ಮಿಕನ ಅಸ್ತಿತ್ವ ಹಾಗೂ ಕುಟುಂಬದ ಸಾತತ್ಯದ ಸಮನಾಗಿರುತ್ತದೆ. ಈ ಅಸ್ತಿತ್ವ ಹಾಗೂ ಕುಟುಂಬದ ಸಾತತ್ಯದ ವೆಚ್ಚದ ಬೆಲೆಯೇ ಕೂಲಿಯಾಗಿರುತ್ತದೆ. ಹೀಗೆ ನಿರ್ಧರಿಸಲಾದ ಕೂಲಿಯನ್ನು ಕನಿಷ್ಠ ಕೂಲಿ ಎಂದು ಕರೆಯಲಾಗುತ್ತದೆ.

ಸರಕುಗಳ ಬೆಲೆಯನ್ನು ಒಟ್ಟಿನ ಮೇಲೆ ಉತ್ಪಾದನಾ ವೆಚ್ಚದಿಂದ ನಿರ್ಧರಿಸಲಾಗುವ ಪ್ರಸಂಗದಲ್ಲಿ ಇರುವಂತೆಯೇ ಈ ಪ್ರಸಂಗದಲ್ಲೂ ಕನಿಷ್ಠ ಕೂಲಿಯು ಬಿಡಿ ವ್ಯಕ್ತಿಗೆ ಅನ್ವಯವಾಗುವುದಿಲ್ಲ, ಇಡೀ ಕಾರ್ಮಿಕ ಕುಲಕ್ಕೇ ಅನ್ವಯವಾಗುತ್ತದೆ. ಬಿಡಿ ಕಾರ್ಮಿಕರು, ಮಿಲಿಯಾಂತರ ಕಾರ್ಮಿಕರು, ಅಸ್ತಿತ್ವದಲ್ಲಿದ್ದು ಕುಟುಂಬದ ಸಾತತ್ಯಕ್ಕೆ ಸಾಧ್ಯವಾಗುವಷ್ಟು ಕೂಲಿಯನ್ನೇನೂ ಪಡೆಯುವುದಿಲ್ಲ. ಆದರೆ, ಇಡೀ ಕಾರ್ಮಿಕ ವರ್ಗದ ಕೂಲಿಯು ತನ್ನ ಏರುಪೇರುಗಳ ಚೌಕಟ್ಟಿನೊಳಗೆ, ಈ ಕನಿಷ್ಠ ಕೂಲಿಯ ಮಟ್ಟಕ್ಕೆ ಬರುತ್ತದೆ.

ಕೂಲಿ ಕೆಲಸದ ಸರಾಸರಿ ಬೆಲೆಯೇ ಕನಿಷ್ಠ ಕೂಲಿ. ಅಂದರೆ, ಕೆಲಸಗಾರನು ಕೇವಲ ಕೆಲಸಗಾರನಾಗಿ ಉಳಿಯುವಂತೆ ಇರಿಸಲು ತೀರ ಅವಶ್ಯವಾದ ಜೀವನಾಧಾರ ಪ್ರಮಾಣ, ಪ್ರತಿ ವ್ಯಕ್ತಿ ಪ್ರತಿ ದಿನ ೨೪೦೦ ಕ್ಯಾಲರಿ ಪ್ರಮಾಣದ ಪೌಷ್ಟಿಕ ಆಹಾರ ಪಡೆಯಲು ಸಾಧ್ಯ ಮಾಡುವುದೇ ಕನಿಷ್ಠ ಕೂಲಿಯ ಸದಾಶಯವಾಗಿದೆ. ಗಾಂಧೀಜಿಯವರು ಹೇಳಿರುವ ಈ ಮಾತು ಕನಿಷ್ಠ ಕೂಲಿಯ ಅಗತ್ಯತೆಯನ್ನು ಬಿಂಬಿಸುವಂತಿದೆ. ಈ ದೇಶದ ಕಡುಬಡವರು ಹಸಿವಿನ ಯಾತನೆ ಮತ್ತು ನರಳುವಿಕೆಯಿಂದ ಮುಕ್ತರಾದಾಗ ಮಾತ್ರ ಭಾರತವು ನಿಜವಾದ ಸ್ವಾತಂತ್ರ್ಯವನ್ನು ಹೊಂದುತ್ತದೆ. ಇದು ಕನಿಷ್ಠ ಕೂಲಿಯ ಉನ್ನತ ಅಷ್ಟೇ ಕ್ರಮಬದ್ಧವಾದ ಮಾನದಂಡವಾಗಿದೆ.




ಸ್ವತಂತ್ರ ಭಾರತದ ನಾಗರಿಕತ್ವದ ಮಹತ್ವ ಮತ್ತು ಅರ್ಥವಂತಿಕೆಯನ್ನು ನಾವಿಂದು ಸರಿಯಾಗಿ ಅರ್ಥೈಸುವ ಅಗತ್ಯವಿದೆ. ನಾಗರಿಕತೆಯು ಎರಡು ಮೌಲ್ಯಗಳನ್ನೊಳಗೊಂಡಿದೆ : (೧) ಸ್ವಾತಂತ್ರ್ಯ (೨)ಜವಾಬ್ದಾರಿ. ಸಕಲರಿಗೂ ಸಮಬಾಳು ಸಮಪಾಲು ಸಿಗಬೇಕಾದರೆ ಜನಸಂಖ್ಯೆಯ ಬಹು ಭಾಗವಾಗಿರುವ ಕಾರ್ಮಿಕ ವರ್ಗಕ್ಕೆ ಅವರ ದುಡಿತಕ್ಕೆ ತಕ್ಕ ಪ್ರತಿಫಲ ದೊರೆಯುವಂತಾಗಬೇಕು. ಇಂದು ಪ್ರತಿಯೊಬ್ಬ ಕೂಲಿಕಾರ ಚಿಂತೆಯೊಳಗೆ, ತುಮುಲದೊಳಗೆ ಸಿಲುಕಿಕೊಂಡಿದ್ದಾನೆ. ಅವನಿಗೆ ತನ್ನ ಮತ್ತು ತನ್ನ ಪರಿವಾರಕ್ಕೆ ಭದ್ರತೆ ಸಿಗುವ ಭರವಸೆಯ ತಾಕಲಾಟ ಬಲವಾಗಿದೆ. ದುಡಿಯುವ ಜನ ಗುರಿ ವಂಚಿತರಾದರೆ ಯಾವುದೇ ಸಮುದಾಯ ಏಳ್ಗೆಯನ್ನು ಸಾಧಿಸದು. ಶ್ರಮಿಕರೇ ದೇಶದ ಶಕ್ತಿಯೂ ಹೌದು, ಅಂತರ ಸತ್ವವೂ ಹೌದು. ದುಡಿಯುವ ಕೈಗಳಿಗೆ ಕೆಲಸ ಮತ್ತು ಸಮರ್ಥನೀಯ ಕೂಲಿ ಕೊಡುವುದು ನಾಗರಿಕ ಸರಕಾರದ ಆದ್ಯ ಕರ್ತವ್ಯವೇ ಆಗಿದೆ. ಕನಿಷ್ಠ ಕೂಲಿಯಂತಹ ಸಾಮಾನ್ಯ ಸಂಗತಿಗಳು ಚಾಚೂ ತಪ್ಪದೇ ಜಾರಿಯಲ್ಲಿ ತರುವಲ್ಲಿ ಯಾವ ಲೋಪವೂ ಜರುಗದಂತಿರಬೇಕು. ಕೂಲಿಗಾರರಿಗೆ ಸಲ್ಲಬೇಕಾದ ಕೂಲಿ ಸಲ್ಲುವುದು ರಾಷ್ಟ್ರೀಯ ಕರ್ತವ್ಯವೇ ಆಗಿದೆ.

ಕಾರ್ಮಿಕರ ಸುರಕ್ಷತೆಯು ಕೇಂದ್ರ / ರಾಜ್ಯ ಸರಕಾರಗಳ ಜಂಟಿ ಹೊಣೆಗಾರಿಕೆ ಎಂದು ಭಾರತದ ಸಂವಿಧಾನವು ಸ್ಪಷ್ಟವಾಗಿ ಹೇಳಿದೆ. ಈ ಹೊಣೆಗಾರಿಕೆಯನ್ನು ನಿಭಾಯಿಸುವ ಪ್ರಾಥಮಿಕ ಹೆಜ್ಜೆಯಾಗಿ ಕಾರ್ಮಿಕರಿಗೆ ಕನಿಷ್ಠ ಕೂಲಿ ಸಿಗುವಂತೆ ಮಾಡುವುದಾಗಿದೆ.

ಶ್ರಮ ಶಕ್ತಿಗೆ ತಕ್ಕ ಮೌಲ್ಯ-ಮಾನ ಸಿಗಬೇಕು. ಇದು ಕಾಲದ ಕರೆಯಾಗಿದೆ. ಜಗತ್ತಿನ ಕೇವಲ ಹತ್ತರಷ್ಟು ಇರುವ ಬಂಡವಾಳಶಾಹಿಗಳ ಕೈಯಲ್ಲಿಯೇ ಸಂಪತ್ತು ಅಂತಸ್ತು ಕೇಂದ್ರೀಕೃತವಾಗುತ್ತ ಹೋದರೆ ಮನುಕುಲದ ಅಭ್ಯುದಯದ ಆಧಾರ ಸ್ತಂಭವಾಗಿರುವ ಶ್ರಮಶಕ್ತಿಯು ಪರ್ಯಾಯ ಆಲೋಚನೆ ಮಾಡುವ ಕಾಲ ಸದ್ಯದಲ್ಲಿಯೇ ಸನ್ನಿಹಿತವಾಗಲಿದೆ ಎಂಬ ಎಚ್ಚರಿಕೆ ಇಟ್ಟುಕೊಳ್ಳುವುದು ಅಗತ್ಯ.

ಕೈಗಾರಿಕೀಕರಣ, ಉದಾರೀಕರಣ, ಜಾಗತೀಕರಣದ ಇಂದಿನ ದಿನಗಳಲ್ಲಿ ಶ್ರಮಶಕ್ತಿಯ ಬಳಕೆಯು ಇಳಿಮುಖಗೊಳ್ಳುತ್ತಲಿದೆ. ನಿರುದ್ಯೋಗ ಎಲ್ಲೆಡೆ ಕಾಣಿಸಿಕೊಳ್ಳತೊಡಗಿದೆ. ಇದು ಸಾಮಾಜಿಕ ಸ್ವಾಸ್ಥ್ಯವನ್ನು ಕೆಡಿಸುವ ಭೀತಿಯನ್ನು ಹೆಚ್ಚಿಸಿದೆ. ಇಂಥ ಪರಿಸ್ಥಿತಿಯನ್ನು ಪೂರ್ವಭಾವಿಯಾಗಿಯೇ ಅವಲೋಕಿಸಿದ ಏಂಗೆಲ್ಸ್‌ರ ವಿಚಾರದ ಉಲ್ಲೇಖ ಇಲ್ಲಿ ಪ್ರಸ್ತುತ.

* ದೈಹಿಕ ಶ್ರಮದಲ್ಲಿನ ಕಾರ್ಯ ಕೌಶಲ್ಯ ಹಾಗೂ ಶಕ್ತಿ ಬಳಕೆ ಕಮ್ಮಿಯಾದಷ್ಟೂ, ಅಂದರೆ ಆಧುನಿಕ ಕೈಗಾರಿಕೆಯು ಹೆಚ್ಚು ಅಭಿವೃದ್ಧಿಗೊಂಡಷ್ಟೂ ಪುರುಷರ ಶ್ರಮದ ಸ್ಥಳದಲ್ಲಿ ಹೆಚ್ಚು ಹೆಚ್ಚಾಗಿ ಸ್ತ್ರೀಯರ ಹಾಗೂ ಬಾಲರ ಶ್ರಮವು ಬಳಕೆಗೆ ಬರತೊಡಗುತ್ತದೆ. ಕಾರ್ಮಿಕ ವರ್ಗದ ವಯಸ್ಸು ಅಥವಾ ಲಿಂಗ ಆಧಾರಿತ ವ್ಯತ್ಯಾಸಗಳೂ ಎಲ್ಲ ಸಾಮಾಜಿಕ ಮಹತ್ವವನ್ನು ಕಳೆದುಕೊಳ್ಳುತ್ತವೆ. ಇವರೆಲ್ಲರೂ ಶ್ರಮ ಸಾಧನಗಳೇ. ಇವರ ವಯಸ್ಸು ಹಾಗೂ ಲಿಂಗಕ್ಕೆ ತಕ್ಕಂತೆ ಇವರ ಬಳಕೆಯು ಬಂಡವಾಳಗಾರನಿಗೆ ಹೆಚ್ಚು ಅಥವಾ ಕಮ್ಮಿ ಖರ್ಚಿನದಾಗಿರುತ್ತದೆ.

* ಮಧ್ಯಮ ವರ್ಗದ ಕೆಳಗಿನ ಸ್ತರದ ಜನರು, ಪುಟ್ಟ ಕೈಗಾರಿಕೆದಾರರು, ವ್ಯಾಪಾರಿಗಳು, ಅಂಗಡಿಕಾರರು ಮತ್ತು ಕೈಕಸುಬಿನ ಜನರು ಹಾಗೂ ರೈತರು – ಇವರೆಲ್ಲರೂ ಕ್ರಮೇಣ ಶ್ರಮಜೀವಿಗಳ ಮಟ್ಟಕ್ಕೆ ಕುಸಿಯುತ್ತಾರೆ.

* ಈಗಿನ ಸ್ವಾಧೀನ ಪಡಿಸಿಕೊಳ್ಳುವ ಪದ್ಧತಿಯಲ್ಲಿ ಕೂಲಿಕಾರನು ಕೇವಲ ಬಂಡವಾಳವನ್ನು ಹೆಚ್ಚಿಸಲಷ್ಟೇ ಬಾಳುತ್ತಾನೆ. ಆಳುವ ವರ್ಗದ ಹಿತಕ್ಕೆ ಎಲ್ಲಿಯವರೆಗೆ ಅಗತ್ಯವಾಗುತ್ತದೋ ಅಲ್ಲಿಯವರೆಗಷ್ಟೇ ಅವನಿಗೆ ಬಾಳಲು ಅವಕಾಶ ದೊರೆಯುತ್ತದೆ.

* ಉತ್ಪಾದಕ ಬಂಡವಾಳ ಹೆಚ್ಚಿದಂತೆ ಶ್ರಮ ವಿಭಜನೆ ಹೆಚ್ಚುತ್ತದೆ. ಯಂತ್ರಗಳ ಬಳಕೆ ವಿಸ್ತರಿಸುತ್ತದೆ. ಶ್ರಮ ವಿಭಜನೆಯೂ ಯಂತ್ರಗಳ ಬಳಕೆಯೂ ಹೆಚ್ಚಿದಂತೆ

ಕಾರ್ಮಿಕರ ಮಧ್ಯೆಯೇ ಸ್ಪರ್ಧೆ ಹೆಚ್ಚುತ್ತದೆ ಮತ್ತು ಅವರ ಕೂಲಿ ಕಮ್ಮಿಯಾಗುತ್ತದೆ.

* ಒಂದು ಕಡೆ ಅಪರಿಮಿತವಾದಷ್ಟು ಸಂಪತ್ತು ಹಾಗೂ ಕೊಳ್ಳುವವರು ಕೊಳ್ಳಲಾಗದಷ್ಟು ಅತ್ಯಧಿಕ ಪ್ರಮಾಣದ ಉತ್ಪನ್ನಗಳು; ಮತ್ತೊಂದು ಕಡೆ ಶ್ರಮಜೀವಿಗಳಾದ ಕೂಲಿಗಾರರು ಕೆಲಸಗಾರರಾಗಿ ಪರಿವರ್ತಿತರಾಗಿ ಅಂತಹ ಅಧಿಕ ಮಟ್ಟದ ಉತ್ಪನ್ನಗಳನ್ನು ಬಳಸಿಕೊಳ್ಳಲು ಅಸಮರ್ಥರಾಗುತ್ತಾರೆ. ಇದರಿಂದಾಗಿ ಒಂದು ಅಲ್ಪ ಸಂಖ್ಯೆಯ ಭಾರಿ ಶ್ರೀಮಂತವರ್ಗ; ಇನ್ನೊಂದು ಬಹುಸಂಖ್ಯಾತ ಆಸ್ತಿರಹಿತ ಕೂಲಿಗಾರರ ವರ್ಗ ಹೀಗೆ ಸಮಾಜ ವಿಭಜನೆಗೊಳ್ಳುತ್ತದೆ. ಅದೇ ಹೊತ್ತಿಗೆ ಜಾಗತಿಕ ಮಾರುಕಟ್ಟೆ, ಬೃಹತ್ ಬಂಡವಾಳದಾರರಿಗೆ ಸಿಗುತ್ತಿರುವ ಉತ್ತೇಜನ, ಸ್ಥಳೀಯ ಉದ್ಯೋಗ ಮತ್ತು ಉತ್ಪನ್ನದ ಮೇಲೆ ನೇರ ಪರಿಣಾಮ ಬೀರುತ್ತಿರುವುದು ಇವುಗಳಿಂದಾಗಿ ಕಾರ್ಮಿಕರ ಬಾಳು ಇನ್ನಷ್ಟು ಹೀನಾಯ ಸ್ಥಿತಿಗೆ ತಲುಪುವ ಲಕ್ಷಣಗಳು ಸ್ಪಷ್ಟವಾಗಿ ಗೋಚರಿಸುತ್ತಿವೆ.

ಕೂಲಿಗಾರರ ಪರಿಣತಿ ಮತ್ತು ಶ್ರಮಶಕ್ತಿಯನ್ನು ಬಳಸಿಕೊಳ್ಳುವಲ್ಲಿಯ ಕೊರತೆಯು ಸಾಮಾಜಿಕವಾಗಿ ಹೆಚ್ಚು ಆತಂಕ ಹುಟ್ಟಿಸುವ ಸಂಗತಿಯಾಗಿದೆ. ಮಾನವ ಸಂಪನ್ಮೂಲಗಳು ಬಳಕೆಯಾಗದೇ ಹೋದರೆ ಸಾಮಾಜಿಕ ವಿಷಮತೆಯು ಹೆಚ್ಚಾಗುತ್ತದೆ ಮತ್ತು ಅನಿಯಂತ್ರಿತಗೊಳ್ಳುತ್ತದೆ. ಕಾರ್ಮಿಕ ನೀತಿ ಪರಿಣತರು, ಸಾಮಾಜಿಕ ತಜ್ಞರು ಈಗಾಗಲೇ ಅರಾಜಕತೆಯ ಕುರಿತು ಸೂಕ್ತ ಎಚ್ಚರಿಕೆ ನೀಡಿದ್ದಾರೆ. ಪ್ರತಿಯೊಬ್ಬ ಕಾರ್ಮಿಕನ ಬದುಕು ಸಹ್ಯ ಮತ್ತು ನೆಮ್ಮದಿಗೆ ಭಾಜನವಾಗುವಂತಹ ಪರಿಸರ ನಿರ್ಮಾಣ ಮಾಡುವುದು ತುರ್ತಿನ ಕಾರ್ಯವಾಗಿದೆ.

**ಸ. ರಾ. ಸುಳಕೂಡೆ**
೧೩೯, ಶಿವಪ್ರಸಾದ, ಶ್ರೀ ಬಸವೇಶ್ವರ ಬಡಾವಣೆ
ರಾಮತೀರ್ಥನಗರ, ಬೆಳಗಾವಿ - ೫೯೦೦೧೬

# ಪ್ರಜ್ಞಾವಂತಿಕೆಯ ಮರು ವಿಮರ್ಶೆ : ಇಂದಿನ ಅಗತ್ಯ

**ಶ**ರಣರು, ಸೂಫಿಗಳು ಬದುಕಿದ ನಾಡಿನಲ್ಲಿ ಇಂದು ಭ್ರಾತೃತ್ವಕ್ಕೆ ಕೊಡಲಿಪೆಟ್ಟು ಬೀಳುತ್ತಿದೆ. ಸನಾತನ ಹಿಂದೂ ಧರ್ಮಾನುಯಾಯಿ, ಶ್ರೇಷ್ಠ ರಾಮಭಕ್ತ ಮಹಾತ್ಮಾ ಗಾಂಧೀಜಿ ಇಂದು ನಮ್ಮ ಯುವ ಜನತೆಗೆ ಮಾದರಿಯಾಗಿ ಕಾಣುತ್ತಿಲ್ಲದಿರುವುದು ವಿಷಾದದ ಸಂಗತಿಯಾಗಿದೆ. ರಾಮ, ಕೃಷ್ಣ ಇಬ್ಬರನ್ನೂ ಆಳವಾಗಿ ಅಧ್ಯಯನ ಮಾಡಿದ ರಾಮ ಮನೋಹರ ಲೋಹಿಯಾರ ರಾಷ್ಟ್ರೀಯ, ರಾಜಕೀಯ ಚಿಂತನೆಗಳನ್ನು ತಿಳಿದುಕೊಳ್ಳುವ ವ್ಯವಧಾನ ನಮ್ಮ ಪೀಳಿಗೆಗೆ ಇಲ್ಲವಾಗಿದೆ. ಪರಧರ್ಮ ದ್ವೇಷಿಸುವ, ಶಾಂತಿ ಕದಡಿ, ಕೋಮುಗಲಭೆ ಹುಟ್ಟುಹಾಕುವವರನ್ನೇ ರಾಷ್ಟ್ರಭಕ್ತರು, ದೇಶಪ್ರೇಮಿಗಳು ಎಂದು ತಪ್ಪಾಗಿ ಅರ್ಥೈಸಿ, ವ್ಯವಸ್ಥಿತವಾಗಿ ಪ್ರಚಾರ ಮಾಡುವ ಕಾರ್ಯ ಸಾಗಿರುವುದು ಆತಂಕ ತರುತ್ತಿದೆ.

ಇಂತಹ ಸನ್ನಿವೇಶ ನಿರ್ಮಾಣವಾಗಲು ಇರುವ ಕಾರಣಗಳು, ರಾಜಕೀಯ-ಸಾಂಸ್ಕೃತಿಕ ವೈಫಲ್ಯಗಳನ್ನು ಸ್ವವಿಮರ್ಶೆಗೆ ಒಡ್ಡಿಕೊಳ್ಳಬೇಕಾದ ಬಹುದೊಡ್ಡ ಜವಾಬ್ದಾರಿ ಪ್ರತಿಯೊಬ್ಬ ಪ್ರಜ್ಞಾವಂತರ ಹೆಗಲ ಮೇಲೆ ಇದೆ.

ಕೋಮುವಾದದ ವಿರುದ್ಧವಾಗಿ ಮಾತನಾಡಿದೊಡನೆ, ಆತನನ್ನು ನಾಸ್ತಿಕ ಎಂದು ಭಾವಿಸಿ, 'ಬುದ್ಧಿಜೀವಿ' ಪಟ್ಟ ಕಟ್ಟುವ ಪದ್ಧತಿ ನಮ್ಮಲ್ಲಿ ಬೆಳೆಯುತ್ತಿದೆ. ಕೋಮುವಾದವನ್ನೂ ಬಯಸದ, ನಾಸ್ತಿಕವಾದವನ್ನೂ ಒಪ್ಪದ ಜನರ ಸಂಖ್ಯೆ ಭಾರತದಲ್ಲಿ ದೊಡ್ಡ ಪ್ರಮಾಣದಲ್ಲಿದೆ. ಆದರೆ ಹೀಗೆ ಆಲೋಚಿಸುವವರು ಮತ್ತು ಆ ರೀತಿಯಲ್ಲಿ ಬದುಕಲು ಬಯಸುವವರು ಇಂದು ದಾರಿ ತಪ್ಪಿದಂತಾಗಿದ್ದಾರೆ. ಇಂತಹ ಸಮಾಜವಾದಿ ನೆಲೆಯ ಚಿಂತನೆಗಳನ್ನು ಇಂದು ಪುನರ್ ಅಧ್ಯಯನಕ್ಕೊಳಪಡಿಸಿ, ಕೋಮುವಾದ, ಉಗ್ರವಾದಕ್ಕೆ ಹೊರತಾದ ಸ್ಪಷ್ಟ ಮಾರ್ಗಸೂಚಿ ರೂಪಿಸಬೇಕಾಗಿದೆ.

ಕಳೆದ ದಶಕಗಳಲ್ಲಿ ಪ್ರಗತಿಪರ ಹೋರಾಟಗಳು, ಬಂಡಾಯ ಸಂಘಟನೆಗಳಲ್ಲಿ ಗುರುತಿಸಿಕೊಳ್ಳಲು ಹೆಮ್ಮೆಪಡುತ್ತಿದ್ದ ಅಂದಿನ ಯುವ ಸಮುದಾಯದಂತೆ ಈಗಿನ ಪೀಳಿಗೆ ಆಲೋಚಿಸುತ್ತಿಲ್ಲ. ಅಷ್ಟೇ ಅಲ್ಲ; ಪ್ರಗತಿಪರತೆ, ಸೌಹಾರ್ದತೆ ಎಂಬ ಪದಗಳ ವಿಶಾಲ ಅರ್ಥ ಗ್ರಹಿಸಿಕೊಳ್ಳದೇ, ಇಂತಹ ಚಳವಳಿಗಳನ್ನು ಕಂಡರೆ ಮೂಗುಮುರಿಯುವ ಪರಿಸ್ಥಿತಿ ನಿರ್ಮಾಣವಾಗಿದೆ.

ಕೋಮುಶಕ್ತಿಗಳು ಯುವಕರ ಹಸಿ ಭಾವನೆಗಳನ್ನು ಹದಗೆಡಿಸುತ್ತಿದ್ದರೆ, ಉಗ್ರವಾದಿಗಳು ತಮ್ಮ ಕೃತ್ಯಗಳಿಗೆ ಧಾರ್ಮಿಕ ಲೇಪನ ಹಚ್ಚಿ, ಜಿಹಾದ್ ಪಟ್ಟ ಕಟ್ಟಲು ಯತ್ನಿಸುತ್ತಿದ್ದಾರೆ. ಆಯಾ ಧರ್ಮಗಳ ಮೂಲಸಾರವನ್ನೇ ತಿಳಿಯದ ಕಿಡಿಗೇಡಿಗಳು ಇಂತಹ ಕೆಲಸಗಳಲ್ಲಿ ನಿರತರಾಗಿದ್ದಾರೆ. ನಿಜವಾದ, ನಿಷ್ಕಲ್ಮಶ ಧರ್ಮಾನುಯಾಯಿಗಳು ಒಪ್ಪದ ಕಾರ್ಯಗಳನ್ನು ಧರ್ಮಾಂಧರು ಮಾಡುತ್ತಿದ್ದಾರೆ. ಹಾಗೂ ಅದರಲ್ಲಿ ಬಹುಪಾಲು ಮೇಲುಗೈಯನ್ನೂ ಸಾಧಿಸುತ್ತಿದ್ದಾರೆ.

ಧರ್ಮದ ಹೆಸರಿನಲ್ಲಿ ತ್ರಿಶೂಲ ಹಂಚುವವರನ್ನು, ಜಿಹಾದ್ ಹೆಸರಿನಲ್ಲಿ ಬಾಂಬ್ ಸ್ಫೋಟಿಸುವ ಉಗ್ರವಾದಿಗಳು ಇಬ್ಬರನ್ನೂ ಪ್ರತ್ಯೇಕಿಸಿ ನೋಡಬಾರದು. ಇಬ್ಬರೂ ದೇಶಕ್ಕೆ ಸಮಾನವಾಗಿ ಅಪಾಯಕಾರಿಗಳಾಗಿದ್ದಾರೆ. ಇವರಿಬ್ಬರ ಪ್ರಚೋದನಕಾರಿ ಮಾತುಗಳು, ಚಟುವಟಿಕೆಗಳು ದೇಶದ ಭದ್ರತೆಗೆ ಧಕ್ಕೆ ತಂದಿವೆ.

ದೇಶದ ಒಳಿತಿಗಾಗಿ ತ್ರಿಶೂಲಧಾರಿಗಳು ಮತ್ತು ಆತಂಕವಾದಿಗಳನ್ನು ಮಟ್ಟ ಹಾಕಲೇಬೇಕು. ಆದರೆ ಆಯಾ ಧರ್ಮಗಳಲ್ಲಿನ ಹಿರಿಯರು ಮತ್ತು ಪ್ರಜ್ಞಾವಂತರು ಈ ಕಾರ್ಯಕ್ಕೆ ಕೈಹಾಕಿದಾಗ ಮಾತ್ರ ಅಂತಹ ಪ್ರಯತ್ನ ಪರಿಣಾಮಕಾರಿಯಾಗುತ್ತದೆ. ಇಲ್ಲವಾದರೆ ಒಂದು ಧರ್ಮದ ಬಗ್ಗೆ ಮತ್ತೊಬ್ಬರು ಮಾತನಾಡಿದಾಗ ಅನಗತ್ಯ ವಿವಾದಗಳು ಉಲ್ಬಣಗೊಳ್ಳುತ್ತವೆ. ಹಿಂದೂ ಧರ್ಮದಲ್ಲಿನ ಮತಾಂಧರನ್ನು ಹಿಂದೂಗಳೇ ನಿಗ್ರಹಿಸುವ, ಇಸ್ಲಾಮ್ ಹೆಸರಿನಲ್ಲಿ ಧರ್ಮಾಂಧ ಕೆಲಸ ಮಾಡುವವರನ್ನು ಅಲ್ಲಿನ ಹಿರಿಯರೇ ತಡೆಯುವ ಔದಾರ್ಯ ಬೆಳೆದರೆ, ನಾವು ನೆಲೆಸಿದ ನೆಲಕ್ಕೆ ದೊಡ್ಡ ಉಪಕಾರ ಮಾಡಿದಂತಾಗುತ್ತದೆ.

ನಮ್ಮ ಬುದ್ಧಿಜೀವಿಗಳು, ಚಿಂತಕರೆನಿಸಿಕೊಂಡವರು ವಾಸ್ತವ ಜಗತ್ತಿಗೆ ಅರ್ಥವಾಗುವ ಸರಳ ಭಾಷೆಯಲ್ಲಿ ಮಾತನಾಡಬೇಕು. ಪ್ರಗತಿಪರರು, ಎಡಪಂಥೀಯ ಹೋರಾಟಗಾರರು ಅತ್ಯುತ್ತಮ ಆಶಯಗಳನ್ನಿಟ್ಟುಕೊಂಡೇ ಚಳವಳಿನಿರತರಾಗಿದ್ದರೂ ಕೂಡ ಅವು ನಿರೀಕ್ಷಿತ ಮಟ್ಟದ ಪರಿಣಾಮ ಬೀರುತ್ತಿಲ್ಲ. ಅದಕ್ಕೆ ಕಾರಣಗಳನ್ನು ತಿಳಿದುಕೊಂಡು ಹೊಸ ಮಾರ್ಪಾಡುಗಳೊಂದಿಗೆ, ಸಾಕಷ್ಟು ಜನಬೆಂಬಲ ಪಡೆಯುವ ನಿಟ್ಟಿನಲ್ಲಿ ಯಶಸ್ಸು ಸಾಧಿಸಬೇಕು. ಇಲ್ಲದಿದ್ದರೆ ಕೋಮುವಾದಿಗಳ ಓಟಕ್ಕೆ ಕಡಿವಾಣ ಹಾಕಲು ಸಾಧ್ಯವಿಲ್ಲ.

ಉಭಯ ಧರ್ಮಗಳಲ್ಲಿಯೂ ವೈಚಾರಿಕ ಸ್ಪಷ್ಟತೆಯಿಲ್ಲದ ಮುಗ್ಧರನ್ನು ಅಲ್ಲಿನ ಕೋಮುವಾದಿಗಳು ತಮ್ಮ ಉದ್ರೇಕಕಾರಿ ಮಾತುಗಳಿಂದ ಸೆಳೆದುಕೊಳ್ಳುತ್ತಿರುವುದನ್ನು ತಡೆಯದಿದ್ದರೆ ಸಮಾಜದ ಸ್ವಾಸ್ಥ್ಯ ಹದಗೆಡುತ್ತಲೇ ಹೋಗುತ್ತದೆ.

ಬಡತನ, ನಿರುದ್ಯೋಗಗಳಂತಹ ಸಮಸ್ಯೆಗಳನ್ನು ನಿವಾರಿಸಿ ಅನ್ನ, ವಿದ್ಯೆ, ವಸತಿ, ಆರೋಗ್ಯ, ಸಾಮಾಜಿಕ ನ್ಯಾಯ ಇರುವಂತಹ ಸುಭಿಕ್ಷ ರಾಷ್ಟ್ರವನ್ನು ನಿರ್ಮಾಣ ಮಾಡುವುದು ಕೋಮುವಾದಿಗಳಿಂದ ಸಾಧ್ಯವಿಲ್ಲ. ಇಂತಹ ಕಾರ್ಯಗಳಿಗೆ ಅವರು ಆದ್ಯತೆ ನೀಡುವುದಿಲ್ಲ. ಕೇವಲ ಮಠ, ಮಂದಿರಗಳನ್ನು ಕಟ್ಟಿ ವರ್ಣಾಶ್ರಮ ಪದ್ಧತಿಯನ್ನು ಪುನಃ ಸ್ಥಾಪಿಸುವುದು ಅವರ ಗುಪ್ತಕಾರ್ಯಸೂಚಿಯಾಗಿದೆ.

ಕೋಮುವಾದ, ನಾಸ್ತಿಕವಾದ ಎರಡಕ್ಕೂ ಹೊರತಾದ ಪ್ರಜ್ಞಾವಂತರನ್ನು ಒಳಪಡಿಸಿಕೊಂಡು ವ್ಯಾಪಕ ನೆಲೆಯಲ್ಲಿ ಚರ್ಚೆ, ವಿಮರ್ಶೆಗಳ ಮೂಲಕ ಎಲ್ಲ ವರ್ಗಗಳಲ್ಲಿ ಹೊಸ ಆಲೋಚನೆ, 'ಹೊಸತ'ರೆಡೆಗೆ ಜನಸಮುದಾಯಗಳನ್ನು ಕರೆದೊಯ್ಯಬೇಕಿದೆ.

ಬುದ್ಧ, ಬಸವಣ್ಣ, ಶಿಶುನಾಳ ಶರೀಫರು, ಮಹಾತ್ಮಾ ಗಾಂಧೀಜಿ, ಅಂಬೇಡ್ಕರ್, ಅವರ ಚಿಂತನೆಗಳ ಮೂಲಕ ಪ್ರಸಕ್ತ ಸನ್ನಿವೇಶಕ್ಕೆ ಉತ್ತರ ಕಂಡುಕೊಳ್ಳಬೇಕು. ಗಾಂಧೀಜಿ ಈಗ ಇದ್ದಿದ್ದರೆ ಏನು ಮಾಡುತ್ತಿದ್ದರೆಂಬುದನ್ನು ಊಹಿಸಿ, ಆ ದಿಶೆಯಲ್ಲಿ ಹೆಜ್ಜೆ ಇಡುವ ಸಂಘಟಿತ ವಿಮರ್ಶೆ, ಪ್ರಯತ್ನಗಳು ವರ್ತಮಾನದ ಅಗತ್ಯತೆಗಳಾಗಿವೆ.

**ಮಂಜುನಾಥ ಡಿ. ಡೊಳ್ಳಿನ**. ಪ್ರಸಾರ ನಿರ್ವಾಹಕರು, ಆಕಾಶವಾಣಿ, ಭದ್ರಾವತಿ, ಶಿವಮೊಗ್ಗ ಜಿಲ್ಲೆ

# ಬಂಡಿರಾಮುನಿ ಹೆಂಡತಿ


ತೆಲುಗು ಮೂಲ : ಮಾಧವ ಪೆದ್ದಿ ಗೋಪಾಲಕೃಷ್ಣ ಗೋಖಲೆ

ಕನ್ನಡಾನುವಾದ : ಗುರುಮೂರ್ತಿ ಪೆಂಡಕೂರು


**ಚೆ**ನ್ನಪಟ್ಟಣ (ಈಗಿನ ಚೆನ್ನೈ)ದಲ್ಲಿ 'ಲಾ' ಓದುತ್ತಿದ್ದ ಗೋಪಾಲನು ಆ ವರುಷ ಮೊದಲ ವರ್ಷದ 'ಲಾ' ಪರೀಕ್ಷೆಗೆ ಕೂತು ಬೇಸಿಗೆ ರಜೆಗೆಂದು ತನ್ನೂರು ಮಾಧವಪಲ್ಲೆಗೆ ಹೊರಟು ಮರುದಿನ ಮಧ್ಯಾಹ್ನದ ವೇಳೆಗೆ ಗೂಡೂರು ರೈಲು ನಿಲ್ದಾಣಕ್ಕೆ ಬಂದನು. ಗೂಡುರಿನಿಂದ ಮಾಧವಪಲ್ಲೆಗೆ ಸುಮಾರು ಆರು ಮೈಲಿ ದೂರ.

ಸ್ಟೇಷನ್‌ನಲ್ಲಿ ಇಳಿದೊಡನೆ ತಮ್ಮೂರಿನ ರಾಮನ ಕುದುರೆಗಾಡಿಯನ್ನು ಹುಡುಕಿದ. ಆದರೆ ಅಲ್ಲೆಲ್ಲೂ ಅವನ ಸುಳಿವಿರಲಿಲ್ಲ. ಇನ್ನಾವುದಾದರೂ ಬಂಡಿ ಸಿಗಬಹುದೇನೋ ಎಂದು ಹುಡುಕಾಡಿದ. ಅಲ್ಲಿ ತವರುಮನೆಗೆ ಬರುತ್ತಿದ್ದ ಒಬ್ಬರಲ್ಲದೆ, ಮನೆ ಮಗಳನ್ನು ಕರೆತರಲು ಬಂದ ಒಂದು ಎರಡೆತ್ತಿನ ಬಂಡಿ ಮಾತ್ರ ಕಂಡವು.

ದೂರ ಪಯಣ ಮಾಡಿ ಹುಟ್ಟೂರಿಗೆ ಬರುತ್ತಿದ್ದ ಉತ್ಸಾಹವೂ, ಉದಯಕಾಲದ ಮಾಗಣಿ ಪ್ರಾಂತದ ಅಂದವನ್ನು ಕಂಡು ಉಂಟಾದ ಆನಂದವೂ ಗೋಪಾಲನ ಎದೆಯಲ್ಲಿ ಕರಗಲು ಪ್ರಾರಂಭವಾಯಿತು.

ಸ್ಟೇಷನ್‌ನಲ್ಲಿಳಿದ ಪ್ರಯಾಣಿಕರು ಮೊದಲಿನಂತೆ ಬಣ್ಣ ಬಣ್ಣದ ಟ್ರಂಕುಗಳನ್ನು, ಗಂಟು ಗದಡಿಗಳನ್ನು ತಲೆಯ ಮೇಲೆ ಹೊತ್ತು ಕಾಲುದಾರಿ ಹಿಡಿದು ಹತ್ತಿರದ ಹಳ್ಳಿಗಳಿಗೆ ಹರಟೆ ಹೊಡೆಯುತ್ತಾ ನಡೆದುಹೋಗುತ್ತಿರುವುದನ್ನು ಕಂಡು ಗೋಪಾಲನು ನಿಟ್ಟುಸಿರು ಬಿಟ್ಟನು.

''ಯಾವ ಊರು ?'' ಥಟ್ಟನೆ ಗೋಪಾಲ ಹಿಂದಿರುಗಿ ನೋಡಿದನು. ಭುಜದ ಮೇಲೆ ಬಡಿಗೆಯೊಂದನ್ನಿಟ್ಟುಕೊಂಡು ಎರಡು ಕೈಗಳನ್ನು ಅದರ ಮೇಲೆ ತೂಗಾಡಿಸಿಕೊಂಡು ಕೊರಳಲ್ಲಿ ಬೆಳ್ಳಿಯ ಪದಕವನ್ನು ಧರಿಸಿ ನಿಂತ ಶ್ಯಾಮ ವರ್ಣದ ಬಾಲಕನೊಬ್ಬನು ಗೋಪಾಲನನ್ನು ದಿಟ್ಟಿಸಿ ನೋಡುತ್ತಾ ನಿಂತಿದ್ದಾನೆ.

''ನೀನು ಮಾಧವಪಲ್ಲೆ ಹನುಮಂತಯ್ಯನವರ ಮಗನಲ್ಲವೇ ?'' ಎಂದು ಕೇಳುತ್ತಾನೆ.

''ಹೌದು, ನಿನಗೆ ಹೇಗೆ ತಿಳೀತು ?'' ಎಂದು ಅವನನ್ನು ಆಶ್ಚರ್ಯಕರವಾಗಿ ನೋಡುತ್ತಾ ಗೋಪಾಲ ಕೇಳಿದ.

''ನನಗ್ಗೊತ್ತು. ಹಿಂದೆ ನೀನು, ನಿಮ್ಮಪ್ಪ ಅಮ್ಮ ರಾಮನ ಕುದುರೆ ಗಾಡಿಯಲ್ಲಿ ಬಂದು ತೆನಾಲಿಗೆ ಹೋಗಿ ಬರುವುದನ್ನು ನೋಡಿದ್ದೇನೆ. ಈಗ ಸೂಟು, ಬೂಟು ಧರಿಸಿದ ಕಾರಣ ಥಟ್ಟನೇ ಗುರ್ತು ಹತ್ತಲಿಲ್ಲ'' ಎಂದನು.

''ಒಳ್ಳೇ ಜಾಣನೇ, ನಮ್ಮೂರ ರಾಮನ ಕುದುರೆಗಾಡಿ ಏಕೆ ಬಂದಿಲ್ಲ ವೆಂದು ನಿನಗೇನಾದ್ರೂ ಗೊತ್ತಾ? ಅವನು ರೈಲಿನ ಸಮಯಕ್ಕೆ ಯಾವಾಗಲು ಇಲ್ಲಿರೋನು'' ಎಂದ.

''ರಾಮನು ಕುದುರೆ ಗಾಡಿಯನ್ನು ಮಾರಿ ಒಂಟೆತ್ತಿನ ಬಂಡಿ ತಗೊಂಡಾನೆ. ನಿಮ್ಮೂರಿನಿಂದ ಈಗ ತೆನಾಲಿಗೆ ಬಸ್ ಹಾಕಿದ್ದಾರೆ ಗೊತ್ತಿಲ್ಲವೋ ?'' ಎಂದು ಕೇಳಿದ ಹುಡುಗ.

''ನಂಗೊತ್ತಿಲ್ಲಾ! ಎಲ್ಲಿದೆ ಬಸ್ಸು?'' ಎಂದ ಗೋಪಾಲ, ಬಸ್ಸುಗಳು ದೇಶದ ದಿಕ್ಕು ದಿಕ್ಕುಗಳಿಗೆ ಓಡುತ್ತಿವೆಯೆಂದುಕೊಂಡವನಂತೆ.

''ಅಯ್ಯೋ! ಅದೊಂದು ದರಿದ್ರ ಬಸ್ಸು, ಎಲ್ಲಾದರೂ ಸ್ವಲ್ಪ ಹೊತ್ತು ನಿಂತರೆ ಜನರೆಲ್ಲಾ ಅದನ್ನು ದಬ್ಬುವವರೆಗೆ ಕದಲುವುದೇ ಇಲ್ಲ. ಸ್ವಲ್ಪ ಹೊತ್ತಿಗೆ ಮೊದಲು ಆ ಬಸ್ಸನ್ನು ಜನರು ತೆನಾಲಿಯ ಕಡೆಗೆ ತಳ್ಳಿಕೊಂಡು ಹೋದರು. ಮತ್ತೆ ವಾಪಸ್ಸು ಯಾವಾಗ ಬರ್ತಾರೋ. ಅದೋ, ರಾಮನ ಬಂಡಿ ಬರ್ತಿದೆ' ಎಂದು ರೋಡಿನ ಕಡೆಗೆ ತೋರಿಸಿ ಆ ಕಪ್ಪು ಬಾಲಕನು ಹೇಳಿದ.

ತೆನಾಲಿಗೆ ಹೋಗುವ ದೊಡ್ಡ ರೋಡಿನಿಂದ ಸ್ಟೇಷನ್‌ಗೆ ಬರುವ ಸಣ್ಣ ರೋಡಿನಲ್ಲಿ ತಿರುಗಿ ಎತ್ತುಗಳನ್ನು ಹಗ್ಗದಿಂದ ಎಳೆದು ತರುತ್ತಿದ್ದ ರಾಮನನ್ನು ಗೋಪಾಲ ಗಮನಿಸಿದ.

ರಾಮನ ಒಂಟೆತ್ತಿನ ಬಂಡಿಯನ್ನು ಕಂಡು ಗೋಪಾಲನಿಗೆ ಕಸಿವಿಸಿಯಾದರೂ ತನಗೆ ಗೂಡೂರು ಸ್ಟೇಷನ್ನಿನಿಂದ ವಿಮುಕ್ತಿ ದೊರಕುತ್ತದೆಂದು ಭಾವಿಸಿ ಸಂತೋಷಪಟ್ಟನು.

ಆ ಬಂಡಿಯಲ್ಲಿ ಬಂದ ತಮ್ಮೂರಿನ ಕೋಮಟಿ ಕೋಟಮ್ಮ, ಕೋಟಮ್ಮನ ಮೊಮ್ಮಗಳು ಅಕ್ಕಮ್ಮನನ್ನು ಕಂಡಕೂಡಲೆ ಗೋಪಾಲನಿಗೆ ಕೋಟಮ್ಮನ ಅಂಗಡಿಯು ಥಟ್ಟನೆ ನೆನಪಾಯಿತು.

ಕೋಟಮ್ಮನ ಒಂದು ಕಣ್ಣು ಕಾಯಾಗಿದೆ, ಮತ್ತೊಂದು ಮಸುಕಾಗಿದೆ. ಹಿಂದೊಮ್ಮೆ ತಾನು ಒಂದು ಸವಕಲು ಅರ್ಧರೂಪಾಯಿ ಮತ್ತು ಒಂದು ನಕಲಿ ನಾಲ್ಕಾಣೆಯನ್ನು ಕೋಟಮ್ಮನ ಅಂಗಡಿಯಲ್ಲಿ ಚಲಾಯಿಸಿದ್ದನ್ನೂ , ತಾನು ಕೇಳಿದ ಗಡಿಯಾರ ಬ್ರಾಂಡ್ ಸಿಗರೇಟ್ ಕೊಡಲು ಕೋಟಮ್ಮ ಗೋಣಿ ಚೀಲದಲ್ಲಿ ತಡಕಾಡುತ್ತಿರುವಾಗ ತಾನು ಗಲ್ಲಾ ಪೆಟ್ಟಿಗೆಯಿಂದ ಕೈಗೆ ಸಿಕ್ಕಷ್ಟು ಚಿಲ್ಲರೆ ಕಾಸನ್ನು ತೆಗೆದು ಜೇಬಿಗೆ ಸೇರಿಸಿಕೊಂಡದ್ದನ್ನು ನೆನೆದು ನಸುನಕ್ಕನು.

''ತಮ್ಮಾ, ನೀನು ಹನುಮಂತಯ್ಯನವರ ಹುಡುಗ ಗೋಪಾಲನಲ್ಲವೇ? ಚೆನ್ನಾಗಿದೀಯಾ ? ಚೆನ್ನಪಟ್ಟಣದಲ್ಲಿ ಪ್ಲೀಡರ್ ಓದುತ್ತಿರುವೆಯಂತೇ? ಹೋಗಲಿ ಬಿಡು, ಮೊಮ್ಮಗಳನ್ನು ಗಂಡನ ಮನೆಗೆ ಕರೆದುಕೊಂಡು ಹೋಗ್ತಿದ್ದೇನೆ'' ಎಂದು





ಗೋಪಾಲನನ್ನು ಮಾತಾಡಿಸಿ ಟ್ರಂಕೂ ಹಾಸಿಗೆ ತೆಗೆದುಕೊಂಡು ಮೊಮ್ಮಗಳನ್ನು ಕರೆದುಕೊಂಡು ರೈಲು ಪ್ಲಾಟ್‌ಫಾರಂಗೆ ನಡೆದಳು ಕೋಟಮ್ಮ.

''ಏನು ಯಜಮಾನ್ರೇ! ಆರಾಮಾಗಿದ್ದೀರಾ ? ನೀವು ಬರ್ತಿರಾಂತ ಮೂರು ದಿನ ಮೊದಲೇ ನಿಮ್ಮ ಅಪ್ಪಾಜಿ ಹೇಳಿದ್ದರು. ಹತ್ತಿ ಬಂಡಿ ಹತ್ತಿ ಹೋಗೋಣ'' ಎಂದು ಬಂಡಿಯಲ್ಲಿ ಗೋಣಿ ತಟ್ಟನ್ನು ಕೊಡವಿ ಸರಿಮಾಡಿ, ಗೋಪಾಲನ ಸಾಮಾನುಗಳನ್ನಿಟ್ಟು ಎತ್ತಿನ ಹಗ್ಗಗಳನ್ನು ಹಿಡಿದು ಪಯಣ ಸನ್ನದ್ಧನಾದ ಬಂಡಿರಾಮ.

ಗೋಪಾಲನು ಕೊಟ್ಟ ಆಣೆ ಕಾಸನ್ನು ಹಿಡಿದು ಸ್ಟೇಶನ್‌ಗೆ ಆ ಕಪ್ಪು ಬಾಲಕ ಓಡಿದ. ಊರು ದಾಟಿದ ಮೇಲೆ ಬಂಡಿ ಹತ್ತಿದ ಗೋಪಾಲ, ರಾಮನನ್ನು ಬಂಡಿ ಹತ್ತುವುದಿಲ್ಲವೇ ಎಂದು ಕೇಳಿದನು.

''ನಾನು ಬಂಡಿ ಹತ್ತಿದರೆ ಎತ್ತು ಮಾತು ಕೇಳುವುದಿಲ್ಲ. ಸ್ವಲ್ಪ ಮುಂದಕ್ಕೆ ಬಂದು ಕೂತ್ಕೊಳ್ಳಿ'' ಎಂದು ಎತ್ತಿನ ಪಕ್ಕದಲ್ಲಿಯೇ ನಡೆಯುತ್ತಾ ಬಂಡಿ ನಡೆಸಹತ್ತಿದ ಬಂಡಿರಾಮ.

''ನಿನಗ್ಯಾಕೆ ಬೇಕಾಗಿತ್ತೋ ಈ ಒಂಟೆತ್ತಿನ ಬಂಡಿ ಸಾವಾಸ ? ಕುದುರೆ ಬಂಡಿ ಯಾಕೆ ಮಾರಿದೆಯೋ, ರಾಮ'' ಎಂದು ರೋಡಿನ ತಗ್ಗು ದಿನ್ನೆಗಳಿಗೆ ಕುಲುಕುತ್ತಾ ಕೇಳಿದ ಗೋಪಾಲ.

''ಕುದುರೆ ಸತ್ತದ್ದರಿಂದ ಬಂಡಿ ಮಾರಬೇಕಾಯಿತು'' ಎಂದ ರಾಮ.

''ಅಯ್ಯೋ ಎಂಥಾ ಕುದುರೆ, ಏನಾಗಿತ್ತೋ ಅದಕ್ಕೆ ? ಯಾಕೆ ಸತ್ತಿತೊ ?'' ಎಂದು ರಸ್ತೆ ಬದಿಯ ಸಾಲುಮರಗಳನ್ನು ನೋಡುತ್ತಾ ಕೇಳಿದ ಗೋಪಾಲ.

''ಅದಕ್ಕಾಗಲೇ ವಯಸ್ಸಾಗಿತ್ತು. ಸರಿಯಾಗಿ ನೋಡಿಕೊಂಡರೆ ಇನ್ನೂ ಹತ್ತು ಹದಿನೈದು ವರ್ಷ ಬಾಳ್ತಿತ್ತು. ಆದರೆ ಒಣ ಹುಲ್ಲು, ಗಡಿಗೆ ನೀರು ಹಾಕಿದರೆ ಯಾವ ಕುದುರೆ ಬದುಕೀತು'' ಎಂದ ರಾಮ.

''ನಿನ್ನ ಕುದುರೆ ಏನು ಮೇಯುತ್ತಿತ್ತು ?'' ಕುದುರೆಗೆ ಏನು ಮೇಯಿಸುತ್ತಾರೆಂಬುದು ಗೋಪಾಲನಿಗೇನು ಗೊತ್ತು!

''ಎಲ್ಲಾ ಕುದುರೆಗಳಂತೆ ನನ್ನ ಕುದುರೆಯು ಹಸಿಹುಲ್ಲು ಹುರುಳಿಯ ಗುಗ್ರಿ, ತಿನ್ನೋದು. ನಮ್ಮೂರಿನಿಂದ ತೆನಾಲಿಗೊಂದು, ಗುಂಟುರಿಗೊಂದು ಬಸ್ ಹಾಕಿದರು ಗೊತ್ತಾ? ಆಗಿನಿಂದ ಬಂಡಿ ಬಾಡಿಗೆ ಕಡಿಮೆ ಆದವು. ನನ್ನ ಹತ್ರ ಹಣ ಇಲ್ಲದ್ರಿಂದ ಒಣ ಹುಲ್ಲು ಹಾಕತೊಡಗಿದೆ. ಆಗ ನನ್ನ ಕುದುರೆ ಸೊರಗಿ ಸೊರಗಿ ಸತ್ತುಹೋಯ್ತು''ಎಂದ ರಾಮ, ಎತ್ತಿನ ಬಾಲ ತಿರುವಿ 'ನಡಿನಡಿಯೇ ನಿದ್ದೆ ಮುಖದವನೇ' ಎಂದು ಗದರಿದನು.

ರಾಮನೊಂದಿಗೆ ಸಹಾನುಭೂತಿಯಿಂದ ಏನಾದರೂ ಮಾತಾಡಲು ಯೋಚಿಸಿ, ಕಡೆಗೆ ಏನೂ ತೋಚದೆ, ರಾಮನನ್ನೂ ಬಾಲದ ನೋವಿನಿಂದ ಓಡುತ್ತಿರುವ ಎತ್ತನ್ನೂ ಒಮ್ಮೆ ನೋಡಿ, ಗೋಡೆ ಕಡೆಗೆ ನೋಡ ತೊಡಗಿದ.

ಕೆಸರು ಗದ್ದೆಯಲ್ಲಿ ರೈತ ಕೂಲಿಕಾರರು ಭತ್ತದ ನಾಟಿಕಾರ್ಯ ನಡೆಸಿದ್ದಾರೆ. ಅವರ ಕಪ್ಪು ದೇಹಗಳು ಬಿಸಿಲಿನಲ್ಲಿ ಮಿರಮಿರ ಮಿಂಚುತ್ತಿವೆ. ಗದ್ದೆಯಲ್ಲಿ ಅಲ್ಲಲ್ಲಿ ತಾಳೆಗರಿಯಿಂದ ಪುಟ್ಟ ಪುಟ್ಟ ಗುಡಿಸಲು ಹಾಕಿ ಎತ್ತುಗಳನ್ನು ಕಟ್ಟಿದ್ದಾರೆ. ಆ ಕಡೆಗೆ ಮರಗಳ ನಡುವಿನಿಂದ ನೋಡಿದರೆ ಹಳ್ಳಿಯ ಸುಣ್ಣದ ಗೋಡೆಗಳು, ಮೇವಿನ ಬಣವೆಗಳೂ ಸಣ್ಣ ಗುಡಿ ಗೋಪುರವೂ ಕಾಣಿಸುತ್ತವೆ. ಎತ್ತಿನ ಮೈಯೂ, ರಾಮನ ಬನೀನೂ ಬೆವರಿನಿಂದ ತೊಯ್ದು ತಪ್ಪಡಿಯಾಗಿವೆ. ರಾಮನೂ ಎತ್ತೂ ಪಕ್ಕ ಪಕ್ಕದಲ್ಲಿ ಲಯಬದ್ಧವಾಗಿ ನಡೆಯುತ್ತಿದ್ದಾರೆ.

''ಅಬ್ಬಾ ಎಂಥ ಉರಿಬಿಸಿಲು! ಈ ಬಿಸಿಲಿನಲ್ಲಿ ನಡೆಯೋದರ ಬದಲು ಬಂಡಿ ಹತ್ತಬಾರದೇ ?'' ಎಂದು ಗೋಪಾಲ ರಾಮನನ್ನು ಮತ್ತೆ ಕೇಳಿದ.

''ಹೊಸಾ ಎತ್ತಲ್ಲವೇ ? ಇನ್ನೂ ಅದು ರೂಢಿ ಆಗಿಲ್ಲ. ಇದ್ದಕ್ಕಿದ್ದಂತೆ ಸೈಡು ಕಾಲುವೆಗೆ ಎಳೆಯುತ್ತದೆ. ಒಮ್ಮೆ ಆ ರೀತಿ ಆಯಿತು : ಬಂಡಿ ಬಿದ್ದರೂ ಯಾರಿಗೂ ಏನು ಆಗಲಿಲ್ಲ'' ಎಂದ ರಾಮ.

''ಅಬ್ಬ! ಈ ಒಂಟೆತ್ತಿನ ಬಂಡಿಯಲ್ಲಿ ಕೆಲ ಯುಗಗಳ ಪಯಣ ಮಾಡಿದಂತಿದೆ. ಗಡಕ್ ಗಡಕ್ ಎನ್ನೋ ಶಬ್ದ ತಲೆ ಒಡೆಯುವಂತಿದೆ. ಇನ್ನು ನಿನ್ನ ಗತಿ ದೇವರೇ ಬಲ್ಲನೋ ರಾಮ. ಈ ಆಮೆ ವೇಗದಲ್ಲಿ ನಿನ್ನ ಸಂಪಾದನೆಯಾದರೂ ಎಷ್ಟು? ಕುದುರೆ ಬಂಡಿ ಇದ್ದಾಗ ನಿನಗಿಷ್ಟು ಕಷ್ಟವಿರಲಿಲ್ಲ ಅಲ್ಲವೇ ? ನೀನು ಸುಮ್ಮನೆ ಈ ಬಂಡಿಯಿಂದ ಬಿಡುಗಡೆ ಮಾಡಿಕೊಂಡು ಬೇರಾವುದಾದರೂ ಕೆಲಸ ನೋಡಿಕೋ'' ಎಂದ ಗೋಪಾಲ.

''ನನ್ನ ಹೆಂಡ್ತಿ ಕೂಡಾ ಇದೇ ಮಾತು ಹೇಳ್ತಾಳೆ. ಆದರೂ ಇಷ್ಟು ವರ್ಷ ಬಂಡಿ ಕೆಲಸ ಮಾಡಿದವನಿಗೆ ಮತ್ತೊಂದು ಕೆಲಸ ಮಾಡಲು ಸಾಧ್ಯವಾದೀತೆ ? ಕುದುರೆ ಬಂಡಿ ಇರುವಾಗ ಇಷ್ಟೊಂದು ತೊಂದರೆ ಇರಲಿಲ್ಲ . ಇನ್ನು ಈ ಬಸ್ಸುಗಳು ಬಂದ ಮೇಲೆ ಕುದುರೆ ಸಾಕೋದು ದಂಡವೆನಿಸಿತು. ಕೂಲಿ ಸಿಗದಿದ್ದರೆ ಮನುಷ್ಯರು ಅಕ್ಕಿ ಅನ್ನವನ್ನು ಬಿಟ್ಟು ಜೋಳದಂಬಲಿಯನ್ನೋ ನವಣೆ ಅನ್ನವನ್ನೋ ತಿಂದರು. ಆದರೆ ಕುದುರೆ ಮಾತ್ರ ಹಸಿಹುಲ್ಲು ಬಿಟ್ಟು ಒಣ ಹುಲ್ಲನ್ನು ಕಣ್ಣೆತ್ತಿಯೂ ನೋಡಲಾರದು. ಆದಕ್ಕೇ ಅದು ಬೇಗನೆ ಸತ್ತುಹೋಯಿತು.'' ಮುಂಗೈಯಿಂದ ಹಣೆಯ ಬೆವರನ್ನು ಒರೆಸುತ್ತಾ ರಾಮನು ''ಒಟ್ಟು ಹನ್ನೆರಡು ವರ್ಷ ಬಂಡಿಯನ್ನು ಎಳೆಯಿತು ಆ ಕುದುರೆ. ನಾನು ಹನ್ನೆರಡು ವರ್ಷ ಅದರ ಮಾಲಿಷ್ ಮಾಡಿದೆ. ಹಡೆದ ತಾಯಿಗೂ ಅಷ್ಟು ಚಾಕರಿ ಮಾಡಿರಲಿಲ್ಲ.''

''ಎಲ್ಲಾ ಹಣೆಬರಹದಂತೆ ನಡೆಯುತ್ತವೆ'' ಎಂದು ಗೋಪಾಲನು ರಾಮನನ್ನು ಕನಿಕರದಿಂದ ನೋಡುತ್ತಾ ನುಡಿದ.

''ಅದೆಲ್ಲಾ ಸುಳ್ಳು. ಎಲ್ಲಾದರೂ ಹಸಿಹುಲ್ಲು ಒಣಹುಲ್ಲು ಕೂಡಾ ಹಣೆ ಬರಹವಾಗಿರುತ್ತದಾ ? ಸುಳ್ಳೇ ಸುಳ್ಳು . ನನ್ನವಳು ಕೂಡಾ ಹೀಗೆಯೇ ಹೇಳ್ತಾಳೆ. ಅವಳೊಬ್ಬಳು ಹುಚ್ಚಿ. ಏನು ಹೇಳಿದರೂ ಅರ್ಥವಾಗೋಲ್ಲ. ನಿಜವಾಗಿ ಅದಕ್ಕೆ ಎಂದೋ ಮತಿ ಇಲ್ಲವಾಗಿದೆ'' ಎಂದ ರಾಮ. ಬಂಡಿಯನ್ನು ಬದಿಗೆ ಎಳೆಯುತ್ತಿದ್ದ ಎತ್ತಿಗೆ ಎರಡು ಬಾರಿಸಿ ದಾರಿಗೆ ತಂದ.

''ಹೌದು, ಮರೆತೇ ಹೋಯ್ತು. ಈ ಮೊದಲು ನಿನ್ನ ಹೆಂಡತಿ ತೀರಿದಳು ಅಂತಾ...'' ಎಂದು ಅನುಮಾನದಿಂದ, ಅರ್ಧದಲ್ಲಿಯೇ ನಿಲ್ಲಿಸಿ ಸುಮ್ಮನಾದ ಗೋಪಾಲ.

''ಯಾರು ? ನನ್ನ ಮೊದಲ ಹೆಂಡತಿಯೇ ? ಅವಳೆಂದೋ ಸತ್ತು

ಸ್ವರ್ಗ ಸೇರಿದಳು. ಈಗಿರುವವಳು ಎರಡನೇ ಹೆಂಡತಿ'' ಎಂದ.

ಈ ಬೇಸಿಗೆ ರಜೆಯಲ್ಲಿ ತನಗೆ ಬರುತ್ತಿರುವ ಮದುವೆ ಸಂಬಂಧಗಳಲ್ಲಿ ಯಾವುದಾದರೂ ಒಂದು ಖಾಯಂ ಆಗಬಹುದೆಂದು ತಂದೆಯವರು ಈಚೆಗೆ ಸಂಕ್ಷಿಪ್ತವಾಗಿ ಬರೆದಿದ್ದರು. ಅಂದರೆ, ಪ್ರಾಯಶಃ ಈಗಾಗಲೇ ತಂದೆಯವರು ಯಾವುದಾದರೂ ಒಂದು ಸಂಬಂಧವನ್ನು ಖಾಯಂ ಮಾಡಿರುತ್ತಾರೆ. ಅವರಿಗೆ ತಲೆಯಲ್ಲೇನಾದರೂ ಹುಳ ಕೊರೆಯಲು ಪ್ರಾರಂಭಿಸಿದರೆ ಅದನ್ನೊಂದು ದಾರಿಗೆ ತರುವುದು ತಂದೆಯವರ ಅಭ್ಯಾಸ. ನಾನು ಮನೆ ಸೇರುವ ಹೊತ್ತಿಗೆ ತಂದೆಯವರಾಗಲೇ ಮದುವೆಗೆ ಬೇಕಾಗುವ ಸರಕು ಸಾಮಗ್ರಿಯಲ್ಲಿ ಅರ್ಧದಷ್ಟನ್ನಾದರೂ ಮನೆಯಲ್ಲಿ ತುಂಬಿರುತ್ತಾರೆ.

''ನಿಂದೇ ಅದೃಷ್ಟವಲ್ಲೋ ರಾಮ. ಸುನಾಯಾಸವಾಗಿ ಆಗಲೇ ಎರಡನೇ ಮದುವೇನೂ ಮಾಡ್ಕೊಂಡೆಯಲ್ಲ'' ಎಂದ ಗೋಪಾಲ, ಇನ್ನೂ ತಮ್ಮೂರು ಎಷ್ಟು ದೂರವೋ ಎಂದು ಬಗ್ಗಿ ನೋಡುತ್ತ.

''ನಿಜವಾಗಿ ಈ ಮದುವೆ ಇದ್ದಕ್ಕಿದ್ದಂತೆ ನಡೀತು. ನಿಕ್ಷೇಪದಂತಹ ಜೀವ ನನ್ನ ಉಡಿಸೇರಿ ಕಣ್ಣೀರಿಟ್ಟಳು. ಊರಿಗೆ ಹೋದ ಮೇಲೆ ನಿಮಗೆಲ್ಲಾ ಗೊತ್ತಾಗ್ತದೆ. ನಮ್ಮೂರಲ್ಲಿ ಈ ಮದುವೆ ವಿಷಯದಲ್ಲಿ ನನಗೆ ಏನೇನೋ ಅಂದರು. ನೀವು ಅವಕ್ಕೆಲ್ಲಾ ಕಿವಿಗೊಡಬೇಡಿ ಧಣಿಗಳೇ'' ಎಂದ ರಾಮ.

''ಪುಣ್ಯವಶಾತ್ ನೀನು ಮದುವೆಯಾದರೆ ನಾನಾ ತರಹ ಮಾತಾಡಲು ಊರವರಿಗೇನು ಕೆಲಸ? ಏನು ನಿನ್ನ ಮದುವೆಯಲ್ಲಿ ಅಷ್ಟು ವಿಶೇಷವೇನು ?'' ಎಂದು ಕೇಳಿದ

''ನಾನು ಮದುವೆಯಾಗೋ ಹೊತ್ತಿಗೆ ಅವಳು ಬಸುರಿಯಾಗಿದ್ದಳು.''

''ಯಾರಿಂದ ಬಸಿರು ?''

''ಅದೇ ವಿಷಯ : ಊರು ಸೇರಿದ ಮೇಲೆ ನಿಮಗೆ ಎಲ್ಲಾ ಗೊತ್ತಾಗ್ತದೆ ಅಂತ ನಾನು ಹೇಳಿದ್ದು ಅದಕ್ಕೇ ಧಣಿ''ಎಂದ ರಾಮ.

''ಹಾಳಾಗಲಿ, ಏನೋ ಅದು ರಾಮಾ ?''

''ಅದೇನಿಲ್ಲ ಬಿಡಿ, ಅವಳನ್ನು ಮಂಕುಮಾಡಿ ಯಾವನೋ ಧೂರ್ತ ಅವಳನ್ನು ಬಸಿರುಮಾಡಿದ. ಇನ್ನು ಇವಳನ್ನು ಮದುವೆಯಾಗೋರಾರು? ಅವಳು ಒಳ್ಳೆಯವಳೆಂದು ಎಲ್ಲರಿಗೂ ಗೊತ್ತು. ಮದುವೆ ದೈವೇಚ್ಛೆ. ಆದರೆ ಹೆಂಗಸು ತಲೆಯೆತ್ತಿ ನಾಕು ಜನರ ನಡುವೆ ತಿರುಗೋದಾದ್ರೂ ಹೇಗೆ ? ಅವಳು ನಾಚಿಕೆಯಿಂದ ಗುಡಿಸಲಲ್ಲಿ ಕೂತು ಸದಾ ಅಳುತ್ತಿದ್ದಳು.

''ಘೋರ ಅನ್ಯಾಯ'' ಎಂದ ಗೋಪಾಲ.

''ಅನ್ಯಾಯ ಅಂತ ಮೆಲ್ಲಗೆ ಹೇಳ್ತೀರಲ್ಲ. ಒಂದು ದಿನ ಅವಳಪ್ಪನ ಜೊತೆ ಅವಳ ಗುಡಿಸಲಿಗೆ ಹೋದರೆ ನನ್ನನ್ನು ನೋಡಿ ಗೋಳೋ ಎಂದಳು. ನನ್ನ ತಲೆ ತಿರುಗಿದಂತಾಯ್ತು. ನಿಜ ಹೇಳಬೇಕಂದ್ರ ಅವಳಮ್ಮ ಅಪ್ಪಗೆ ಅವಳನ್ನು ಕೊಲ್ಲಬೇಕೋ, ಅಡಗಿಸಿಡಬೇಕೋ ಅರ್ಥವಾಗಲಿಲ್ಲ. ಅವಳಪ್ಪ ಒಂದು ಕೋಲು ತೆಗೆದುಕೊಂಡು ಅದೇ ಮಾತೇ ಅಂದ. ಆಗ ನಾನು ಈ ಗಲಾಟೆಯೇಕೆ? ಅವಳಿಗಿಷ್ಟವಾದರೆ ನಾನೇ ಅವಳನ್ನು ಮದುವೆ ಮಾಡ್ಕೊತೀನಿ ಎಂದೆ. ತಕ್ಷಣ ಅವಳು ಓಡಿಬಂದು ನನ್ನನ್ನು ಅಪ್ಪಿಕೊಂಡಳು'' ಎಂದ ರಾಮ.

''ಅದಕ್ಕಾಗಿ ಮದುವೆ ಮಾಡಿಕೊಂಡೆಯೇನೋ ?''

''ಆ! ಅದರಲ್ಲಿನ್ನೇನು? ಮದುವೆಗೆ ಬಂದೋರು ಬಂದ್ರು. ಬರದವರ ಬಗ್ಗೆ ನಾನು ಯೋಚಿಸಲಿಲ್ಲ. ಆದರೆ ತಮಾಷೆಯೆಂದರೆ ಅವಳನ್ನು ಬಸಿರು ಮಾಡಿದೋನು ನಾನೇ ಎಂದು ಊರಿನವರು ಪುಕಾರು ಮಾಡಿದರು'' ಎಂದು ರಾಮ ನಗತೊಡಗಿದನು.

ರಾಮನನ್ನು ಹೊಸ ಮನುಷ್ಯನಂತೆ ಗೋಪಾಲನು ನಿಬ್ಬೆರಗಾಗಿ ನೋಡ ತೊಡಗಿದನು.

''ನೀನು ಭಾಳ ಧೈರ್ಯಸ್ಥ. ನೀನು ಮಾಡಿದ ಕೆಲಸವನ್ನು ಬೇರೆ ಯಾರೂ ಮಾಡಲ ಸಾಧ್ಯ ! ಆ ದುಷ್ಟನಾವನೋ ಅವನನ್ನು ಕತ್ತರಿಸಿ ಹಾಕಬೇಕಾಗಿತ್ತು'' ಎಂದ ಗೋಪಾಲ.

''ಆದರೆ ಅವನಾರೋ ಗೊತ್ತಾದರೆ ತಾನೆ ?'' ಎಂದ ರಾಮ.

''ಅದೇನು ನಿನ್ನ ಹೆಂಡತಿ ಹೇಳಲಿಲ್ಲವೇ ?'' ಎಂದು ಕೇಳಿದ ಗೋಪಾಲ.

''ಎರಡು ಮೂರು ಸಲ ಕೇಳಿದರೂ ಬಾಯಿ ಬಿಡಲಿಲ್ಲ, ನಿನಗಿಷ್ಟ ಆದ ಮೇಲೆ ಅವನು ಯಾರಾದರೇನು, ಎಂದಳು. ಯಾಕೀ ರಂಪ ಎಂತಾಳೆ ಹಟಮಾರಿ ಹೆಂಗ್ಸು''ಎಂದ ರಾಮ.

ದಾರಿಯಲ್ಲಿ ಎದುರಾದ ಬಸ್ಸಿಗೆ ಸೈಡು ಕೊಟ್ಟು ಮಾಧವಪಲ್ಲೆಯ ಕಡೆಗೆ ಬಂಡಿಯನ್ನು ತಿರುಗಿಸಿದ. ಆತುರಾತುರವಾಗಿ ''ಏಯ್ ರಾಮಾ ಅಲ್ಲಿ ನಮ್ಮ ಹೊಲದ ಹತ್ತಿರ ಎತ್ತರಕ್ಕೆ ನಿಂತವರು ನಮ್ಮ ತಂದೆಯಲ್ಲವೇ ? ಸರಿಯಾಗಿ ನೋಡು'' ಎಂದು ಬಂಡಿಯಿಂದಿಳಿದ ಗೋಪಾಲ.

* * *

ಗೋಪಾಲ ಸಮಾಧಾನವಾಗಿರುವ ಸಮಯ ನೋಡಿ ಅಮ್ಮ ಅಪ್ಪ ತಾವು ಬಹುತೇಕ ನಿರ್ಣಯಿಸಿದ ಮದುವೆ ಸಂಬಂಧದ ಬಗ್ಗೆ ವಿವರಿಸಿದರು. ಹರೆಯದವರಿಗೆ ಸಹಜವಾದ ಉದ್ದೇಶಗಳಿದ್ದ ಗೋಪಾಲನಿಗೆ ಸುಂದರ ಹೆಂಡತಿ ಬೇಕೆಂಬ ಆಸೆಯೊಂದು ಬಿಟ್ಟರೆ, ತನ್ನ ಮದುವೆಗೆ ಯಾವುದೇ ಕಾಲಪರಿಮಿತಿಯ ತೊಂದರೆ ನೀಡುವುದು ಅವನಿಗಿಷ್ಟವಿರಲಿಲ್ಲ. ತಾನು ವರಿಸಲಿರುವ ಸುಂದರಾಂಗಿಯನ್ನು ನೆನೆದು ಅವಳೊಂದಿಗೆ ತಾನು ಅನುಭವಿಸಲಿರುವ ಸಂಗಸುಖವನ್ನು ನೆನೆದು ತರತರಹದ ಕನಸು ಕಾಣುತ್ತಾ ಮಾಳಿಗೆಯ ಮೇಲೆ ತಿರುಗಾಡುತ್ತಿದ್ದ ಗೋಪಾಲನ ಕಣ್ಣಿಗೆ ಅವರ ಹಿತ್ತಲು ಬಾವಿಯಿಂದ ನೀರು ಒಯ್ಯುತ್ತಿದ್ದ ಮಂಗಮ್ಮಳನ್ನು ಕಂಡು ಆಪಾದಮಸ್ತಕ ನಡುಗಿದನು. ತಾನು ಊರಿಗೆ ಬಂದಿರುವ ವಿಷಯ ಅವಳಿಗೆ ತಿಳಿದಿರಬೇಕು. ತಾನು ಮಾಳಿಗೆಯ ಮೇಲೆ ಓಡಾಡುತ್ತಿರುವುದನ್ನೂ ಅವಳು ಗಮನಿಸಿರಬಹುದು, ಅದಕ್ಕೇ ನೀರು ತರುವ ನೆಪದಿಂದ ಹಿತ್ತಲ ಭಾವಿಗೆ ಬಂದಿರಬೇಕು ಎಂದುಕೊಂಡ. ಆದರೂ ಅವಳು ತನ್ನನ್ನು ನೋಡಿಯೂ ನೋಡದಂತೆ ತಲೆ ತಗ್ಗಿಸಿಕೊಂಡು ಹೋದದ್ದು ಸರಿಯೆನಿಸಲಿಲ್ಲ.

ಗಬಗಬ ಕೆಳಕ್ಕೆ ಹೋಗಿ, ಅಪ್ಪ ಕೆಲಸದ ಮೇಲೆ ಹೊರಹೋಗಿದ್ದನ್ನು ಅಮ್ಮ ಪಕ್ಕದ ಮನೆಯವರೊಂದಿಗೆ ಮಾತಿನಲ್ಲಿ ಮುಳುಗಿದ್ದನ್ನೂ ಗಮನಿಸಿ, ಭುಜದ ಮೇಲೊಂದು ತುಂಡು ಬಟ್ಟೆ ಹಾಕಿಕೊಂಡು ಬಚ್ಚಲು ಮನೆಗೆ ಸ್ನಾನ ಮಾಡುವವನಂತೆ ಬಂದ ಗೋಪಾಲ. ಬಚ್ಚಲು ಮನೆಯ ಪಕ್ಕದಲ್ಲಿಯೇ ಹಿತ್ತಲಿನ ಬಾವಿ. ಬಚ್ಚಲು ಮನೆಗೆ ತಾನು ಬಂದ ಬಾಗಿಲು ಹಾಕಿ ಹಿತ್ತಲ ಕಡೆಯ ಬಾಗಿಲ ಹತ್ತಿರ ಬಿಸಿಯುಸಿರು ಬಿಡುತ್ತಾ ನಿಂತ ಗೋಪಾಲ.

ತಿದ್ದಿ ತೀಡಿದಂತಿರುವ ಕಣ್ಣು ಮೂಗು, ಇಳಿಬಿಟ್ಟ ಕೇಶರಾಶಿ, ಕೆಂಪು ಸೀರೆಯನ್ನು ಮೊಳಕಾಲದವರೆಗೆ ಏರಿಸಿ ಬಿಗಿದು ಕೊಡಕ್ಕೆ ಹಗ್ಗ ತೊಡಿಸುತ್ತಿದ್ದಾಳೆ ಮಂಗಮ್ಮ.

ಮಂಗಮ್ಮ ಇವನನ್ನು ನೋಡಿದಳು. ಅವಳನ್ನು ಕಂಡು ಗೋಪಾಲ ವಿಕಾರವಾಗಿ ನಕ್ಕನು.

''ಒಂದು ಮಾತು'' ಎಂದ ತಡವರಿಸುತ್ತ.

ನಾಗಮಲ್ಲೆ ಅಂಬಿನಂತೆ ಹಾಗೇ ಅಲ್ಲಾಡದೇ ನಿಂತಿದ್ದಾಳೆ ಮಂಗಮ್ಮ.

''ಇಲ್ಲಿ ಯಾರೂ ಇಲ್ಲ, ಒಂದೇ ಮಾತು'' ಅಂದ ಗೋಪಾಲ. ಗೊಂಬೆಯಂತೆ ಬಾಗಿಲ ಹತ್ತಿರ ಬಂದು ನಿಂತಳು ಮಂಗಮ್ಮ. ಮಿನುಗುತ್ತಿರುವ ಮಂಗಮ್ಮನ ಕಣ್ಣುಗಳನ್ನು ನೋಡಿದನು ಗೋಪಾಲ. ಆ ಕಣ್ಣುಗಳಿಂದ ಬರುತ್ತಿರುವುದು ಅಗ್ನಿ ಕಿರಣಗಳೋ, ಕಾಮ ಕಿರಣಗಳೋ ಎಂದು ಅವನಿಗರ್ಥವಾಗಲಿಲ್ಲ.

''ಬಾ ಒಳಗೆ ಬಾ'' ಎಂದ ಗೋಪಾಲ.

''ನನಗೀಗ ಮದುವೆಯಾಗಿದೆ ನಿನಗೆ ಗೊತ್ತಾ ?'' ಎಂದಳು ಮಂಗಮ್ಮ.

''ಏಕೆ ? ಮದುವೆ ಮಾಡಿಕೊಳ್ಳೋದು ತಪ್ಪಾ ?'' ಎಂದು ಕೇಳಿದ ಗೋಪಾಲ.

''ನೀನು ಮಾಡಿದ ಕೆಲಸಕ್ಕೆ ನನ್ನನ್ಯಾರೂ ಮದುವೆ ಮಾಡಿಕೊಳ್ಳೋದಿಲ್ಲ ಎಂದು ತಿರಸ್ಕರಿಸಿದರು'' ಎಂದಳು ಮಂಗಮ್ಮ ಕಣ್ಣು ಮಿಟುಕಿಸದಂತೆ !

''ಪರವಾಗಿಲ್ಲ ಬಿಡು, ಒಂದು ಸಾರಿ ಬಾ ಒಳಗೆ'' ಎಂದ ಗೋಪಾಲ ಅವಳ ಕೆಂಪು ಸೀರೆ ಹಿಡಿದು ಎಳೆದ. ಮಂಗಮ್ಮ ಸರ್ಪದಂತೆ ಬುಸುಗುಡುವುದನ್ನು ಅವನು ಗಮನಿಸಲಿಲ್ಲ.

ಬಾಗಿಲ ಮುಂದೆ ಒಡೆದ ಕರಿಬಂಡೆಯ ತುಂಡನ್ನು ಕೈಗೆತ್ತಿಕೊಂಡ ಮಂಗಮ್ಮನ ಕೈ ಚಕ್ರಾಕಾರವಾಗಿ ತಿರುಗಿ ಗೋಪಾಲನ ನೆತ್ತಿಯ ಮೇಲೆ ಸುಳಿತಿರುಗಿ ಬಿದ್ದಿತು. ಸಣ್ಣ ದನಿಯಲ್ಲಿ ಅರಚುತ್ತಾ ಗೋಪಾಲನು ತಲೆಯನ್ನು ಎರಡೂ ಕೈಯಲ್ಲಿ ಹಿಡಿದು ಕೆಳಗೆ ಬೀಳುವ ಕಂಗಳಲ್ಲಿ ಕೆಂಪು ದೀಪ ಹೊತ್ತಿದಂತಾಗಿ, ಕೆಂಪುಸೀರೆಯ ಮಂಗಮ್ಮ, ಅವಳ ಹಿಂದೆ ಬಂಡಿರಾಮರು ದೀಪದಂತೆಯೇ ಕದಲುತ್ತಾ ಕಂಡರು.

ಕನ್ನಡಾನುವಾದ : ಗುರುಮೂರ್ತಿ ಪೆಂಡಕೂರು
ರಾಮನಗರ, ಹಗರಿಬೊಮ್ಮನಹಳ್ಳಿ - ೫೮೩ ೨೧೨ (ಬಳ್ಳಾರಿ ಜಿಲ್ಲೆ)

# ಉತ್ಪ್ರೇಕ್ಷೆ

ಉತ್ಪ್ರೇಕ್ಷೆ ಎಲ್ಲದರಲ್ಲೂ ಹಾಸುಹೊಕ್ಕಾಗಿದೆ. ದಿನನಿತ್ಯದ ನಮ್ಮ ಮಾತುಕತೆಯಲ್ಲಿಯೂ ಬೇಕಾಗಿಯೋ ಬೇಡವಾಗಿಯೋ ಅಲ್ಪ ಸ್ವಲ್ಪ ಉತ್ಪ್ರೇಕ್ಷೆ ನುಸುಳಿಯೇಬಿಟ್ಟಿರುತ್ತದೆ. ಉತ್ಪ್ರೇಕ್ಷೆ ಮಾಡಿ ಕತೆ ಹೇಳಿದಾಗಲೇ ಮಕ್ಕಳು ಊಟ ಮಾಡುತ್ತವೆ. ಉತ್ಪ್ರೇಕ್ಷೆ ಮಾಡಿ ಹೇಳಿದಾಗಲೇ ಯಜಮಾನರು ಮನೆ ಖರ್ಚಿಗೆ ಜಾಸ್ತಿ ದುಡ್ಡು ಕೊಡುತ್ತಾರೆ. ಉತ್ಪ್ರೇಕ್ಷೆ ಮಾಡಿ ರಾತ್ರಿ ರಾಯರು ತಡವಾಗಿ ಬಂದ ಕಾರಣವನ್ನು ಹೇಳಿದಾಗ ಹೆಂಡತಿ ನಂಬುತ್ತಾಳೆ.

ಹಾಗೆ ನೋಡಿದರೆ ಉತ್ಪ್ರೇಕ್ಷೆ ಮನುಷ್ಯನ ಜೊತೆಗೇ ಹುಟ್ಟಿಬರುತ್ತದೆ. ''ಮಗು ಎಷ್ಟು ಚೆನ್ನಾಗಿದೆ ಅಂತೀರಿ! ಕಣ್ಣುಗಳು ನೇರಳೆ ಹಣ್ಣಿನ ಹಾಗಿವೆ! ಮುಖ ಹುಣ್ಣಿಮೆ ಚಂದ್ರನ ಹಾಗಿದೆ! ಮೂಗು ರಾಮ ಬಾಣ ಹೂಡಿದ ಹಾಗಿದೆ! ಕೈ ಈಗಲೇ ಮಾರುದ್ದವಾಗಿದೆ'' ಎಂದು ಮಗುವಿನ ಹುಟ್ಟಿನಿಂದಲೇ ವರ್ಣನೆಯೊಂದಿಗೆ ಉತ್ಪ್ರೇಕ್ಷೆಯ ಮಾತುಗಳು ಹೊರಡುತ್ತವೆ. ಉಕ್ಕಿಬಂದ ಸಂತೋಷ ಏನೇನೋ ಉತ್ಪ್ರೇಕ್ಷೆಯ ಹೋಲಿಕೆಗಳನ್ನು ಹೊರಡಿಸುತ್ತದೆ. ಅದರಲ್ಲೇನೂ ತಪ್ಪಿಲ್ಲ ಬಿಡಿ.

ಇನ್ನು, ಒಂದು ವಸ್ತು ಖರ್ಚಾಗಬೇಕಾದರೆ, ಒಂದು ಮದುವೆ ಆಗಬೇಕೆಂದರೆ, ಒಂದು ಮನೆಯೋ ಸೈಟೋ ಮಾರಾಟವಾಗಬೇಕೆಂದರೆ ಉತ್ಪ್ರೇಕ್ಷೆ ಬೇಡವೇ? ಬೇಕೇ ಬೇಕು. ''ರೂಪದಲ್ಲಿ, ವಿದ್ಯೆಯಲ್ಲಿ, ಶ್ರೀಮಂತಿಕೆಯಲ್ಲಿ ಯಾವುದರಲ್ಲಿ ತಾನೇ ಕಡಿಮೆಯಾಗಿದೆ ಹೇಳಿ''




ಎಂದು ಮದುವೆಯ ಸಂದರ್ಭದಲ್ಲಿ ಅತ್ತ ವರನ ಬಗ್ಗೆ, ಇತ್ತ ವಧುವಿನ ಬಗ್ಗೆ ಕೂಡಿಯೇ ಉತ್ಪ್ರೇಕ್ಷೆಯ ಮಾತುಗಳು ಕೇಳಿ ಬರುತ್ತವೆ – ಮದುವೆ ಮುಗಿಯುವವರೆಗೂ! ಉತ್ಪ್ರೇಕ್ಷೆ ಮಾಡುವುದು ಮನುಷ್ಯನ ಸ್ವಭಾವ. ಯಾವುದಾದರೂ ಒಂದು ವಸ್ತು, ವಿಷಯ ನಮಗೆ ಹಿಡಿಸಿದರೆ ಅದರ ಬಗ್ಗೆ ಹೇಳುವಾಗ ನಮ್ಮ ಕೈಗಂಟನ್ನೂ ಸೇರಿಸಿ ಉತ್ಪ್ರೇಕ್ಷೆ ಮಾಡಿ ಹೇಳುತ್ತೇವೆ. ಅಷ್ಟೆಲ್ಲ ಹೇಳಿದ ಮೇಲೆ ''ಇದರಲ್ಲೇನೂ ಉತ್ಪ್ರೇಕ್ಷೆ ಇಲ್ಲ ಮತ್ತೆ '' ಎಂದು ಹೇಳುವುದನ್ನು ಮರೆಯುವುದಿಲ್ಲ.

ಬರೀ ಉಬ್ಬಿಸುವುದಕ್ಕೆ ಮಾತ್ರವಲ್ಲ, ಕುಗ್ಗಿಸುವುದಕ್ಕೂ ಉತ್ಪ್ರೇಕ್ಷೆಯ ಮೊರೆ ಹೋಗಬೇಕಾಗುತ್ತದೆ. ನಮಗೆ ಒಂದು ವಸ್ತು, ವಿಷಯ ಬೇಡವಾಯಿತೋ, ನಮ್ಮಿಂದ ಎಷ್ಟು ಸಾಧ್ಯವೋ ಅಷ್ಟು ಉತ್ಪ್ರೇಕ್ಷೆಯಿಂದ ಅವುಗಳ ಅವಗುಣವನ್ನು ಪಟ್ಟಿಮಾಡಿ ಹೇಳಿ ಅದನ್ನು ಕೊಳ್ಳದಂತೆ, ಅದು ಚಲಾವಣೆಗೆ ಬರದಂತೆ ನೋಡಿಕೊಳ್ಳುತ್ತೇವೆ.

ಹೀಗೆ ಉತ್ಪ್ರೇಕ್ಷೆ ಮಾಡಿ ಹೇಳುವುದಕ್ಕೇ 'ಉತ್ಪ್ರೇಕ್ಷಾಲಂಕಾರ' ಎನ್ನುತ್ತಾರೇನೋ! ಅಲಂಕಾರ ಚೆನ್ನಾಗಿದ್ದಷ್ಟೂ ನೋಡುವುದಕ್ಕೆ ಅಂದವಾಗಿ ಕಾಣುತ್ತದೆ. ಅಂತೆಯೇ ಉತ್ಪ್ರೇಕ್ಷೆ ಚೆನ್ನಾಗಿದ್ದಷ್ಟೂ ಮಾತು ಚೆನ್ನಾಗಿ ಕೆಲಸ ಮಾಡುತ್ತದೆ. ಹಾಗೆ ನೋಡಿದರೆ ಉತ್ಪ್ರೇಕ್ಷೆ ಮಾಡಿ ಹೇಳುವವರು ಹಾಗೆ ಹೇಳುತ್ತಿದ್ದೇವೆಂದು ತೋರಿಸಗೊಡುವುದಿಲ್ಲ. ಹಾಗೆ ಹೇಳುವುದನ್ನು ಸಹಜವಾಗಿ ಎಂಬಂತೆ ಹೇಳುತ್ತಾರೆ. ಕೇಳುವವರಿಗೆ ಅದು ಉತ್ಪ್ರೇಕ್ಷೆ ಎನಿಸಬಾರದು; ಅನಿಸಿದರೆ ಕಾರ್ಯ ಸಿದ್ಧಿಸುವುದಿಲ್ಲ ಎಂದು ಅವರಿಗೆ ಗೊತ್ತು. ಹೀಗಾಗಿ ನಯವಂತಿಕೆಯ ಮೇಲುಹೊದಿಕೆಯಲ್ಲಿ ಉತ್ಪ್ರೇಕ್ಷೆಯ ಮಾತುಗಳು ಆಪ್ಯಾಯಮಾನವಾಗಿ ತೇಲಿಬರುತ್ತವೆ.

ಹಾಗೆ ನೋಡಿದರೆ ಉತ್ಪ್ರೇಕ್ಷೆಯೂ ಅಪೇಕ್ಷಣೀಯವೇ! ಉತ್ಪ್ರೇಕ್ಷೆ ಮಾಡಿ ಹೇಳಿದರೇನೇ ಒಂದು ಮದುವೆ ಮಾಡಬಹುದು, ಉತ್ಪ್ರೇಕ್ಷೆಯ ಮಾತಿಗೆ ಮರುಳಾಗಿಯೇ ನಾವು ಓಟು ಕೊಡುವುದು, ಉತ್ಪ್ರೇಕ್ಷೆ ಮಾಡಿ ಹೇಳಿದರೇನೇ ಒಂದು ಕೆಟ್ಟ ಸಿನಿಮಾ ನೂರು ದಿನ ಓಡುವುದು, ಉತ್ಪ್ರೇಕ್ಷೆ ಮಾಡಿ ವರ್ಣಿಸಿದರೇನೇ ನಾವು ಆ ದೂರದ ಕಾಡಿನಂತಹ ಬಡಾವಣೆಯಲ್ಲಿ ಸೈಟ್ ಕೊಳ್ಳುವುದು! ನಾವು ಮೋಸ ಹೋದದ್ದು ಗೊತ್ತಾದರೂ ಏನೂ ಮಾಡಲಾಗುವುದಿಲ್ಲ. ಶೇಕಡ ಇಂತಿಷ್ಟು ಪ್ರತಿಶತ ಮೋಸಹೋದರೂ ಉಳಿದ ಪ್ರತಿಶತವಾದರೂ ಲಾಭವಾಗಿದೆ ಎಂದು ಗುಣಾಕಾರ-ಭಾಗಾಕಾರ ಹಾಕಿ ನಮಗೆ ನಾವೇ ಸಮಾಧಾನಪಟ್ಟುಕೊಳ್ಳಬೇಕಷ್ಟೆ. ಕ್ರಮೇಣ ಈ ಪ್ರತಿಶತ ಲಾಭದ ಪ್ರಮಾಣ ಕಡಿಮೆಯಾಗುತ್ತ ಬರುತ್ತದೆ, ಈ ಮಾತು ಬೇರೆ!

ಜೀವನದ ಹಲವು ಪ್ರಸಂಗಗಳಲ್ಲಿ ಉತ್ಪ್ರೇಕ್ಷೆಯಿಂದ ಕೂಡಿದ್ದರೂ ಒಂದು ಮಾತು ಅಥವಾ ವರ್ಣನೆ ಹಿತವೆನಿಸುತ್ತದೆ. ಇದು ಸುಳ್ಳು ಎಂದು ಮನಸ್ಸು ಮುದುಡುವುದಿಲ್ಲ. ಹಾಂ, ಉತ್ಪ್ರೇಕ್ಷೆಗೂ ಸುಳ್ಳಿಗೂ ವ್ಯತ್ಯಾಸವಿದೆ. ಸುಳ್ಳಿನ ಹಿಂದೆ ಸದುದ್ದೇಶ ಕಡಿಮೆ. ಉತ್ಪ್ರೇಕ್ಷೆಯ ಹಿಂದೆ ಸದುದ್ದೇಶವೇ ಜಾಸ್ತಿ. ಸಾರಿಗೆ ಒಗ್ಗರಣೆ ಹೇಗೋ, ರಾಜಕಾರಣಿಗೆ ಟೋಪಿ ಹೇಗೋ, ಮೂಗಿಗೆ ಮೂಗುತಿ ಹೇಗೋ ಹಾಗೆ ನಾವಾಡುವ ಮಾತಿಗೆ ಉತ್ಪ್ರೇಕ್ಷೆಯೇ ಭೂಷಣ!

ಕವಿಗಳ ಕಲ್ಪನೆ ಯಾವಾಗಲೂ ಉತ್ಪ್ರೇಕ್ಷೆಯಿಂದಲೇ ಕೂಡಿರುತ್ತದೆ. ಹೆಣ್ಣಿನ ಬಗೆಗಿನ ಅವರ ವರ್ಣನೆಗಳನ್ನಂತೂ ಉತ್ಪ್ರೇಕ್ಷೆಗಳಲ್ಲಿ ಅದ್ದಿ ತೆಗೆದಿರುತ್ತಾರೆ. ಆದರೂ ಆ ವರ್ಣನೆ ಎಲ್ಲರಿಗೂ ಪ್ರಿಯವೆನಿಸುತ್ತದೆ. ಉತ್ಪ್ರೇಕ್ಷೆಮಾಡಿ ಹೇಳುವಾಗ ಹೊರಡುವ ಧ್ವನಿಯೂ ಬೇರೆ. ಆ ಲಯ, ಹಾವ, ಭಾವಗಳೇ ವಿಶಿಷ್ಟ. ವಿಶೇಷವಾದದ್ದನ್ನು ಹೇಳುವಾಗಿನ ಕಾಳಜಿ ಅಲ್ಲಿರುತ್ತದೆ. ಹೀಗಾಗಿ ಜೀವನದ ಎಲ್ಲ ಹಂತಗಳಲ್ಲೂ ಉತ್ಪ್ರೇಕ್ಷೆಯ ಮಾತು ಬೇಕು. ಅದಿಲ್ಲದೆ ಮಾತಿಗೆ ಹೊಳಪು ಬರುವುದಿಲ್ಲ.

ನಾವು ಹೋಗಬೇಕಾದ ಸ್ಥಳ ಬಹಳ ದೂರದಲ್ಲಿದೆ ಎಂದು ಹೇಳಿದಾಗ ಅಲ್ಲಿಗೆ ಹೋಗಲು ಎಲ್ಲರಿಗೂ ಬೇಸರ. ಆ ಸ್ಥಳ ಇಲ್ಲೇ ಹತ್ತಿರದಲ್ಲಿದೆ ಎಂದರೆ ಹೊರಡಲು ಎಲ್ಲರೂ ತಯಾರಾಗುತ್ತಾರೆ. ''ಇಷ್ಟು ಹತ್ತಿರದ ಸ್ಥಳಕ್ಕೆ ಆಟೋ ಯಾಕೆ ಬೇಕು ?'' ಎಂದು ಹೇಳಿ ಐದು ಕಿಲೋಮೀಟರ್ ದೂರದ ಸ್ನೇಹಿತರ ಮನೆಯನ್ನು ಮಾತನಾಡುತ್ತಲೇ ಹೋಗಿ ಸೇರಿಬಿಡುತ್ತಾರೆ. ''ಇಲ್ಲೇ ಹತ್ತಿರದಲ್ಲಿದೆ'' ಎಂದು ಉತ್ಪ್ರೇಕ್ಷೆ ಮಾಡಿ ಹೇಳಿದ್ದರೂ ತಲುಪಬೇಕಾದ ಸ್ಥಳ ತಲುಪಿಯಾದಮೇಲೆ ಸಂತೋಷಪಡುತ್ತಾರೆ.

ಉತ್ಪ್ರೇಕ್ಷೆಯಿಂದ ಕೂಡಿದ ಹೊಗಳಿಕೆಯಿಂದ ಎಂಥಾ ಕೆಲಸವೂ ಆಗಬಲ್ಲದು. ಉದಾಹರಣೆಗೆ, ಶಲ್ಯ ಮಹಾರಾಜನನ್ನು ನೀನು ವಾಸುದೇವನಿಗೆ ಸಮ ಎಂದು ಉತ್ಪ್ರೇಕ್ಷೆ ಮಾಡಿ ಹೊಗಳಿದ ದುರ್ಯೋಧನ ಅವನನ್ನು ತನ್ನ ಪಾಳೆಯಕ್ಕೆ ಸೇರಿಸಿಕೊಂಡ ಪ್ರಸಂಗ ಮಹಾಭಾರತದ ಕುರುಕ್ಷೇತ್ರದಲ್ಲಿ ಬರುತ್ತದೆ. ಇಲ್ಲದಿದ್ದರೆ ಶಲ್ಯ ಸೀದಾ ತನ್ನ ದಾರಿ ಹಿಡಿದು ಪಾಂಡವರ ಪಕ್ಷ ಸೇರುತ್ತಿದ್ದ.

ಕಾಲವೇ ಹಾಗಿದೆ. ಯಾವುದನ್ನೇ ಆಗಲಿ, ಉತ್ಪ್ರೇಕ್ಷೆ ಮಾಡಿ ಹೇಳಿದರೇನೇ ಜನ ನಂಬುವುದು! ಜಾಹಿರಾತುಗಳ ಕೆಲಸ ಇನ್ನೇನಂತೀರಿ? ಅವು ಉತ್ಪ್ರೇಕ್ಷೆ ಮಾಡಿ ತಮ್ಮ ವಸ್ತುಗಳನ್ನು ಹಾಡಿ ಹೊಗಳುತ್ತವೆ! ಜನ ಮುಗಿಬಿದ್ದು ಅವುಗಳನ್ನು ಕೊಳ್ಳುತ್ತಾರೆ! ಇದೇ ಉತ್ಪ್ರೇಕ್ಷೆಯ ಮಹಿಮೆ!

**ಪ್ರಾಣೇಶ ಗುಡಿ**
ಪೋಸ್ಟ್‌ಮಾಸ್ಟರ್ ಜನರಲ್ ಅವರ ಕಚೇರಿ, ಉತ್ತರ ಕರ್ನಾಟಕ ಕ್ಷೇತ್ರ
ಧಾರವಾಡ - ೫೮೦೦೦೧

# ಕನ್ನಡಂ ಕತ್ತುರಿಯಲ್ತೆ

**ಅಂಬಳೆ ನಟರಾಜ**

ಕಳೆದ ಬೇಸಿಗೆಯಲ್ಲಿ ನಾನು ಬೆಂಗಳೂರಿನಲ್ಲಿ ಓಡಾಡುತ್ತಿದ್ದಾಗ ದಾರಿ ಕೇಳುತ್ತಾ ಸಿಕ್ಕಿದ ಯಾರೋ ಆಸಾಮಿಗೆ ಒಂದು ಚೂರೂ ಕನ್ನಡ ಬರುತ್ತಿರಲಿಲ್ಲ. ಅಯ್ಯೋ ಪಾಪ ಪ್ರವಾಸಿಯಿರಬೇಕು ಎಂದುಕೊಂಡು ಮಾತಾಡಿಸಿದೆ. ಬೆಂಗಳೂರಿಗೆ ವಲಸೆ ಬಂದು ಎರಡು ವರ್ಷವಾಯಿತು ಎಂದು ಹೇಳಿದ. ಹೀಗೆ ಕುದುರಿದ ಸಂಭಾಷಣೆಯಲ್ಲಿ ಮಾತಿಗೆ ಮಾತು ಬೆಳೆಯುತ್ತಾ ಕೊನೆಗೆ ನನಗೇ ಅವನು ''ನೀನೇಕೆ ಮಾರವಾಡಿ ಭಾಷೆ ಮಾತಾಡಲ್ಲ'' ಎಂದು (ಹಿಂದಿಯಲ್ಲಿ) ಕುಚೋದಿಸಿದಾಗ ನಾನು ಅವಾಕ್ಕಾದೆ. ''ಎಲಾ ಇವನ, ನಮ್ಮ ಊರಿಗೇ ಬಂದು ಈ ತರಹ ಮಾತಾಡ್ತಾನಲ್ಲ. ಎಷ್ಟು ಪೊಗರು ಇವನಿಗೆ'' ಎಂದು ಅಚ್ಚರಿಯಾಯಿತು. ಹೀಗೆ ಅನೇಕ ಅನುಭವಗಳಾದ ಮೇಲೆ ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನಲ್ಲಿ ಕನ್ನಡದ ದುಃಸ್ಥಿತಿ ಹೇಗಿದೆಯೆಂದು ಚೆನ್ನಾಗಿ ಮನವರಿಕೆಯಾಯಿತು.

ನಾನು ಹೇಳುತ್ತಿರುವುದು ಹೊಸ ವಿಷಯವೇನಲ್ಲ ಬಿಡಿ; ನಿಮಗೆಲ್ಲ ಇದು ಚೆನ್ನಾಗಿ ಗೊತ್ತಿರುವುದೇ. ಸುಮಾರು ೫೦-೬೦ ವರ್ಷದಿಂದ ಕನ್ನಡದ ಪ್ರಾಮುಖ್ಯತೆ ಸರ್ಕಾರದಲ್ಲಿ, ನಡೆನುಡಿಯಲ್ಲಿ, ವಿದ್ಯಾಭ್ಯಾಸದಲ್ಲಿ ಹಾಗೂ ಸಮಾಜದಲ್ಲಿ ಕಡಿಮೆಯಾಗುತ್ತಲೇ ಇದೆ. ಆದರೆ ನನ್ನ ಅನಿಸಿಕೆಯ ಪ್ರಕಾರ ಇತ್ತೀಚಿನ ೨೦ ವರ್ಷಗಳಿಂದ ಅಂದರೆ ಸುಮಾರು ಒಂದು ತಲೆಮಾರಿನಲ್ಲಿಯೇ ಕನ್ನಡ ಭಾಷೆಯ ಬಳಕೆ ಬಹಳವೇ ಕ್ಷೀಣಿಸಿದೆ. ಕನ್ನಡವೇ ನಮ್ಮ ಮಾತೃಭಾಷೆ ಎಂದು ಹೇಳಿಕೊಳ್ಳುವ ಮಧ್ಯಮದರ್ಜೆಯ ಕುಟುಂಬಗಳಲ್ಲಿ ಎಷ್ಟೋ ಮಕ್ಕಳಿಗೆ ಕನ್ನಡ ಓದಲು ಬರೆಯಲು ಬರುವುದಿಲ್ಲ. ಅಷ್ಟೇ ಅಲ್ಲ, ಸ್ಥಿತಿ ಹಾಗಿದೆ ಎಂದು ಅವರ ತಂದೆ ತಾಯಿಯರಿಗೆ ಬೇಜಾರೇನಿಲ್ಲ. ಯಾವ ವಯಸ್ಸಿನವರೇ ಆಗಲಿ ಸಂಪೂರ್ಣ ಕನ್ನಡದಲ್ಲಿ ಎರಡು ನಿಮಿಷ ಮಾತನಾಡಲು ಶಕ್ಯರಾದವರು ಸಿಕ್ಕರೆ ಅಪರೂಪ ಎಂದೇ ಹೇಳಬೇಕು. ಮುಂಚೆ ಇಂಗ್ಲಿಷ್ ಸೇರಿಸಿ ಮಾತಾಡಿದರೆ ಕಂಗ್ಲಿಷ್ ಎನ್ನುತ್ತಿದ್ದರು. ಈಗ ಯಾರಾದರೂ ಮಾತಾಡುತ್ತಿದ್ದರೆ ಅವರ ವಾಕ್ಯದಲ್ಲಿ ಇಂಗ್ಲಿಷ್ ಮಧ್ಯೆ ಅಲ್ಲಿ ಇಲ್ಲಿ ಒಂದೊಂದು ಕನ್ನಡ ಪದ ಇದ್ದರೆ ಅದನ್ನೇ ಕನ್ನಡದ ಮಾತು ಎನ್ನುವ ಸ್ಥಿತಿ ಬಂದಿದೆ. 'ಸ್ವಾಮಿ' ಹೋಗಿ 'ಸಾರ್', 'ಅಮ್ಮಾವ್ರು' ಬದಲು 'ಅಂಟಿ' ಎಲ್ಲರ ಬಾಯಲ್ಲಿ ಓಡಾಡುತ್ತಿದೆ. ಅಷ್ಟೇಕೆ, ಪ್ರತಿ ಮಗುವಿನ ಅಚ್ಚುಮೆಚ್ಚಿನ ಪದವಾದ 'ಅಮ್ಮ' ಕೂಡ 'ಮಮ್ಮಿ'ಯಿಂದ ಹೊಡೆತ ತಿನ್ನಲಾರಂಭಿಸಿದೆ. ಯಾರೋ ಸಾಹಿತಿಗಳು ಮೊನ್ನೆ ಹೇಳಿದಹಾಗೆ ನಮ್ಮ ಊರಿನ ತಾಯಂದಿರೆಲ್ಲ ಯಾವಾಗಲೋ ಈಜಿಪ್ತಿನ ಪ್ರಾಚೀನ ಶವಗಳಾಗಿ ಬಿಟ್ಟಿದ್ದಾರೆ!

ಜನಪ್ರಿಯ ಸಂಸ್ಕೃತಿಗಳ ವಿಷಯ ಕೇಳಲೇ ಬೇಡಿ. ದೂರದರ್ಶನದ ಕಾರ್ಯಕ್ರಮಗಳಲ್ಲಿ ಹೊಸ ಚಲನಚಿತ್ರಗಳಲ್ಲಿ ಇಂಗ್ಲಿಷ್ ಮತ್ತು ಹಿಂದಿ ಎಷ್ಟು ನುಸುಳಿಬಂದಿವೆ ಎಂದು ಗಮನಿಸಿ ನೋಡಿ. ಟೀವಿ ಹಾಳಾಗಿ ಹೋಗಲಿ - ಅದೇನು ನಮ್ಮ ಸಂಸ್ಕೃತಿಯೇ ಎಂದು ಮೂಗೆಳೆಯ ಬಹುದು ನೀವು. ಆದರೆ ಅಜ್ಜಿಯರಿಂದ ಚಿಕ್ಕ ಮಕ್ಕಳವರಿಗೆ ಸರ್ವಜನರಿಗೂ ಅಂಟಿಕೊಂಡಿರುವ ಟೀವಿ-ಹವ್ಯಾಸ ಸಾಕಷ್ಟು ಪರಿಣಾಮ ಬೀರುವುದು ಖಂಡಿತ. ದಿನಕ್ಕೆ ೩-೪ ಘಂಟೆ ಟೀವಿ ನೋಡುವಾಗ ಅದರಲ್ಲಿ ಬರುವ ಕಲಸುಮೇಲೋಗರದ ಭಾಷೆ ವೀಕ್ಷಕರಿಗೆ ಅಂಟದಿದ್ದರೆ ಅದೊಂದು ಆಶ್ಚರ್ಯಕರ ಸಂಗತಿಯೇ ಆಗುತ್ತದೆ.

> ಕನ್ನಡದ ಪರವಾಗಿ ಹೇಳಲೇಬೇಕಾದ ಒಂದು ಮುಖ್ಯ ವಿಷಯವೆಂದರೆ ಕನ್ನಡ ಸಾಹಿತ್ಯ ಬಹಳ ಉನ್ನತ ಮಟ್ಟಕ್ಕೇರಿರುವುದು. ಭಾರತದ ಮಿಕ್ಕೆಲ್ಲ ಭಾಷೆಗಳಿಗಿಂತ ಹೆಚ್ಚು ಜ್ಞಾನಪೀಠ ಪ್ರಶಸ್ತಿಗಳನ್ನು ಗಳಿಸಿರುವ ಸಂಪತ್ತು ನಮ್ಮ ಭಾಷೆಯಲ್ಲಿದೆ. ನನಗನ್ನಿಸುವುದು ಇದಕ್ಕೆ ಒಂದು ಮುಖ್ಯ ಕಾರಣ ಕನ್ನಡಿಗರ ಉದಾರ ಮನಸ್ಸು, ಎಲ್ಲರನ್ನೂ ಸ್ವಾಗತಿಸುವ, ಅತಿಥಿ ಸತ್ಕಾರ ಮಾಡುವ ಮನೋಭಾವ. ಹೀಗಾಗಿ ಕನ್ನಡದ ಸಾಹಿತ್ಯ ಪರಂಪರೆಯನ್ನು ಪರಿಶೀಲಿಸಿದಾಗ ಕಾಣುವ ಅತ್ಯುನ್ನತ ಮಟ್ಟದ ಕೊಡುಗೆ ಕೊಟ್ಟ ಅನೇಕ ಸಾಹಿತಿಗಳ ಮಾತೃಭಾಷೆ ಕನ್ನಡವಲ್ಲ. ಈ ವಿಶಾಲ ಮನೋಭಾವ ಕರ್ನಾಟಕದ ಜನ ಬಿಡಬಾರದು; ಕರ್ನಾಟಕದಲ್ಲಿ ನೆಲೆಸಲು ಬಂದ ವಿವಿಧ ಜನಾಂಗಗಳಿಂದ, ಅವರ ಭಾಗವಹಿಸುವಿಕೆಯಿಂದ, ವಿಭಿನ್ನವಾದ ಅವರದೇ ಆದ ಅನಿಸಿಕೆಗಳಿಂದ ಮತ್ತು ಅನುಭವಗಳಿಂದ ನಮ್ಮ ಭಾಷೆಯ ಸಾಹಿತ್ಯ-ಕವನ ಸಂಪತ್ತು ಇನ್ನೂ ಚೆನ್ನಾಗಿ ಬೆಳೆಯುತ್ತದೆ, ಕನ್ನಡದ ಭವಿಷ್ಯ ಉತ್ತಮವಾಗಿರುತ್ತದೆ.

ಈ ಪ್ರಬಂಧವನ್ನು ಓದುತ್ತಾ ನಿಮ್ಮ ಮನಸಿನಲ್ಲಿ ಎರಡು ಮೂರು ಸೂಚನೆಗಳು ಓಡುತ್ತಿರಬಹುದು. ಒಂದು, ಇವನ್ಯಾರಯ್ಯ ಕನ್ನಡ ಫಂಡಮೆಂಟಲಿಸ್ಟ್, ನಟರಾಜನೋ ಅಥವಾ (ವಾಟಾಳ್) ನಾಗರಾಜನೋ ಎಂದು. ನನಗೂ ಶ್ರೀ ವಾಟಾಳರಿಗೂ ಏನೂ ಸಂಬಂಧವಿಲ್ಲದಿದ್ದರೂ ಕನ್ನಡದ ಉಳಿಕೆಗೆ ಆಂದೋಳನ ಮಾಡುತ್ತಿರುವ ಅಂತಹ ವ್ಯಕ್ತಿಗಳ ಅವಶ್ಯಕತೆ ಇದೆಯೇನೋ ಅನ್ನಿಸುತ್ತಿದೆ ಈಚೀಚೆಗೆ. ಇನ್ನೊಂದು – ನಿಮಗೆ ನಾನು ಬಣ್ಣಿಸಿದಷ್ಟು ಸ್ಥಿತಿ ಕೆಟ್ಟಿಲ್ಲ, ಬಹಳ ಅತಿಶಯದ ಮಾತು ಆಡುತ್ತಿದ್ದೇನೆ ಅನ್ನಿಸಬಹುದು. ಅದನ್ನು ನಾನು ಸ್ವಲ್ಪ ಮಟ್ಟಿಗೆ ಒಪ್ಪಿಕೊಳ್ಳುತ್ತೇನೆ. ಕರ್ನಾಟಕದ ಹಳ್ಳಿಗಳಲ್ಲಿ ಮತ್ತು ಚಿಕ್ಕ ಊರುಗಳಲ್ಲಿ ಪ್ರಾಯಶಃ ನಾನು ಹೇಳುವಷ್ಟು ಕೆಟ್ಟ ಪರಿಸ್ಥಿತಿ ಇಲ್ಲದಿರ ಬಹುದು, ಆದರೆ ಬೆಂಗಳೂರಿನ ಈ ವಿಷ ಎಲ್ಲಾ ಕಡೆ ಹರಡುವ ಮುನ್ನವೇ ಈ ಸಮಸ್ಯೆಯ ಕಡೆಗೆ ಗಮನಕೊಡುವುದು ಒಳ್ಳೆಯದು ತಾನೆ? ಅಲ್ಲದೆ ಬೆಂಗಳೂರಿನಲ್ಲಿ ಹುಟ್ಟುವ ದೂರದರ್ಶನದ ಕಾರ್ಯಕ್ರಮಗಳು ಕರ್ನಾಟಕದ ಮೂಲೆ ಮೂಲೆಗೂ ಹಬ್ಬುವುದು ಮಿಂಚಿನ ವೇಗದಲ್ಲಿ ಅಲ್ಲವೇ?

ಮೊದಲು ಕನ್ನಡ ಭಾಷೆ, ಉಳಿಸಿಕೊಳ್ಳಬೇಕಾದ ವಸ್ತುವೇ ಎಂದು ಪರಿಶೀಲಿಸೋಣ. ಪ್ರೋಟೋ-ದ್ರವಿಡಿಯನ್ ಎಂಬ ಮೂಲದಿಂದ ಉತ್ಪತ್ತಿಯಾದ ಕನ್ನಡ ಭಾಷೆ ಎಷ್ಟು ಹಳೆಯದು ಎಂದು ಇನ್ನೂ ಸರಿಯಾಗಿ ಸಾಬೀತು ಪಡಿಸಲಾಗಿಲ್ಲ. ೭,೦೦೦ ವರ್ಷದ ಹಿಂದಿನ ಇಂಡಸ್ ಕಣಿವೆಯ ಸಂಸ್ಕೃತಿ (ಹರಪ್ಪ ಮತ್ತು ಮೊಹೆಂಜೊದಾರೊ) ಪ್ರಾಯಶಃ ದ್ರಾವಿಡ ಸಂಸ್ಕೃತಿಯಾಗಿತ್ತು ಎಂದು ವಿದ್ವಾಂಸರು ಹೇಳುತ್ತಾರೆ. ದ್ರಾವಿಡದ ಮಗುವಾದ ಕನ್ನಡಭಾಷೆ ಅಷ್ಟು ಹಳೆಯದೆಂದು ಹೇಳಲಾಗುವುದಿಲ್ಲ. ಮೊಟ್ಟಮೊದಲ ಲಿಖಿತ ದಾಖಲೆಯನುಸಾರವಾಗಿ ಹೇಳುವುದಾದರೆ ನಮ್ಮ ಭಾಷೆಯ ವಯಸ್ಸು ಕನಿಷ್ಠ ೧,೮೦೦–೨,೦೦೦ವರ್ಷ. ಪಾಶ್ಚಾತ್ಯ ಭಾಷೆಗಳಿಗೆ ಹೋಲಿಸಿದರೆ ಸುಮಾರು ಆಂಗ್ಲ ಭಾಷೆಯಷ್ಟು ವಯಸ್ಸು ಎನ್ನಬಹುದು. ಭಾರತದ ಹಿಂದಿ, ಬಂಗಾಳಿ, ಮರಾಠಿ ಮತ್ತಿತರವು ಬಹಳ ಇತ್ತೀಚಿನವು. ಆದರೆ ಕನ್ನಡಿಗರ ಅಲಸಿಕೆಯಿಂದ ಹಾ[illegible] ಕರ್ನಾಟಕದ ರಾಜಕಾರಣಿಗಳ ನಪುಂಸಕತೆಯಿಂದ ಶಾಸ್ತ್ರೀಯ ಭಾಷೆ ಎನ್ನುವ ಪದವಿ ಸಮಕಾಲೀನವಾದ ಸಂಬಂಧಿಭಾಷೆ ತಮಿಳಿಗೆ ಸಿಕ್ಕರೂ ಕನ್ನಡಕ್ಕೆ ಎಟುಕದ ಫಲವಾಗಿದೆ. ಅದೇನೇ ಇರಲಿ ನಾನು ಹೇಳುತ್ತಿರುವುದೇನೆಂದರೆ ಕನ್ನಡವು ಪ್ರಾಚೀನ ಕಾಲದಿಂದ ಬೆಳೆದುಕೊಂಡು ಬಂದಿರುವ ಒಂದು ಬೃಹತ್ತಾದ ಭಾಷಾವೃಕ್ಷ. ▫

ವ್ಯಕ್ತಿದೊಳಗೆ ನಿಕಟವಾಗಿ ಸೇರಿಕೊಂಡಿರುವ ವಸ್ತುಗಳು ಕನ್ನಡಿಗರ ಸಾಹಿತ್ಯವಷ್ಟೇ ಅಲ್ಲ; ನಮ್ಮ ಇತಿಹಾಸ, ಜೀವನ ಚರಿತ್ರೆ, ಸಂಗೀತ, ಕಲೆ, ಅಡಿಗೆ, ನಗೆ, ನೋವು, ಧರ್ಮ, ತತ್ವಶಾಸ್ತ್ರ ಮತ್ತು ಜೀವನಸೂಕ್ತಿಗಳು ಕೂಡ ಸೇರಿಕೊಂಡಿವೆ. ಕನ್ನಡನಾಡಿನ ಸಂಸ್ಕೃತಿಯಿಂದ ಕನ್ನಡ ಭಾಷೆಯನ್ನು ಸುಲಭವಾಗಿ ಬೇರ್ಪಡಿಸಲು ಯತ್ನಿಸುವುದು ಮೂರ್ಖತನ. ''ನಾನು ಪುರಂದರದಾಸರ ಪದ ಹಾಡುತ್ತೇನೆ, ಉಚ್ಚಾರಣೆಯಲ್ಲಿ ಏನು ತಪ್ಪಾದರೇನು, ಅದರ ಅರ್ಥ ಏನಾದರೂ ಇರಲಿ, ನನಗೇನಂತೆ ಅಂದರೆ ಸರಿಯೇ? "ದಿಸ್ ಸಾರು ಈಜ಼್ ಟೂ ಖಾರ" ಎಂದು ಅಡಿಗೆ ವಿಷಯ ಮಾತಾಡುವುದು ಸರಿಯೆನಿಸುತ್ತದೆಯೆ? ಆದ್ದರಿಂದ ಕನ್ನಡದ ಭಾಷೆಯ ಮೂಲಕ ವ್ಯಕ್ತ ಪಡಿಸುತ್ತಿರುವ ಕನ್ನಡ ಸಂಸ್ಕೃತಿಯ ಮಿಕ್ಕ ಅಂಗಗಳು ಬೇಕು, ಭಾಷೆ ಏನೂ ಬೇಕಾಗಿಲ್ಲ ಎನ್ನುವುದು ತಪ್ಪು ಎಂದು ಒಪ್ಪಿಕೊಳ್ಳುತ್ತೀರಾ ತಾನೆ?

ಕನ್ನಡದ ಪರವಾಗಿ ಹೇಳಲೇಬೇಕಾದ ಒಂದು ಮುಖ್ಯ ವಿಷಯವೆಂದರೆ ಕನ್ನಡ ಸಾಹಿತ್ಯ ಬಹಳ ಉನ್ನತ ಮಟ್ಟಕ್ಕೇರಿರುವುದು. ಭಾರತದ ಮಿಕ್ಕೆಲ್ಲ ಭಾಷೆಗಳಿಗಿಂತ ಹೆಚ್ಚು ಜ್ಞಾನಪೀಠ ಪ್ರಶಸ್ತಿಗಳನ್ನು ಗಳಿಸಿರುವ ಸಂಪತ್ತು ನಮ್ಮ ಭಾಷೆಯಲ್ಲಿದೆ. ನನಗನ್ನಿಸುವುದು ಇದಕ್ಕೆ ಒಂದು ಮುಖ್ಯ ಕಾರಣ ಕನ್ನಡಿಗರ ಉದಾರ ಮನಸ್ಸು, ಎಲ್ಲರನ್ನೂ ಸ್ವಾಗತಿಸುವ ಅತಿಥಿ ಸತ್ಕಾರ ಮಾಡುವ ಮನೋಭಾವ. ಹೀಗಾಗಿ ಕನ್ನಡದ ಸಾಹಿತ್ಯ ಪರಂಪರೆಯನ್ನು ಪರಿಶೀಲಿಸಿದಾಗ ಕಾಣುವ ಅತ್ಯುನ್ನತ ಮಟ್ಟದ ಕೊಡುಗೆ ಕೊಟ್ಟ ಅನೇಕ ಸಾಹಿತಿಗಳ ಮಾತೃಭಾಷೆ ಕನ್ನಡವಲ್ಲ. ಈ ವಿಶಾಲ ಮನೋಭಾವ ಕರ್ನಾಟಕದ ಜನ ಬಿಡಬಾರದು; ಕರ್ನಾಟಕದಲ್ಲಿ ನೆಲೆಸಲು ಬಂದ ವಿವಿಧ ಜನಾಂಗಗಳಿಂದ, ಅವರ ಭಾಗವಹಿಸುವಿಕೆ ಯಿಂದ, ವಿಭಿನ್ನವಾದ ಅವರದೇ ಆದ ಅನಿಸಿಕೆಗಳಿಂದ ಮತ್ತು ಅನುಭವಗಳಿಂದ ನಮ್ಮ ಭಾಷೆಯ ಸಾಹಿತ್ಯ-ಕವನ ಸಂಪತ್ತು ಇನ್ನೂ ಚೆನ್ನಾಗಿ ಬೆಳೆಯುತ್ತದೆ, ಕನ್ನಡದ ಭವಿಷ್ಯ ಉತ್ತಮವಾಗಿರುತ್ತದೆ. ಆಂಗ್ಲ ಭಾಷೆಯನ್ನೆ ತೆಗೆದುಕೊಳ್ಳಿ. ಕಳೆದ ೧೦-೨೦ ವರ್ಷಗಳಲ್ಲಿ ಭಾರತದ (ಅಥವಾ ಹೊರನಾಡ ಭಾರತೀಯರ) ಎಷ್ಟೋ ಸಾಹಿತಿಗಳು ಮ್ಯಾನ್ ಬುಕರ್ ಪ್ರೈಜ಼್ ತರಹದ ಪ್ರಶಸ್ತಿಗಳನ್ನು ಗೆದ್ದಿದ್ದಾರೆ. ಈಗ ಭಾರತದಲ್ಲಿಯೇ ಆಂಗ್ಲಭಾಷಾಪ್ರವೀಣರ ಗಣಸಂಖ್ಯೆ ಇಂಗ್ಲೆಂಡಿನ ಜನಸಂಖ್ಯೆಗಿಂತ ಅಧಿಕವಾಗಿರುವಾಗ ಆಂಗ್ಲ ಭಾಷೆ ಆಂಗ್ಲರ ಸೊತ್ತೆಂದೇ ಹೇಳುವುದಕ್ಕಾಗುವುದಿಲ್ಲ. ಈ ಆಂಗ್ಲ ಸಂಸ್ಕೃತಿಗೆ ''ಪರಕೀಯ''ರಾದವರ ವಿಭಿನ್ನವಾದ ಸ್ವಂತ ದೃಷ್ಟಿಕೋಣಗಳು ಆಂಗ್ಲಭಾಷೆಗೆ ಇನ್ನೂ ವೈವಿಧ್ಯತೆಯನ್ನು ಕೊಟ್ಟು ಶ್ರೀಮಂತಗೊಳಿಸಿವೆ. ಪ್ರಪಂಚದಾದ್ಯಂತ ಬಹುತೇಕ ಜನ ಮಾತಾಡುವ ಇಂಗ್ಲಿಷಿಗೂ ಒಂದು ಪುಟ್ಟ ಪ್ರಾಂತ್ಯದಲ್ಲಿ ಉಳಿದುಕೊಂಡಿರುವ ಕನ್ನಡಕ್ಕೂ ಸುಲಭವಾಗಿ ಹೋಲಿಸಲಾಗ ದಿದ್ದರೂ ಕನ್ನಡದ ಉಳಿವಿಗೆ, ಉನ್ನತಿಗೆ ಇದು ಒಳ್ಳೆಯ ಮಾದರಿ ಅನ್ನಿಸುತ್ತೆ.

''ನಮ್ಮ ಭಾಷೆ ನಮ್ಮ ಭಾಷೆ'' ಎಂಬ ಸಂಕುಚಿತ ಮಾತನ್ನು ಬಿಟ್ಟು ಸ್ವಲ್ಪ ವಿಶಾಲ



## ಕಲ್ಯಾಣ ಮಂಟಪದಲ್ಲಿ...

ಮದುವೆ ಮನೆಯಲ್ಲಿ
ಜರಿಸೀರೆ ಉಟ್ಟು
ಬಂಗಾರ ತೊಟ್ಟು
ವ್ಯಾನಿಟಿಬ್ಯಾಗ್ ಹಿಡಿದು
ಪರ್ಮನೆಂಟ್ ನಗೆ ಸೂಸುತ್ತಾ
ಓಡಾಡುವುದೆಂದರೆ
ಕಮರ್ಷಿಯಲ್ ಫಿಲ್ಮ್‌ನಲ್ಲಿ
ಬೀಗಿತ್ತಿಯ ಪಾತ್ರ ಮಾಡಿದಂತೆ!

ವಧುವಿಗೆ ಏನೇನು ಒಡವೆ?
ವರನಿಗೆ ಕೊಟ್ಟದ್ದು ಏನೇನು?
ವರದಕ್ಷಿಣೆ ಎಷ್ಟಾಯ್ತಂತೆ?
ವಧುವಿಗೆ ಎಷ್ಟು ಸೀರೆಗಳು?
ಒಂದೊಂದು ಸೀರೆಗೆ ಎಷ್ಟೆಷ್ಟು?
ಯಾರ್‍ಯಾರಿಗೆ ಏನೇನು ಉಡುಗೊರೆ?
ಊಟಕ್ಕೆ ಎಷ್ಟು ಬಗೆ ಸಿಹಿ?

ಬನ್ನಿ ಬನ್ನಿ ಬಾಯಾರಿಕೆಗೆ ಕೊಡಲೇ?
ಊಟ ಮಾಡಿಯೇ ಹೋಗಬೇಕು
ಹೋಮ ಹವನ ಮಂತ್ರ ತಂತ್ರ
ದಕ್ಷಿಣೆಗಾಗಿ ಪುರೋಹಿತರ ಪ್ರವರ
ಯಜ್ಞಕುಂಡದಿಂದ ಹೊರಟ ಹೊಗೆ
ವಧೂವರರ ಕಣ್ಣಲ್ಲಿ ನೀರು-ಧಗೆ
ಚಿಗುರುತ್ತಿದೆ ಪ್ರಸ್ತದ ಕನಸು
ಶಾಸ್ತ್ರದಲಿ ಅರೆಬರೆ ಮನಸು

ಬದುಕಿಡೀ ಕಷ್ಟಪಟ್ಟು ದುಡಿದದ್ದು
ಒಂದೇ ದಿನದಲ್ಲಿ ಭಸ್ಮವಾಯಿತಲ್ಲ!
ವಾಲಗ-ಡೋಲು-ನಗಾರಿ
ಮನಸ್ಸು ಆಯಿತು ಪರಾರಿ
ಮನಹೀನ ದೇಹಕ್ಕೆ ಭಾರೀ ಸುಸ್ತು
ನಡೆದಿತ್ತು ಮದುವೆ ಮನೆ ಗಸ್ತು

..................................

ಎಲ್ಲ ಮುಗಿದು ಮನೆಗೆ ಮರಳಿ
ಹಾಯಾಗಿ ಕಾಲು ಚಾಚಿದರೆ ಗಂಟು ಗಂಟಿಗೂ
ನೋವು
ಪ್ರಶಾಂತ ರಾತ್ರಿಯಲಿ ಗೋಜಲು ನಿದ್ದೆ
ಬೆಳಗ್ಗೆ ಎದ್ದರೆ ಎಲ್ಲ ಖಾಲಿ ಖಾಲಿ
ಒಂದು
ಎರಡು
ಮೂರು
ರಾತ್ರಿ-ಹಗಲುಗಳೆಷ್ಟೋ ಕಳೆದು
ಜರಿಸೀರೆ ಟ್ರಂಕು ಸೇರಿ
ಆಭರಣ ಪೆಟ್ಟಿಗೆ ಸೇರಿ
ಬ್ಯಾಂಕಿನಲಿ ಉಳಿದ ಹಣ
ಪರವಾಗಿಲ್ಲ ನಡೆದೀತು ಎನಿಸಿ
ಕಾಲಕಾಲಕ್ಕೆ ಹಸಿವಾಗಿ
ತಿಳಿಸಾರು ಉಪ್ಪಿನಕಾಯಿ
ಹದವರಿತು ತಿಂದು
ಶಾಂತ ನಿದ್ರೆಯು ತೀರಿ
ಬೆಳಗಿನಲಿ ಮೈಚಾಚಿ
ಪೇಪರ್ ಓದುತ್ತ
ಊರು-ಕೇರಿ-ದೇಶಗಳ
ಚಿಂತನೆ ನಡೆಸಿದಾಗ
ಪರಾರಿಯಾದ ಮನಸ್ಸು
ಮತ್ತೆ ದೇಹ ಸೇರಿತ್ತು!

**ಎಸ್. ಮಾಲತಿ**
ಮಹಾಲಸ ನಿಲಯ, ಜೋಗ್ ರಸ್ತೆ, ಸಾಗರ - ೫೭೭೪೦೧

ಮನೋಭಾವದಿಂದ ನೋಡೋಣ. ಭಾಷೆ ಎನ್ನುವುದು ನಿರಂತರವಾಗಿ ಬೆಳೆಯುವ ಜೀವಂತ ಪ್ರಾಣಿ. ಬದಲಾವಣೆ ಇಲ್ಲದ ಭಾಷೆಗೆ ಮರಣ ಖಚಿತ. ಕಾಲ ಬದಲಾದಂತೆ ಜನರ ನಡತೆ ಅಭಿರುಚಿ ಮಾರ್ಪಟ್ಟಂತೆ ಭಾಷೆಯೂ ಬದಲಾಗುವುದು ಸ್ವಾಭಾವಿಕ. ವೃಕ್ಷವೊಂದು ಜೀವಂತವಾಗಿರಲು ಹೊಸ ಚಿಗುರು ಬರಲೇಬೇಕು ಅಲ್ಲವೆ? ಹಾಗೆ ಭಾಷೆಯೊಂದರಲ್ಲಿ ನಾವೀನ್ಯತೆ ಬರಲು ಚೈತನ್ಯವಿರಲು ಬದಲಾವಣೆ ಬೇಕೇ ಬೇಕು. ಮಿಕ್ಕೆಲ್ಲಾ ಭಾಷೆಗಳಿಗಿಂತ ಶ್ರೀಮಂತವಾದ ಆಂಗ್ಲ ಭಾಷೆಯೊಂದರಲ್ಲಿ ಇರುವುದು ಸುಮಾರು ೯ಲಕ್ಷಕ್ಕೂ ಹೆಚ್ಚಿನ ಪದಗಳು (ಫ್ರೆಂಚಲ್ಲಿ ಉದಾಹರಣೆಗೆ ಸುಮಾರು ೧-೨ ಲಕ್ಷ ಪದಗಳುಂಟು ಅಷ್ಟೇ). ದಕ್ಷಿಣ ಜರ್ಮನ್‌ನಿಂದ ಹುಟ್ಟಿದ ಆಂಗ್ಲಭಾಷೆ ಇಂಗ್ಲೆಂಡ್ ಮೇಲೆ ಆಕ್ರಮಣಗಳು ನಡೆದಾಗ ಮೊದಲು ಲ್ಯಾಟಿನ್ ಪದಗಳನ್ನೂ,ಆಮೇಲೆ ೧೧ನೇ ಶತಮಾನದಲ್ಲಿ ಫ್ರೆಂಚ್ ಪದಗಳನ್ನೂ ಆಮದು ಮಾಡಿಕೊಂಡಿತ್ತು. ನಂತರ ಆಂಗ್ಲರೇ ಪ್ರಪಂಚವನ್ನೆಲ್ಲಾ ಆಕ್ರಮಿಸಿದಾಗ ಹಿಂದಿ, ಅರಬಿ ಮುಂತಾದ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿತು. ಮತ್ತು ವಿಜ್ಞಾನದ ಪ್ರಗತಿಯ ಜೊತೆಗೇ ಹೊಸಹೊಸ ಪದಗಳು ಸೃಷ್ಟಿಯಾಗಿ ಗ್ರೀಕ್ ಮುಂತಾದ ಭಾಷೆಗಳಿಂದ ಅನೇಕ ಪದಗಳು ಬಂದವು .



ಮೊದಲೆಲ್ಲಾ ಸೂಟ್‌ಕೇಸ್ ತಂದವರನ್ನು ನೇರವಾಗಿ ಒಳಗೆ ಕಳ್ಸಕೊಡು ಅನ್ನುತ್ತಿದ್ದವರು ಈಗ ಸೂಟ್‌ಕೇಸ್ ಕಂಡರೆ ಬೆವರುತ್ತಾರೆ...

ಹೀಗೇ ಕನ್ನಡವೂ ಅನೇಕ ಬದಲಾವಣೆಗಳನ್ನು ಕಂಡಿದೆ. ಮೊಟ್ಟಮೊದಲ ಪ್ರಭಾವ ಬಹುಶಃ ಸಂಸ್ಕೃತದ್ದು. ಸಂಸ್ಕೃತದ ಪದಗಳು ಕನ್ನಡಕ್ಕೆ ತದ್ಭವವಾಗಿ ಬಂದು ಕನ್ನಡಕ್ಕೆ ಬಹಳ ಅಂದವನ್ನೂ ಸೊಬಗನ್ನೂ ಕೊಟ್ಟಿವೆ. ಸಂಸ್ಕೃತ ಪದಗಳನ್ನೆಲ್ಲಾ ತೆಗೆದುಹಾಕಿದರೆ ಕನ್ನಡ ಸಾಹಿತ್ಯದಲ್ಲಿ ಏನು ಉಳಿದೀತು, ಯೋಚಿಸಿ ನೋಡಿ. ಹಾಗೆಂದು ಇದು ಏಕಮಾತ್ರ ದಿಕ್ಕಿನ ಪ್ರವಾಹವಲ್ಲ - ಎಲ್ಲ ಭಾಷೆಗಳಲ್ಲೂ ಪರಸ್ಪರ ವಿನಿಮಯವಾಗಲು ಸಾಧ್ಯವಿದೆ. ಕನ್ನಡ ಮತ್ತಿತರ ದ್ರಾವಿಡ ಭಾಷೆಗಳಿಂದ ಪದಗಳು ಸಂಸ್ಕೃತಕ್ಕೆ ಹೋಗಿರುವುದು ಪ್ರಾಯಶಃ ಸಾಮಾನ್ಯವಾಗಿ ಗೊತ್ತಿರಲಾರದು; ಉದಾಹರಣೆಗೆ 'ಪೂಜೆ' ದ್ರಾವಿಡ ಭಾಷೆಗಳಿಂದ ಸಂಸ್ಕೃತ ಆಮದು ಮಾಡಿಕೊಂಡ ಪದ. ಹಾಗೇ ಕನ್ನಡವು ಅನೇಕ ಹಿಂದೀ ಪದಗಳನ್ನೂ ಆಮದು ಮಾಡಿಕೊಂಡಿದೆ. ಅಷ್ಟೇಕೆ ಪೋರ್ಚುಗೀಸ್ ಅಂತಹ ಭಾಷೆಗಳಿಂದ ಕೂಡ (ಉದಾ: ಮೇಜು) ಪದಗಳು ಬಂದಿವೆ. ಇಂಗ್ಲಿಷಿನಿಂದ ಬಂದರೆ ತಪ್ಪೇನು ಅಲ್ಲವೆ ? ಕಾರು ಎಂದು ಸುಲಭವಾಗಿ ವರ್ಣಿಸುವ ಭೂತೈಲದಿಂದ ಓಡುವ ನಾಲ್ಕುಚಕ್ರದ ಗಾಡಿಗೆ ಬೇರೆ ಪದ ಎಲ್ಲಿಂದ ತರೋಣ? ಆದ್ದರಿಂದ ಇಂಗ್ಲಿಷ್ ಪದಗಳು ಕನ್ನಡಕ್ಕೆ ತದ್ಭವವಾಗಿ ಬರುವುದು ತಪ್ಪೇನಿಲ್ಲ. ತಮಿಳಿನ ಮುಖಾಂತರ ಆಂಗ್ಲಭಾಷೆಗೆ ಹೋದ ಮ್ಯಾಂಗೋ ಶಬ್ದ ಯಾರೂ ಇಂಗ್ಲಿಷ್ ಪದ ಅಲ್ಲ ಎನ್ನುವುದಿಲ್ಲ. ಆದರೆ ಯಾವುದೋ ಸ್ಥಿತಿಯಲ್ಲಿ ಇಂಗ್ಲಿಷ್ ಸೇರಿಕೊಂಡ ಕನ್ನಡದ ಮಾತು, ಸಹಜವಾಗಿ ಬೆಳೆಯುತ್ತಿರುವ ಕನ್ನಡವೋ ಅಥವಾ ಕನ್ನಡವೇ ಅಲ್ಲದ ಏನೋ ಕೆಟ್ಟ ಮಿಶ್ರಣವೋ – ಇದು ಒಂದು ಕ್ಲಿಷ್ಟ ಪ್ರಶ್ನೆಯಾದರೂ ಬೆಂಗಳೂರಲ್ಲಿ ಈಚೆಗೆ ಕೇಳಿಬರುವ ಭಾಷೆ ಕನ್ನಡವಲ್ಲ ಎಂದು ಖಚಿತವಾಗಿ ಹೇಳಬಹುದು.

ಹಿಂದಿನ ಕಾಲದಲ್ಲಿ ಕನ್ನಡ ಎನ್ನುವುದು ಪ್ರಾಕೃತಿಕ ಭಾಷೆಯಾಗಿ ಸಂಸ್ಕೃತಕ್ಕಿಂತ ಕೆಳಗಿನ ಸ್ಥಾನದಲ್ಲಿತ್ತು. ಉತ್ತಮ ಸಾಹಿತಿಗಳು ಸಾಹಿತ್ಯವನ್ನು ರಚಿಸಲು ಸಂಸ್ಕೃತ ಉಪಯೋಗಿಸುತಿದ್ದರೇ ಹೊರತು ಕನ್ನಡಕ್ಕೆ ''ಇಳಿಯುತ್ತಿರಲಿಲ್ಲ''. ಇದನ್ನು ಉಲ್ಲಂಘಿಸಿದ ಅನೇಕ ಉತ್ತಮ ಸಾಹಿತಿಗಳು, ದಾಸರು, ಕವಿಗಳು ಹಾಗೂ ವಚನಕಾರರು ಬಂದಮೇಲೆ ಕನ್ನಡದ ಅಂತಸ್ತು ಮೇಲಕ್ಕೇರಿತು. ಇತ್ತೀಚೆಗೆ ರಚನೆಯಾದ ಮುದ್ದಣ ಮನೋರಮೆಯರ ಸಲ್ಲಾಪದಲ್ಲಿ ಬರುವ ಪ್ರಸಂಗದಲ್ಲಿ ಮುದ್ದಣ ಕಥೆಯನ್ನು ಸಂಸ್ಕೃತದಲ್ಲಿ ಹೇಳಲೋ ಕನ್ನಡದಲ್ಲಿ ಹೇಳಲೋ ಎಂದಾಗ ಮನೋರಮೆ ''ಕನ್ನಡಂ ಕತ್ತುರಿಯಲ್ತೆ?'' ಎಂದು ಕನ್ನಡದ ಮೇಲೆ ಅಭಿಮಾನ ತೋರಿಸಿರುವುದು ನಿಮಗೆ ಗೊತ್ತಿರುತ್ತೆ. ಸುಮಾರು ೫೦೦ ವರ್ಷದ ಹಿಂದಿನ ಸಮಾಜದಲ್ಲಿ ಸಂಸ್ಕೃತದಲ್ಲಿ ಮಾತಾಡುವವ ಒಬ್ಬ ಶೋಕಿಯಾಗಿ ಓಡಾಡುತ್ತಾ ಬರೀ ಕನ್ನಡ ಮಾತನಾಡುವವರ ಮೇಲೆ ಕೀಳುಭಾವನೆ ವ್ಯಕ್ತ ಪಡಿಸುವುದನ್ನು ಕಲ್ಪಿಸಬಹುದು. (ಇದು ಸಹಜವೋ ಅತಿಶಯವೋ ನನಗೆ ಗೊತ್ತಿಲ್ಲ; ಸ್ವಲ್ಪ ಕಲ್ಪನೆ ಮಾಡಿಕೊಳ್ಳಿ.) ಈಗ ನನ್ನ ಭಾವನೆಯಲ್ಲಿ ಆ ಜಾಗಕ್ಕೆ ಆಂಗ್ಲಭಾಷೆ ಬಂದು ಕೂತಿದೆ. ಈಗಿನ ಕಾಲದಲ್ಲಿ ಮುದ್ದಣ ಮನೋರಮೆಯರ ನಡುವೆ ಸಂಭಾಷಣೆಯಾದರೆ ''ಕಥೆಯನ್ನು ಇಂಗ್ಲಿಷಲ್ಲಿ ಹೇಳಲೋ ಕನ್ನಡದಲ್ಲಿ ಹೇಳಲೋ'' ಎಂದು ಕೇಳಿದರೆ ಮನೋರಮೆ, ''ಎರಡೂ ಬೇಡ, ಕನ್ನಡ ಚಲನಚಿತ್ರಗಳ ತರಹ ಕಂಗ್ಲಿಷಲ್ಲಿ ಹೇಳು'' ಎನ್ನುತ್ತಾಳೇನೋ!

ಹೀಗಾಗಿ ಕನ್ನಡನಾಡಿನಲ್ಲಿ (ಇಡೀ ಭಾರತದಲ್ಲಿ ಕೂಡ) ಹೊಸದೊಂದು ಜಾತಿಯ ಪಂಗಡ ಸೃಷ್ಟಿಯಾಗಿದೆ. ಇಂಗ್ಲಿಷ್ ಗೊತ್ತಿರುವವನು, ಅದಕ್ಕಿಂತ ಮುಖ್ಯವಾಗಿ 'ಇಂಗ್ಲಿಷ್ ಗೊತ್ತೆಂದು ತೋರಿಸಿಕೊಳ್ಳುವವನು' ಮೇಲಿನ ದರ್ಜೆಯವನು, ಅವನಿಗೇ ಒಳ್ಳೆ ಕೆಲಸಗಳು ಮೀಸಲು, ಅವನಿಗೆ ಮರ್ಯಾದೆ ಜಾಸ್ತಿ. ಕನ್ನಡ ಮಾತ್ರ ಮಾತಾಡುವ ಬಡಪಾಯಿ ಕೀಳು ದರ್ಜೆಯವನು. ಆರ್ಥಿಕ ಪದ್ಧತಿಯಿಂದ, ವೃತ್ತಿಕಾರಣಗಳಿಂದ, ಸ್ಫುರಿತವಾಗಿರುವ ಈ ಎರಡು ದರ್ಜೆಗಳ ಸ್ಥಿತಿಯನ್ನು ನಿವಾರಿಸುವುದು ಹೇಗೆ? ನಿವಾರಿಸಲು ಸಾಧ್ಯವೇ ? ಒಳ್ಳೆಯ ಕೆಲಸ ಸಿಗಲು ಇಂಗ್ಲಿಷ್ ಬೇಕೇಬೇಕಾದಾಗ, ಬೇಡ ಕನ್ನಡವನ್ನೇ ಮಾತಾಡು ಎಂದು ಬೋಧಿಸಲು ಯಾರಿಗಾದರೂ ಅಧಿಕಾರವಿದೆಯೇ? ಆದ್ದರಿಂದ ೨೧ನೆಯ ಶತಮಾನದಲ್ಲಿ ಇಂಗ್ಲಿಷಿನ ಅವಶ್ಯಕತೆ ಇದ್ದೇ ಇದೆ. ಎಲ್ಲರೂ ಇಂಗ್ಲಿಷ್ ಕಲಿಯುವುದು ಎಲ್ಲ ಜನರೂ ಆರ್ಥಿಕ ಮುನ್ನಡೆಗೆ ಮಾಡಲೇಬೇಕಾದ ಕೆಲಸ. ಆದರೆ ಇಂಗ್ಲಿಷ್ ಜೊತೆಗೆ ಕನ್ನಡವನ್ನೂ ಏಕೆ ಕಲಿಯಬಾರದು? ಮಾನವನ ಮಿದುಳಿನ ಅಪಾರವಾದ ಶಕ್ತಿಗೆ ಎರಡು ಭಾಷೆ ಒಂದು ಹೊರೆಯೇ? ನರವ್ಯೂಹ ಶಾಸ್ತ್ರದ ಸಂಶೋಧನೆಗಳ ಪ್ರಕಾರ ಎರಡು ಅಥವಾ ಇನ್ನೂ ಹೆಚ್ಚು ಭಾಷೆಗಳನ್ನು ಕಲಿತವರ ಮಿದುಳಿನಲ್ಲಿ ಹೊಸ ಹೊಸ ನರಹಾದಿಗಳು ಬೆಳೆದು ಅವರ ಮಾನಸಿಕ ವಿಕಾಸ ಬಹಳ ಉತ್ತಮವಾಗಿ ಇರುತ್ತದೆಯಂತೆ. ಬೇರೆ ಬೇರೆ ಹೊಸ ವಿಷಯಗಳನ್ನು ಕಲಿಯಲು ಅವರಿಗೆ ಏಕ ಭಾಷಾ ಪ್ರವೀಣರಿಗಿಂತ ಹೆಚ್ಚು ಸಾಮರ್ಥ್ಯವಿರುತ್ತದೆಯಂತೆ. ಹೀಗೆ ಪರಿಶೀಲಿಸಿದರೆ ಕರ್ನಾಟಕದ ಸಮಸ್ಯೆಗೆ ನಮಗೆ ಹೊಳೆಯುವುದು ಒಂದೇ ದಾರಿ: ಕನಿಷ್ಠ ಆಂಗ್ಲ ಮತ್ತು ಕನ್ನಡ ಈ ಎರಡು ಭಾಷೆಗಳನ್ನು ಕರ್ನಾಟಕದಲ್ಲಿರುವ ಎಲ್ಲ ಮಕ್ಕಳಿಗೂ ಕಡ್ಡಾಯವಾಗಿ ಕಲಿಸುವುದು. ಪ್ರಾಯಶಃ ವಿಜ್ಞಾನ, ಗಣಿತ ಮತ್ತಿತರ ವಿಷಯಗಳನ್ನು ಆಂಗ್ಲಭಾಷೆಯಲ್ಲಿ ಕಲಿಸಬಹುದೇನೋ.

ಪ್ರಪಂಚದಲ್ಲಿ ಎಲ್ಲ ಕಡೆ ಚಿಕ್ಕ ಪುಟ್ಟ ಭಾಷೆಗಳು ವರ್ಷವರ್ಷವೂ ಮರಣ ಹೊಂದುತ್ತಿವೆ. ನ್ಯಾಷನಲ್ ಸೈನ್ಸ್ ಫೌಂಡೇಶನ್‌ನ ಹೊಸ ಸಂಶೋಧನೆಯಲ್ಲಿ ಭಾಷಾತಂತ್ರಜ್ಞರು ಈ ಅದೃಶ್ಯವಾಗುತ್ತಿರುವ ಭಾಷೆಗಳು ಸಂಪೂರ್ಣ ಕಣ್ಮರೆಯಾಗುವಷ್ಟರಲ್ಲಿ (ಇನ್ನೇನೂ ಮಾಡಲಾಗದೆ) ಧ್ವನಿಮುದ್ರಣ ಮಾಡಿ ಭವಿಷ್ಯಕ್ಕೋಸ್ಕರ ದಾಖಲೆ ಮಾಡಲು ಧಾವಿಸುತ್ತಿದ್ದಾರೆ. ನಾಲ್ಕು ವರ್ಷದ ಹಿಂದೆ ನಡೆಸಿದ ಯುನೆಸ್ಕೊ ಅಧ್ಯಯನದ ಪ್ರಕಾರ ಈಗ ಬಳಕೆಯಲ್ಲಿರುವ ಸುಮಾರು ೬,೦೦೦ ಭಾಷೆಗಳಲ್ಲಿ ಶೇಕಡ ೮೦ರಿಂದ ೯೦ರಷ್ಟು ೧೦೦ ವರ್ಷದಲ್ಲಿ ನಶಿಸಿಹೋಗುವುದು ಖಚಿತ. ಸದ್ಯಕ್ಕೆ ಈ ಪಂಗಡಕ್ಕೆ ಕನ್ನಡವನ್ನು ಸೇರಿಸಿಲ್ಲ. ಆದರೆ ಇನ್ನು ನೂರು ವರ್ಷಕ್ಕೆ ಮತ್ತೆ ಇದೇ ತರಹದ ಸಂಶೋಧನೆ ನಡೆಸಿದರೆ ಬಹುಶಃ ಕನ್ನಡ ವಿಪತ್ತಿಗೆ ಸಿಕ್ಕ ಭಾಷೆಗಳಲ್ಲೊಂದಾಗಿರುತ್ತದೆಂದು ನನ್ನ ಭಾವನೆ. ಹಾಗೆಂದು ಇದರ ವಿಷಯ ಚಿಂತನೆ ನಡೆಯುತ್ತಿಲ್ಲವೆಂದಲ್ಲ. ಕನ್ನಡದ ಭವಿಷ್ಯದ ಬಗ್ಗೆ ಕಳಕಳಿ ವ್ಯಕ್ತಪಡಿಸುತ್ತಿರುವ ಅನೇಕ ಜನರಿದ್ದಾರೆ, ಸಾಹಿತಿಗಳಿದ್ದಾರೆ, ಮಹಾ ಪಂಡಿತರಿದ್ದಾರೆ. ಆದರೆ ಭಾಷೆ ಉಳಿಯುವುದು ಬೆಳೆಯುವುದು ನನ್ನಂತಹ ಸಾಮಾನ್ಯ ಜನರಿಂದಲೇ ಹೊರತು ಪಂಡಿತರಿಂದಲ್ಲ. ಈ ವಿಷಯದಲ್ಲಿ ಶ್ರೀ ಯು. ಆರ್. ಅನಂತಮೂರ್ತಿ ಹೇಳುವ ಹಾಗೆ ಭಾಷೆಯ ಬೆಳವಣಿಗೆ ಆಗುವುದು ಹಿತ್ತಲಿಂದ. ನಾವೇ ಕನ್ನಡ ಮಾತಾಡದಿದ್ದರೆ, ನಮ್ಮ ಮಕ್ಕಳಿಗೆ ಮೊಮ್ಮಕ್ಕಳಿಗೆ ನಾವು ಕನ್ನಡ ಹೇಳಿಕೊಡದಿದ್ದರೆ, ಕನ್ನಡದ ಅಮೋಘವಾದ ಸಾಹಿತ್ಯ ನಾಟಕ ಕಾವ್ಯ ಸಂಪತ್ತನ್ನು ನಾವೇ ಅನುಭವಿಸದಿದ್ದರೆ ಬಡಪಾಯಿ ಸಾಹಿತಿ ಏನು ತಾನೆ ಮಾಡಲು ಸಾಧ್ಯ ?

ಹೀಗೆ ಕನ್ನಡನಾಡು ಸುವರ್ಣಮಹೋತ್ಸವ ಆಚರಿಸುವಾಗ ನಮ್ಮ ಪ್ರಿಯ ಭಾಷೆಯ ಭವಿಷ್ಯದ ಚಿಂತನೆ ಮಾಡುವುದು ನಮ್ಮೆಲ್ಲರ ಕರ್ತವ್ಯ ಅನ್ನಿಸುತ್ತದೆ. ಇನ್ನು ೫೦ ವರ್ಷಕ್ಕೆ ಕರ್ನಾಟಕದ ಶತವಾರ್ಷಿಕೋತ್ಸವ ಆಚರಿಸುವಾಗ ಕನ್ನಡ ಬರೆಯುವವರು ಓದುವವರು ಸಾಕಷ್ಟಿದ್ದು 'ಕನ್ನಡದಲ್ಲಿಯೇ' ಆಚರಿಸುವಂತಾಗಲಿ ಎನ್ನುವುದೇ ನನ್ನ ಆಸೆ!

ಅಂಬಳೆ ನಟರಾಜ
ಪ್ರಾಧ್ಯಾಪಕ, ವಿಲನೋವಾ ವಿಶ್ವವಿದ್ಯಾಲಯ, ಫಿಲಡೆಲ್ಫಿಯಾ (ಯುಎಸ್‌ಎ)

# ಜಾರ್ಜಿಯ : ಪಾಶ್ಚಾತ್ಯ ಪ್ರೇರಿತ ಷಡ್ಯಂತ್ರ ವಿಫಲ




ಜಾರ್ಜಿಯದ ಅಧ್ಯಕ್ಷ ಮಿಖಾಯಿಲ್ ಸಾಕಷ್ವಿಲಿ ಕಾಕಸಸ್ ಪ್ರದೇಶದ ದಕ್ಷಿಣ ಒಸ್ಸೇತಿಯ ಮತ್ತು ಅಬ್ಖಾಜಿಯಾಗಳನ್ನು ಸ್ವಾಧೀನಪಡಿಸಿಕೊಳ್ಳಲು ನಡೆಸಿದ ದಾಳಿ ವಿಫಲಗೊಂಡಿತು. ರಷ್ಯಾದ ಕ್ಷಿಪ್ರ, ದೃಢ ಸೈನಿಕ ಕಾರ್ಯಾಚರಣೆಯಿಂದಾಗಿ ಜಾರ್ಜಿಯದ ನಾಯಕನ ಮಹತ್ವಾಕಾಂಕ್ಷೆ ಈಡೇರಲಿಲ್ಲ. ಈ ದುಸ್ಸಾಹಸದ ಪರಿಣಾಮ ಎರಡು ಸಾವಿರಕ್ಕೂ ಹೆಚ್ಚು ಅಮಾಯಕ ಜನರ ಸಾವು. ಪ್ರಪಂಚದ ಗಮನವೆಲ್ಲ ಬೀಜಿಂಗ್ ಒಲಿಂಪಿಕ್ಸ್‌ನ ಉದ್ಘಾಟನಾ ಸಮಾರಂಭದತ್ತ ಕೇಂದ್ರೀಕೃತವಾಗಿದ್ದಾಗ ಈ ದುರ್ಘಟನೆ ಸಂಭವಿಸಿತು. ಪಶ್ಚಿಮ ರಾಷ್ಟ್ರಗಳಲ್ಲಿ ಇದು ದೊಡ್ಡ ಸುದ್ದಿ - ಒಲಿಂಪಿಕ್ ಪ್ರಾರಂಭಕ್ಕಿಂತ. ಇದಕ್ಕೆ ಕಾರಣ ಜಾರ್ಜಿಯ ಈ ಕೃತ್ಯ ಎಸಗಲು ಮುಂದಾದದ್ದು ಕೂಡ ಅಮೆರಿಕಾ ಮತ್ತು ಪಶ್ಚಿಮ ರಾಷ್ಟ್ರಗಳ ಪ್ರೇರಣೆಯಿಂದ. ಅಧ್ಯಕ್ಷ ಸಾಕಷ್ವಿಲಿ ಅಧ್ಯಕ್ಷ ಜಾರ್ಜ್ ಬುಷ್‌ನ ಪರಮ ಮಿತ್ರ. ಇರಾಕಿನ ಮೇಲೆ ದುರಾಕ್ರಮಣ ನಡೆಸಲು ಜಾರ್ಜಿಯದ ಸೇನೆಯನ್ನು ಕಳುಹಿಸಿದ್ದ ಭಂಟ. ನ್ಯಾಟೋ ಕೂಟದ ಸದಸ್ಯತ್ವ ಪಡೆಯಲು ತುದಿಗಾಲಲ್ಲಿ ನಿಂತಿರುವಾತ. ಅವನ ಸೇನೆಯ ಬಹುಪಾಲು ಮಂದಿ ಅಮೆರಿಕಾದ ಸೇನೆಯಿಂದ ತರಬೇತಿ ಪಡೆದವರೆ. ಅದರಿಂದಾಗಿಯೇ ಅಮೆರಿಕಾ ಮತ್ತು ಪಶ್ಚಿಮ ರಾಷ್ಟ್ರಗಳು ರಷ್ಯಾ ಕೈಗೊಂಡ ಕ್ರಮದ ವಿರುದ್ಧ ಬೊಬ್ಬೆ ಹಾಕುತ್ತಿವೆ.

ರಷ್ಯಾ ರಾಜಕೀಯವಾಗಿ, ಆರ್ಥಿಕವಾಗಿ ತಲೆ ಎತ್ತುತ್ತಿರುವುದು ಅಮೆರಿಕಾ ಮತ್ತು ಪಶ್ಚಿಮ ರಾಷ್ಟ್ರಗಳಿಗೆ ಕಳವಳಕಾರಿ ಬೆಳವಣಿಗೆ. ಆದಕ್ಕಾಗಿಯೇ ರಷ್ಯಾವನ್ನು ಹದ್ದುಬಸ್ತಿನಲ್ಲಿರಿಸಲು ಅವು ಪ್ರಯತ್ನಗಳನ್ನು ನಡೆಸುತ್ತಲೇ ಇವೆ. ಸೋವಿಯತ್ ಒಕ್ಕೂಟದ ವಿಭಜನೆಯ ನಂತರ ರಷ್ಯನ್ ಫೆಡರೇಷನ್ನಿನ ನೇತೃತ್ವದಲ್ಲಿ ಸ್ಥಾಪನೆಗೊಂಡ ಸ್ವತಂತ್ರ ರಾಷ್ಟ್ರಗಳ ಕಾಮನ್‌ವೆಲ್ತ್ ಒಕ್ಕೂಟವನ್ನು ಛಿದ್ರಗೊಳಿಸಲು ಸಂಚುಗಳು ನಡೆಯುತ್ತಲೇ ಇವೆ. ಮೊದಲು ಉಕ್ರೇನನ್ನು ರಷ್ಯಾದ ವಿರುದ್ಧ ಎತ್ತಿಕಟ್ಟಲು ಪ್ರಯತ್ನ ನಡೆಯಿತು. ರಷ್ಯಾ ವಿರೋಧಿ ಶಕ್ತಿಗಳನ್ನು ಬೆಂಬಲಿಸಲು ಡಾಲರ್ ಹೊಳೆಯೇ ಹರಿದಿದೆ. ಆಮೆರಿಕಾದ ವಿದೇಶಾಂಗ ಕಾರ್ಯದರ್ಶಿ ಕಾಂಡಲೀಸ ರೈಸ್ ಮತ್ತು ಇತರ ಅಧಿಕಾರಿಗಳು ಬಹಿರಂಗವಾಗಿಯೇ 'ಆರೆಂಜ್ ರೆವಲ್ಯೂಶನ್', 'ಪಿಂಕ್ ರೆವಲ್ಯೂಶನ್' ಎಂದು ಕರೆಯುವ ರಷ್ಯನ್ ವಿರೋಧಿ ಚಟುವಟಿಕೆಗಳಿಗೆ ಬೆಂಬಲ ನೀಡಿದ್ದಾರೆ. ಅದಕ್ಕಾಗಿ ಜಾರ್ಜಿಯವನ್ನು ಮುಖ್ಯ ನೆಲೆಯಾಗಿ ಬಳಸಿಕೊಳ್ಳುತ್ತಿದ್ದಾರೆ. ರಷ್ಯಾವನ್ನು ಸುತ್ತುವರಿದು ನಿಯಂತ್ರಣದಲ್ಲಿರಿಸಿಕೊಳ್ಳುವ ಪ್ರಯತ್ನಗಳಲ್ಲಿ ಒಂದು 'ನ್ಯಾಟೋ' ಕೂಟದ ವಿಸ್ತರಣೆ ಹಾಗೂ ಯೂರೋಪಿನ ದೇಶಗಳಲ್ಲಿ ಕ್ಷಿಪಣಿ ನೆಲೆಗಳ ನಿಯೋಜನೆ. ರಷ್ಯಾದ ತೀವ್ರವಾದ ವಿರೋಧ ಹಾಗೂ ಪ್ರತಿರೋಧ ಕ್ರಮಗಳಿಂದಾಗಿ ಅವು ಸ್ಥಗಿತಗೊಂಡಿವೆ. ಆದರೂ ಪೋಲೆಂಡಿನಲ್ಲಿ ಕ್ಷಿಪಣಿಗಳನ್ನು ತಂದಿರಿಸಲು ಪ್ರಯತ್ನ ಮುಂದುವರಿದಿದೆ.



ಜಾರ್ಜಿಯ ಸೈನ್ಯದ ದಾಳಿಯ ನಂತರ ದಕ್ಷಿಣ ಒಸ್ಸೇತಿಯಾದ ನಿರಾಶ್ರಿತರು ವಲಸೆ

ಅಮೆರಿಕಾದ ಭೌಗೋಳಿಕ ರಾಜಕೀಯ ಲೆಖ್ಖಾಚಾರದಲ್ಲಿ ಜಾರ್ಜಿಯ ಆಯಕಟ್ಟಿನ ಪ್ರದೇಶದಲ್ಲಿದೆ. ರಷ್ಯಾದ ಮೇಲೆ ಒತ್ತಡ ಹೇರುವುದಕ್ಕಷ್ಟೇ ಅಲ್ಲದೆ, ಇಂಧನ ರವಾನೆಯ ಸಾಗರ ಮಾರ್ಗದ ಮೇಲೆ ನಿಯಂತ್ರಣ ಸಾಧಿಸಲೂ ಮುಖ್ಯ. ೨೦೦೩ರಲ್ಲಿ ಇರಾನಿನ ನ್ಯೂಕ್ಲಿಯರ್ ಪ್ರಶ್ನೆಯ ಬಗ್ಗೆ ಅಮೆರಿಕಾದ ಜೊತೆ ಕೈಜೋಡಿಸುವಂತೆ ರಷ್ಯಾದ ಮೇಲೆ ಒತ್ತಡ ತರಲು ತನ್ನ ಭಂಟ ಸಾಕಷ್ವಿಲಿಯನ್ನು ಉಪಯೋಗಿಸಿಕೊಂಡಿತು. ಅದು ಫಲಿತಗೊಳ್ಳಲಿಲ್ಲ. ರಷ್ಯನ್ನರು ಶೇ. ೮೦ರಷ್ಟಿರುವ ದಕ್ಷಿಣ ಒಸ್ಸೇತಿಯದಲ್ಲಿ ಶಾಂತಿ ಪರಿಪಾಲನೆಗೆ ರಷ್ಯನ್ ಸೇನೆಯನ್ನು ನಿಯೋಜಿಸಲು ೧೯೯೨ರಲ್ಲೇ ಒಪ್ಪಂದವಾಗಿತ್ತು. ಇದು ಅಂತಾರಾಷ್ಟ್ರೀಯ ಕಾಯಿದೆಗನುಸಾರವಾಗಿ ವಿಶ್ವ ಸಂಸ್ಥೆಯ ಆದೇಶದ ಮೇರೆಗೆ ಆದ ಒಪ್ಪಂದ. ರಷ್ಯಾದ ನಾಗರಿಕರನ್ನು ಕಾಪಾಡುವುದು ಮುಖ್ಯ ಉದ್ದೇಶ. ಜಾರ್ಜಿಯ ಸರಕಾರ ಈ ಒಪ್ಪಂದವನ್ನು ಉಲ್ಲಂಘಿಸಿ ಎಸಗಿದ ದುರಾಕ್ರಮಣವನ್ನು ಹಿಮ್ಮೆಟ್ಟಿಸಲು ರಷ್ಯಾದ ಸೇನಾ ಕಾರ್ಯಾಚರಣೆ ಅನಿವಾರ್ಯ ಹಾಗೂ ಸಮರ್ಥನೀಯ. ಅಮೆರಿಕಾ ಮತ್ತು ಪಶ್ಚಿಮ ರಾಷ್ಟ್ರಗಳ ಕುತಂತ್ರಕ್ಕೆ ಇದರಿಂದ ಹಿನ್ನಡೆಯಾಗಿದೆ. ಜಾರ್ಜಿಯವನ್ನು ನ್ಯಾಟೋ ಕೂಟದ ಸದಸ್ಯನನ್ನಾಗಿ ಮಾಡುವ ಹುನ್ನಾರ ಇದೆ. ಇದರಿಂದ ಅಲ್ಲಿ ನ್ಯಾಟೋ ಸೇನೆಯನ್ನು ನಿಯೋಜಿಸಲು ಹಾಗೂ ಅಮೆರಿಕಾದ ಕ್ಷಿಪಣಿ ನೆಲೆಯನ್ನು ಸ್ಥಾಪಿಸಲು ಅನುವಾಗುತ್ತದೆ. ಹಾಗಾದಲ್ಲಿ ನ್ಯಾಟೋದ ಬಾಹುಗಳು ಏಶಿಯಾದ ಹತ್ತಿರಕ್ಕೂ ಚಾಚಿದಂತಾಗುತ್ತದೆ.

**ಸೀಯಾರ್ಕೆ**

ಜಾರ್ಜಿಯದಲ್ಲಿ ಸಂಭವಿಸಿದ ವಿದ್ಯಮಾನ ರಷ್ಯ ಮತ್ತು ಪಶ್ಚಿಮ ರಾಷ್ಟ್ರಗಳ ಮಧ್ಯೆ ಸಂಬಂಧಗಳನ್ನು ಹದಗೆಡಿಸುವುದು ಖಚಿತ. ಈಗಾಗಲೇ ಪಾಶ್ಚಾತ್ಯ ದೇಶಗಳಲ್ಲಿ ರಷ್ಯಾದ ವಿರುದ್ಧ ಪ್ರಚಾರದಾಳಿ ಪ್ರಾರಂಭವಾಗಿದೆ. ಶೀತಯುದ್ಧದ ದಿನಗಳನ್ನು ನೆನಪಿಸುವಂಥ ಪರಿಸ್ಥಿತಿಯನ್ನು ನಿರ್ಮಿಸಲಾಗುತ್ತಿದೆ. ರಷ್ಯಾದ ಮೇಲೆ ಪ್ರತಿಕಾರಕ್ಕಾಗಿ ಕ್ರಮಗಳನ್ನು ಅರಸಲಾಗುತ್ತಿದೆ. ರಷ್ಯಾವನ್ನು ಜಿ.-೮ ತಂಡದಿಂದ ದೂರವಿರಿಸಲು, ವಿಶ್ವದ ಮಾರುಕಟ್ಟೆ ಸಂಸ್ಥೆಯ ಪ್ರವೇಶವನ್ನು ತಡೆಯಲು, ಯೂರೋಪಿಯನ್ ಯೂನಿಯನ್‌ನೊಂದಿಗೆ ರಷ್ಯಾದ ಸಂಬಂಧಗಳನ್ನು ಶಿಥಿಲಗೊಳಿಸಲು ಯೋಜಿಸಲಾಗುತ್ತಿದೆ. ಅದೇನೇ ಇರಲಿ ಜಾರ್ಜಿಯಾದ ಮೂರು ದಿನಗಳ ಯುದ್ಧ ರಷ್ಯಾದ ಪ್ರಾಬಲ್ಯವನ್ನು ಪುಷ್ಟೀಕರಿಸಿದೆ. ಅಮೆರಿಕಾದೊಂದಿಗೆ ಕೈಜೋಡಿಸಲು ಹೊರಟಿರುವ ಮನಮೋಹನ ಸಿಂಗ್ ಸರಕಾರ ಈ ವಿದ್ಯಮಾನಗಳಿಂದ ಪಾಠ ಕಲಿಯಬೇಕಾಗಿದೆ. ಅಮೆರಿಕಾದ ತೆಕ್ಕೆಯಲ್ಲಿ ಬಿದ್ದರೆ ಅದು ತನ್ನ ಹಿತಾಸಕ್ತಿಗಳಿಗಾಗಿ ಸಂಬಂಧಪಟ್ಟ ದೇಶಗಳನ್ನು ಹೇಗೆ ಬಳಸಿಕೊಳ್ಳುತ್ತದೆ ಎನ್ನುವುದಕ್ಕೆ ಇದು ಉದಾಹರಣೆ.



ದಕ್ಷಿಣ ಒಸ್ಸೇತಿಯಾಕ್ಕೆ ರಷಿಯನ್ ಸೈನ್ಯದ ಆಗಮನ

# ಪಾಕಿಸ್ತಾನ : ಸರ್ವಾಧಿಕಾರಿಯ ಪತನ



ಸರ್ವಾಧಿಕಾರಿ ಎಷ್ಟೇ ಬುದ್ಧಿವಂತನಾಗಿರಲಿ, ಚತುರನಾಗಿರಲಿ ಕೊನೆಯವರೆಗೂ ಅಧಿಕಾರ ಉಳಿಸಿಕೊಳ್ಳಲಾರ. ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವವನ್ನು ಮೂಲೆಗೊತ್ತಿ ಮಿಲಿಟರಿ ಸರ್ವಾಧಿಕಾರಿ ಜನರಲ್ ಪರ್ವೇಜ್ ಮುಷರಫ್ ಕುರ್ಚಿಗೆ ಅಂಟಿಕೊಳ್ಳಲು ಏನೇ ಕಸರತ್ತು ಮಾಡಿದರೂ ಅಧಿಕಾರದಿಂದ ಕೆಳಗಿಳಿಯ ಬೇಕಾಯಿತು. ಕ್ಯೂಬಾದ ಬಾಟಿಸ್ಟಾ, ಚಿಲಿಯ ಪಿನೋಷೆಯಂತೆಯೇ ಮುಷರಫ್ ನಿರ್ಗಮನ ಕೂಡ ಸಂಭವಿಸಿತು. ಪಾಕಿಸ್ತಾನದ ಅರವತ್ತೊಂದು ವರ್ಷಗಳ ಇತಿಹಾಸದಲ್ಲಿ ಸರ್ವಾಧಿಕಾರಿ ಆಡಳಿತದ್ದೇ ಸಿಂಹಪಾಲು : ಹೆಚ್ಚು ಕಡಿಮೆ ನಲವತ್ತು ವರ್ಷಗಳು. ಸ್ವಾತಂತ್ರ್ಯಾನಂತರದ ಮೊದಲ ಒಂಬತ್ತು ವರ್ಷಗಳನ್ನು ಬಿಟ್ಟರೆ ಉಳಿದಂತೆಲ್ಲ ಮಿಲಿಟರಿ ಸರ್ವಾಧಿಕಾರದ್ದೇ ಪಾರುಪತ್ಯ. ೧೯೫೮ರಲ್ಲಿ ಜನರಲ್ ಅಯೂಬ್ ಖಾನ್ ಅಧಿಕಾರ ವಹಿಸಿಕೊಂಡು ಹದಿಮೂರು ವರ್ಷಗಳು ಆಡಳಿತ ನಡೆಸಿದಾಗ ಪಾಕಿಸ್ತಾನದ ರಾಜಕೀಯ ವಿದ್ಯಮಾನಗಳಲ್ಲಿ ಸೇನೆಯ ಕೈವಾಡ ಬಲವಾಗಿ ಬೇರೂರಿತು. ಪ್ರಾರಂಭದಲ್ಲಿ ಅಮೆರಿಕಾದ ವ್ಯೂಹ ರಚನೆಯಲ್ಲಿ ಪಾಲ್ಗೊಂಡು ಗಾಢವಾದ ಸಂಬಂಧಗಳನ್ನು ಬೆಳೆಸಿದ ಪಾಕಿಸ್ತಾನ ಅನತಿಕಾಲದಲ್ಲೇ ಅವಲಂಬಿತ ರಾಷ್ಟ್ರವಾಯಿತು. ಜನತೆಯ ಆಕಾಂಕ್ಷೆಗಳನ್ನು ಪೂರೈಸುವುದಕ್ಕಿಂತ ಹೆಚ್ಚಾಗಿ ಅಮೆರಿಕಾದ ಅಪೇಕ್ಷೆಗಳಿಗನುಸಾರವಾಗಿ ನಡೆದುಕೊಳ್ಳುವುದು ಆಡಳಿತಕ್ಕೆ ಮುಖ್ಯವಾಯಿತು. ಎರಡನೇ ಮಹಾಯುದ್ಧದ ನಂತರ ಸ್ವಾತಂತ್ರ್ಯ ಗಳಿಸಿ ಅಮೆರಿಕಾದ ವ್ಯೂಹರಚನೆಯಲ್ಲಿ ಪಾಲ್ಗೊಂಡು ಬಾಂಧವ್ಯ ಬೆಸೆದ ಬಹುತೇಕ ರಾಷ್ಟ್ರಗಳ ಗತಿಯೂ ಕೂಡ ಸರ್ವಾಧಿಕಾರದ ಪಾಲೇ ಆಯಿತು. ಪ್ರಜಾಪ್ರಭುತ್ವದ, ಮುಕ್ತ ಸಮಾಜದ, ಮಾನವ ಹಕ್ಕುಗಳ ಮಂತ್ರ ಜಪಿಸುತ್ತ, ಇತರರಿಗೆ ಉಪದೇಶ ಮಾಡುವ ಅಮೆರಿಕಾಗೆ ಸರ್ವಾಧಿಕಾರಿ ಆಡಳಿತಗಳೂ ಅಷ್ಟೇ ಪ್ರಿಯ. ಎಲ್ಲಿಯವರೆಗೆ ಈ ಆಡಳಿತಗಳು ಅಮೆರಿಕಾದ ಹಿತಾಸಕ್ತಿಗಳಿಗೆ ಅನುಕೂಲವಾಗಿರುವುವೋ ಅಲ್ಲಿಯವರೆಗೆ ಅವರು ಸುರಕ್ಷಿತ. ಈಗ ಪಾಕಿಸ್ತಾನದಲ್ಲಿ ಮುಷರಫ್ ಸರದಿ. ಇತ್ತೀಚಿನವರೆಗೆ ಮುಷರಫ್‌ನನ್ನು ಬೆಂಬಲಿಸುತ್ತಿದ್ದ ಅಮೆರಿಕಾ ಈಗ ಆತನ ಕೈ ಬಿಟ್ಟು ಬೇರೆ ಕುದುರೆ ಬಾಲ ಹಿಡಿಯ ಹೊರಟಿದೆ.

೧೯೯೯ರಲ್ಲಿ ನವಾಜ್ ಷರೀಫ್ ಸರಕಾರವನ್ನು ಪದಚ್ಯುತಗೊಳಿಸಿ ಅಧಿಕಾರಕ್ಕೇರಿದ ಜನರಲ್ ಮುಷರಫ್‌ಗೆ ವರದಾನವಾಗಿ ಬಂದದ್ದು ಅಮೆರಿಕಾದ ವಿಶ್ವವ್ಯಾಪಾರೀ ಕೇಂದ್ರದ ಮೇಲೆ ಭಯೋತ್ಪಾದಕರು ನಡೆಸಿದ ದಾಳಿ. ಆಫ್ಘಾನಿಸ್ತಾನದ ತಾಲಿಬಾನ್ ಸರಕಾರದ ವಿರುದ್ಧ ಅಮೆರಿಕಾ ಕೈಗೊಂಡ ಸಮರಕ್ಕೆ ಜಾರ್ಜ್ ಬುಷ್‌ಗೆ ಮುಷರಫ್ ಬೆಂಬಲ ಅಗತ್ಯವಿತ್ತು. ಬುಷ್ ದುಸ್ಸಾಹಸಗಳಲ್ಲಿ ಪಾಲ್ಗೊಂಡು ಅಪ್ತವಲಯದಲ್ಲಿ ಸೇರಿಕೊಂಡ ಮುಷರಫ್ ಅಮೆರಿಕಾದ ನಂಬಿಕಾರ್ಹ ಮಿತ್ರನಾದ. ಭಯೋತ್ಪಾದನೆ ವಿರುದ್ಧ ಸಮರದ ನೆಪದಲ್ಲಿ ಸಾಕಷ್ಟು ಡಾಲರ್‌ಗಳನ್ನು ಪಡೆದುಕೊಂಡ. ಈ ಸಮರದಲ್ಲಿ ಮಾಡಿದ ಸಾಧನೆ ಮಾತ್ರ ಹೇಳಿಕೊಳ್ಳುವಂಥದ್ದೇನಾಗಿ ಇರಲಿಲ್ಲ. ತಾಲಿಬಾನ್‌ಗಳನ್ನು ಕೈಬಿಡದೆ, ಅಮೆರಿಕಾವನ್ನು ಕೈಬಿಡದೆ ಸಮತೋಲನ ಕಾಪಾಡಿಕೊಳ್ಳಲು ಕೈಗೊಂಡ ಕ್ರಮಗಳೆಲ್ಲ ಮಣ್ಣುಪಾಲಾಯಿತು. ಸರ್ವಾಧಿಕಾರಿ ಆಡಳಿತದಿಂದ ಬೇಸತ್ತ ಪಾಕ್ ಜನತೆ ಚುನಾಯಿತ ಸರಕಾರಕ್ಕಾಗಿ ಹಾತೊರೆಯತೊಡಗಿದ್ದು ಅಸಹಜವೇನಲ್ಲ. ಮುಲ್ಲಾಗಳು, ಉಗ್ರವಾದಿಗಳ ಬೆಂಬಲವನ್ನು ನೆಚ್ಚಿಕೊಂಡಿದ್ದ ಮುಷರಫ್ ಪ್ರಜಾಪ್ರಭುತ್ವದ ಅವತಾರವನ್ನು ತಳೆದ. ಮಿಲಿಟರಿ ಸರ್ವಾಧಿಕಾರದ ಪಟ್ಟ ತ್ಯಜಿಸಿ ಅಧ್ಯಕ್ಷಗಿರಿ ವಹಿಸಿಕೊಂಡ ಜನರಲ್ ಕೊನೆಗೆ ತನ್ನ ಮಿಲಿಟರಿ ಹುದ್ದೆಯನ್ನು ತ್ಯಜಿಸುವುದು ಅನಿವಾರ್ಯವಾಯಿತು. ಈಚೆಗೆ ನಡೆದ ಚುನಾವಣೆಗಳಲ್ಲಿ ಹೀನಾಯವಾದ ಸೋಲನ್ನುಂಡ ಮುಷರಫ್ ಈಗ ಅಧಿಕಾರವನ್ನೇ ತ್ಯಜಿಸಬೇಕಾಯಿತು. ಪಾಕಿಸ್ತಾನದಲ್ಲಿ ಈ ಬೆಳವಣಿಗೆ ಮುಖ್ಯವಾದ ಘಟನೆ. ಈ ವಿಷಯದಲ್ಲಿ ದೇಶದ ಮಿಲಿಟರಿ ಅಧಿಕಾರಿಗಳು ತಲೆ ಹಾಕದಿರುವುದು ಗಮನಿಸಬೇಕಾದ ಸಂಗತಿ.

ಮುಂದೇನು ? ಪರಸ್ಪರ ವಿರುದ್ಧ ದಿಕ್ಕಿನಲ್ಲಿರುವ ಪಾಕಿಸ್ತಾನ ಪೀಪಲ್ಸ್ ಪಾರ್ಟಿ ಮತ್ತು ನವಾಜ್ ಷರೀಫ್‌ರ ಪಾಕಿಸ್ತಾನ ಮುಸ್ಲಿಂ ಲೀಗ್ ಸಮ್ಮಿಶ್ರ ಸರಕಾರ ಇನ್ನೂ ತನ್ನ ನೆಲೆಯನ್ನು ಕಂಡುಕೊಳ್ಳಬೇಕಾಗಿದೆ. ಮುಷರಫ್ ಪದಚ್ಯುತಿಯ ವಿಷಯದಲ್ಲೇ ಈ ಪಕ್ಷಗಳ ನಡುವೆ ಸಾಕಷ್ಟು ಜಿಜ್ಞಾಸೆ ಇತ್ತು. ಈಗ ಮುಷರಫ್ ಭವಿಷ್ಯ ನಿರ್ಧಾರವಾಗಿದೆ. ಇನ್ನು ಈ ಪಕ್ಷಗಳು ಪ್ರಜಾಪ್ರಭುತ್ವವನ್ನು ಸ್ಥಿರಗೊಳಿಸಲು, ಜನತೆಯ ಆಶೋತ್ತರಗಳನ್ನು ಈಡೇರಿಸಲು ಗಮನಹರಿಸಬೇಕಾಗಿದೆ. ಭಾರತ ಸರಕಾರ ಈ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಪಾಕಿಸ್ತಾನದೊಂದಿಗೆ ಸಂಬಂಧಗಳನ್ನು ಅವಲೋಕಿಸಬೇಕಾಗಿದೆ. ಕಾಶ್ಮೀರದಲ್ಲಿ ಈಚೆಗೆ ಅಮರನಾಥ ಭೂವಿವಾದದ ಸಂಬಂಧದಲ್ಲಿ ಸಂಭವಿಸಿರುವ ಹಿಂಸಾಚಾರಗಳನ್ನು ಪಾಕಿಸ್ತಾನದ ರಾಜಕಾರಣಿಗಳು ಹಳೆಯ ಜಾಡಿನಲ್ಲೇ ಬಳಸಿಕೊಂಡು ಪಾಕಿಸ್ತಾನದ ಜನತೆಯ ಗಮನವನ್ನು ಬೇರೆಡೆಗೆ ತಿರುಗಿಸಲು ನೋಡುತ್ತಿದ್ದಾರೆ. ಇದು ತತ್ಕಾಲಕ್ಕೆ ಅನುಕೂಲವಾಗಿ ಕಂಡರೂ ಹೆಚ್ಚು ಕಾಲ ನಿಲ್ಲದು. ಹಿಂದಿನ ಅನುಭವಗಳು ಅದಕ್ಕೆ ಸಾಕ್ಷಿ. ಪಾಕಿಸ್ತಾನದ ಆಡಳಿತ ಈ ಆಮಿಷಕ್ಕೆ ಬೀಳದೆ ಭಾರತದೊಂದಿಗೆ ನಡೆಯುತ್ತಿರುವ ಮಾತುಕತೆಗಳನ್ನು ಮುಂದುವರಿಸಿ ರಚನಾತ್ಮಕ ರೀತಿಯಲ್ಲಿ ವ್ಯವಹರಿಸಬೇಕಾಗಿದೆ. ಭಾರತ ಸರಕಾರ ಎಚ್ಚರಿಕೆಯಿಂದ ಉದ್ರೇಕಕ್ಕೊಳಗಾಗದೆ ಮುಂದಿನ ಹೆಜ್ಜೆ ಇರಿಸಬೇಕಾಗಿದೆ. ಮುಷರಫ್ ನಿರ್ಗಮನದ ಬೆನ್ನಲ್ಲಿ, ಪಾಕಿಸ್ತಾನದಲ್ಲಿ ಆಡಳಿತ ಸುಭದ್ರಗೊಳ್ಳುವುದಕ್ಕೆ ಸ್ವಲ್ಪ ಸಮಯ ಹಿಡಿದೀತು. ಸ್ಥಿರತೆ ನೆಲೆಗೊಳ್ಳುವವರೆಗೆ ಆತಂಕವೆ.

ಪೀಯಾರ್ಕೆ
'ಚೌಬೀನ', ೩೯೯, ಬನಶಂಕರಿ ೩ನೇ ಹಂತ
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫




ಮುಷರಫ್ ವಿರುದ್ಧ ಪ್ರತಿಭಟನೆ



# ಪಿ. ಎಂ. ನಾರಾಯಣಮೂರ್ತಿ

## ಕಮ್ಯುನಿಸ್ಟ್ ಚಳುವಳಿಗೆ ಅರ್ಪಿತ ಬದುಕು

ಆರೇಳು ದಶಕಗಳಿಂದ ಕಾರ್ಮಿಕರ ಮತ್ತು ರೈತರ ಸಂಘಟನೆಗಳ ಮುಂಚೂಣಿ ನಾಯಕರಾಗಿಯೂ ಕೋಮುವಾದಿ ರಾಜಕೀಯದ ಕಟು ವಿಮರ್ಶಕರಾಗಿಯೂ ಹೋರಾಡಿದ ಮಂಗಳೂರಿನ ಕಾಮ್ರೇಡ್ ಪಿ. ಎಂ. ನಾರಾಯಣಮೂರ್ತಿ ಅವರು ಜುಲೈ ೧೦ರಂದು ಹೃದಯಾಘಾತದಿಂದ ನಿಧನರಾದರು. ಆಗ ಅವರಿಗೆ ೮೪ರ ಹರೆಯ. ಅವರು ಪತ್ನಿ ಸರಸ್ವತಮ್ಮ, ಪುತ್ರ ರವಿಶಂಕರ, ಪುತ್ರಿಯರಾದ ಸತ್ಯ, ಸೀತಾ ಮತ್ತು ವಾಣಿ, ಮೊಮ್ಮಕ್ಕಳನ್ನು ಹಾಗೂ ಅಪಾರ ಬಂಧುಮಿತ್ರರನ್ನು ಅಗಲಿದ್ದಾರೆ. ಮರಣ ಹೊಂದುವುದಕ್ಕಿಂತ ಸ್ವಲ್ಪ ಸಮಯದ ಹಿಂದೆ ಅವರು ತಮ್ಮ ಮೃತದೇಹವನ್ನು ಯಾವ ಧಾರ್ಮಿಕ ವಿಧಿಗಳಿಗೂ ಒಳಪಡಿಸದೆ, ಕಸ್ತೂರಬಾ ವೈದ್ಯಕೀಯ ಕಾಲೇಜಿಗೆ ದಾನ ಮಾಡಬೇಕೆಂದು ಕುಟುಂಬದ ಸದಸ್ಯರ ಒಪ್ಪಿಗೆಯಿಂದ ಮರಣ ಶಾಸನ ಬರೆದಿಟ್ಟಿದ್ದರು. ಅದರಂತೆ ಅವರ ಪಾರ್ಥಿವ ಶರೀರವನ್ನು ಅವರ ಕುಟುಂಬದವರು ಅದೇ ಕಾಲೇಜಿಗೆ ಒಪ್ಪಿಸಿದರು. ಮೃತ ಸಂಗಾತಿಗೆ ನಮ್ಮ ಲಾಲ್ ಸಲಾಂ ಮತ್ತು ಶ್ರದ್ಧಾಂಜಲಿಗಳು ಸಲ್ಲುತ್ತವೆ.

ನಾರಾಯಣಮೂರ್ತಿ ಅವರ ಹುಟ್ಟೂರು ಕೊಡಗು ಜಿಲ್ಲೆಯ ವಿರಾಜಪೇಟೆ ಸಮೀಪದ ಪಾಲಂಗಲ. ಅವರ ತಂದೆಯವರು ಅಧ್ಯಾಪಕರಾಗಿದ್ದರು. ಮೂರ್ತಿ ಚಿಕ್ಕವರಾಗಿದ್ದಾಗಲೇ ತಂದೆಯವರನ್ನು ಕಳೆದುಕೊಂಡಿದ್ದರು. ಅವರ ತಾಯಿ ತನ್ನ ಮಕ್ಕಳಿಗೆ ಉತ್ತಮ ವಿದ್ಯಾಭ್ಯಾಸ ನೀಡುವ ಹಂಬಲದಿಂದ ಮಕ್ಕಳೊಂದಿಗೆ ಮಂಗಳೂರಿಗೆ ಬಂದರು. ಬಾಡಿಗೆ ಮನೆಯೊಂದರಲ್ಲಿ ವಸತಿ ಹೂಡಿದರು. ಹಿರಿಯ ಮಗ ನಾರಾಯಣಮೂರ್ತಿಯನ್ನು ಸಂತ ಅಲೋಶಿಯಸ್ ಕಾಲೇಜಿನಲ್ಲಿ ಪದವಿಪೂರ್ವ ಆರಂಭದ ತರಗತಿಗೆ ಸೇರಿಸಿದರು. ಕಿರಿಯ ಮಗನನ್ನು ಪ್ರೌಢಶಾಲೆಗೆ ಭರ್ತಿ ಮಾಡಿದರು. ಮಕ್ಕಳ ಸೋದರಮಾವನ ಸಹಾಯ ಮತ್ತು ಪ್ರೋತ್ಸಾಹದಿಂದ ವಿದ್ಯಾಭ್ಯಾಸ ನಡೆಸಿದರು.

ವಿದ್ಯಾರ್ಥಿಯಾಗಿದ್ದ ನಾರಾಯಣಮೂರ್ತಿ ಅವರು ಅಂದಿನ ಏಕಮಾತ್ರ ವಿದ್ಯಾರ್ಥಿ ಸಂಘಟನೆಯಾಗಿದ್ದ ಎ.ಐ.ಎಸ್.ಎಫ್.ನ ಸಂಪರ್ಕ ಪಡೆದರು. ಅದರ ಮುಖ್ಯ ಕಾರ್ಯದರ್ಶಿಯವರಲ್ಲಿ ಒಬ್ಬರಾಗಿದ್ದ ಹತ್ತಿರದ ಸಂಬಂಧಿ ಎಸ್. ಎಸ್. ಗಣೇಶ್ ಶಾನುಭಾಗ್ ಅವರ ಮೂಲಕ ನಿಷೇಧಕ್ಕೆ ಒಳಗಾಗಿದ್ದರು. ಭಾರತ ಕಮ್ಯುನಿಸ್ಟ್ ಪಕ್ಷದ ಸಂಪರ್ಕ ಹೊಂದಿದರು. ತಾಯಿಯವರು ಅಂದಿನ ವಿದ್ಯಾರ್ಥಿ ಚಳುವಳಿಯ ಮತ್ತು ಕಮ್ಯುನಿಸ್ಟ್ ಪಕ್ಷದ ಮುಂಚೂಣಿ ಕಾರ್ಯಕರ್ತರಾಗಿದ್ದ ಶಾಂತಾರಾಮ್ ಪೈ, ಬಿ. ವಿ. ಕಕ್ಕಿಲ್ಲಾಯ, ಎಸ್. ಆರ್. ಭಟ್ ಮೊದಲಾದವರ ಪರಿಚಯ ಪಡೆದರು ಹಾಗೂ ಆ ಯುವಕರ ಸರಳ ಜೀವನ, ಶಿಸ್ತಿನ ಜನಪರ ಚಟುವಟಿಕೆಗಳನ್ನು ಕಂಡು ಮೆಚ್ಚಿ ಅವರ ಜತೆಗೂಡಲು ಹಿರಿಯ ಮಗನನ್ನು ಪ್ರೋತ್ಸಾಹಿಸಿದರು. ನಾನು ಭೂಗತನಾಗಿದ್ದಾಗ ನನ್ನನ್ನು ಸ್ವಂತ ತಾಯಿಯಂತೆ ಪಾಲನೆ ಮಾಡಿದ್ದ ಹಾಗೂ ಆಶ್ರಯ ನೀಡುತ್ತಿದ್ದ ತಾಯಿ; ಅವರನ್ನು ನಾನು ಇಂದಿಗೂ ಸ್ಮರಿಸುತ್ತೇನೆ. ಅವರ ಮಾರ್ಗದರ್ಶನದಲ್ಲಿ ನಾರಾಯಣಮೂರ್ತಿಯವರು ಆದರ್ಶ ಕಮ್ಯುನಿಸ್ಟರಾಗಿ ಜೀವನದುದ್ದಕ್ಕೂ ಉಳಿದರೆಂದು ನನಗೆ ಈಗಲೂ ನೆನಪಾಗುವಂತಹ ಒಂದು ಘಟನೆಯನ್ನು ಇಲ್ಲಿ ಹೇಳಲು ಬಯಸುತ್ತೇನೆ.

ಬೀಡಿ ಉದ್ದಿಮೆಯ ಮಾಲಕರು ತಮ್ಮ ಉದ್ಯಮ ಘಟಕಗಳನ್ನು ಮುಚ್ಚಿ ಕೆಲಸಗಾರರನ್ನು ಬೀದಿಪಾಲು ಮಾಡಿ ಉದ್ಯಮವನ್ನು ಮನೆ ಮನೆಗಳಿಗೂ, ಹಳ್ಳಿ ಹಳ್ಳಿಗಳ ಕಾರ್ಮಿಕರ ಗುಡಿಸಲುಗಳಿಗೂ ಏಜೆಂಟರುಗಳ ಮೂಲಕ ಲಗ್ಗೆ ಇಡುತ್ತಿದ್ದ ಕಾಲದಲ್ಲಿ, ಮಂಗಳೂರಿನಲ್ಲಿ ಉದ್ಯೋಗ ಭದ್ರತೆಗೂ, ಪರಿಹಾರಕ್ಕೂ ಬೇಡಿಕೆ ಮುಂದಿಟ್ಟು ಕಾರ್ಮಿಕರು ಹೋರಾಟ ಹೂಡಿದ್ದರು. ಅಂತಹ ಸಂದರ್ಭದಲ್ಲಿ ನಮಗೆ ಆಶ್ರಯ, ಅನ್ನ-ನೀರು ಒದಗಿಸಿದ್ದ ಮನೆಗಳಲ್ಲಿ ನಾರಾಯಣಮೂರ್ತಿಯವರದು ಒಂದು ಬಾಡಿಗೆ ಮನೆಯಾಗಿತ್ತು. ಆಗ ನಾರಾಯಣಮೂರ್ತಿಯವರು ವಿದ್ಯಾರ್ಥಿಯಾಗಿದ್ದರು. ಮುಂದೆ ಅವರು ಅಧ್ಯಾಪಕ ವೃತ್ತಿಯನ್ನು ಕೈಗೊಂಡರು. ಅನಂತರ ಅವರು ಕಾನೂನು ಪದವಿ ಪಡೆದು ನ್ಯಾಯವಾದಿಗಳಾದರು.

ನ್ಯಾಯವಾದಿಗಳಾಗಿದ್ದಾಗ ಒಮ್ಮೆ ಅವರು ಭೂಗತರಾಗಿ ವಾಸ ಮಾಡುತ್ತಿದ್ದ ದೂರದ ಹಳ್ಳಿಯೊಂದರ ಕ್ರೈಸ್ತ ಸಂಗಾತಿ ಯೊಬ್ಬರ ಮನೆಗೆ ಬಂದು ಅಲ್ಲಿ ನಾರಾಯಣಮೂರ್ತಿ ಮತ್ತು ಎಸ್. ಆರ್. ಭಟ್ ಪಕ್ಷದ ಗುಪ್ತ ಮುಖಪತ್ರದ ಮತ್ತು ಸಾಹಿತ್ಯ ಕಡತಗಳ ಕಟ್ಟೊಂದನ್ನು ಹೆಗಲಿಗೆ ನೇತುಹಾಕಿದ್ದ ಚೀಲಗಳನ್ನು ಹೇರಿಕೊಂಡು ಮಂಗಳೂರಿಂದ ನಡೆದುಕೊಂಡೇ ಬಂದರು. ರಾತ್ರಿ ನಮ್ಮೊಂದಿಗೆ ಬರಿ ಗಂಜಿ ಉಂಡು, ನಿದ್ರಿಸಿದ್ದರು.

ನನ್ನ ಸಹಪಾಠಿ ಎಸ್. ಭಾಸ್ಕರ ರೈ ಮತ್ತು ತನ್ನ ಶಿಷ್ಯ ನಾರಾಯಣಮೂರ್ತಿ ಜೊತೆಗೂಡಿ ಒಂದು ಕೊಲೆ ಮೊಕದ್ದಮೆಯಲ್ಲಿ ಸಿಲುಕಿದ್ದ ಸೋನ್ಸ್, ಕೃಷ್ಣಶೆಟ್ಟಿ ಮತ್ತು ಇತರ ಸಂಗಾತಿಗಳ ಪರವಾಗಿ ವಿಚಾರಣೆಯಲ್ಲಿ ನಮ್ಮ ಪರ ವಕಾಲತ್ತು ನಡೆಸಿದ್ದನ್ನು ನಾನೆಂದೂ ಮರೆಯಲಾರೆ. ಆಗ ಜಿಲ್ಲೆಯಲ್ಲಿ ನಡುಹಂತದಲ್ಲಿ ಮೂವರು ಮರಣದಂಡನೆಗೆ ಗುರಿಯಾಗಿದ್ದರೂ ಕೊನೆಯ ಹಂತದಲ್ಲಿ ಎಲ್ಲರೂ ದೋಷಮುಕ್ತರಾಗಿ ಬಿಡುಗಡೆ ಹೊಂದಿದ್ದು ವಿ. ಆರ್. ಕೃಷ್ಣ ಅಯ್ಯರ್, ಮೋಹನ್ ಕುಮಾರಮಂಗಲಂ ಮತ್ತು ರಾಜುಲು ನಾಯ್ಡು ಅವರ ನೆರವಿನಿಂದ. ಆದರೆ ಅದಕ್ಕೆ ಮೂಲದಲ್ಲಿ ದಾರಿ ಸಜ್ಜುಗೊಳಿಸಿದ್ದುದು ಭಾಸ್ಕರ ರೈ ಮತ್ತು ನಾರಾಯಣಮೂರ್ತಿ ಎಂದು ಹೇಳಬಯಸುತ್ತೇನೆ.

ಶಾಂತಾರಾಮ್ ಪೈ, ಲಿಂಗಪ್ಪ ಸುವರ್ಣ ಮೊದಲಾದವರು ಜೈಲಿನಲ್ಲಿದ್ದಾಗ ಹಾಗೂ ಸೋನ್ಸ್, ಮೋನಪ್ಪ ಶೆಟ್ಟಿ ಮೊದಲಾದವರು ಭೂಗತರಾಗಿದ್ದಾಗ ಮಂಗಳೂರಿನ ಕಾರ್ಮಿಕ ಸಂಘಗಳ ವತಿಯಿಂದ ಜಿಲ್ಲಾಧಿಕಾರಿಗಳ ಮುಂದೆ, ಕಾರ್ಮಿಕ ಇಲಾಖಾಧಿಕಾರಿಗಳ ಮುಂದೆ, ನ್ಯಾಯಾಲಯಗಳ ಮುಂದೆ ಹಾಗೂ ತ್ರಿಪಕ್ಷೀಯ ಸಂಧಾನ ಸಮಿತಿಗಳ ಮುಂದೆ ಸಮರ್ಥವಾಗಿ ಕಾರ್ಮಿಕರ ಬೇಡಿಕೆಗಳ ಸಲುವಾಗಿಯೂ ಹಕ್ಕುಗಳ ಸಲುವಾಗಿಯೂ ವಾಗ್ವಾದ ನಡೆಸಿದವರು ಕಾ|| ಮೂರ್ತಿಯವರು. ಕಮ್ಯುನಿಸ್ಟ್ ಪಕ್ಷ ಹೋಳಾದಾಗ ಸಿ.ಪಿ.ಐ.ಯಲ್ಲಿ ಉಳಿದಿದ್ದ ನಾರಾಯಣಮೂರ್ತಿಯವರು ಎ.ಐ.ಟಿ.ಯು.ಸಿ.ಗೆ ಸೇರಿದ್ದ ಹಲವಾರು ಕಾರ್ಮಿಕ ಸಂಘಗಳ ಹೋರಾಟಗಳಿಗೆ ನೇತೃತ್ವ ನೀಡಿದರು. ಅನೇಕ ಕಾರ್ಮಿಕ ಸಂಘಟನೆಗಳ ಅಧ್ಯಕ್ಷರಾಗಿಯೂ, ಕಾನೂನು ಸಲಹೆಗಾರರಾಗಿಯೂ, ವಕ್ತಾರರಾಗಿಯೂ ಸಮರ್ಥ ಸೇವೆ ಸಲ್ಲಿಸಿರುವುದನ್ನು ನಾನಿಂದು ಸ್ಮರಿಸುತ್ತೇನೆ. ಅವರ ನಿಧನದಿಂದ ಕಾರ್ಮಿಕ ವರ್ಗಕ್ಕೆ ಮಾತ್ರವಲ್ಲ, ಜಿಲ್ಲೆಯ ರೈತ ಚಳುವಳಿಗಳಿಗೂ ತುಂಬಲಾಗದ ನಷ್ಟ ಆಗಿದೆ.

ಇತ್ತೀಚೆಗಿನ ದಿನಗಳಲ್ಲಿ ಕಿರುಹೊತ್ತಿಗೆ ಮೂಲಕ ಹಾಗೂ ನಿಯತಕಾಲಿಕೆಗಳ ಮೂಲಕ ಹಿಂದುತ್ವವಾದಿಗಳ, ಕೋಮುವಾದಿಗಳ, ಕೋಮುಗಲಭೆಗಳನ್ನು ಹುಟ್ಟುಹಾಕುವವರ ವಿರುದ್ಧ ಜನ ಜಾಗೃತಿ ಮೂಡಿಸುವುದಕ್ಕೂ ಕಾ|| ಮೂರ್ತಿಯವರು ಹೆಚ್ಚಿನ ಗಮನ ಹರಿಸಿದ್ದರು. ಅವರು ನಿಸ್ವಾರ್ಥ ನಾಯಕರು, ಸ್ವಪ್ರತಿಷ್ಠೆ ಬಯಸದವರು. ಕಮ್ಯುನಿಸ್ಟ್ ಪಕ್ಷದ ನಿಷ್ಠಾವಂತ ನಾಯಕರಾಗಿ ಕೊನೆ ಉಸಿರಿರುವ ತನಕ ದುಡಿದವರು. ಅವರಿಗೆ ನಮ್ಮ ಕೆಂಪು ನಮನಗಳು ಸಲ್ಲುತ್ತವೆ.

ಬಿ. ವಿ. ಕಕ್ಕಿಲ್ಲಾಯ
'ಗಂಗಾ', ನಂ. ೩ - ೧೭/೪, ಸೈಮನ್ ರಸ್ತೆ, ಕಂಕನಾಡಿ
ಮಂಗಳೂರು - ೫೭೫ ೦೦೨

# ಶರಣರ ಮತ್ತು ಮರಾಠಿ ಸಂತರ ಚಳುವಳಿಗಳ ಪ್ರಸ್ತುತತೆ

ವಿಜಯ ಆರ್. ಕಾಂಬಳೆ

**ನಮ್ಮ ಇಂದಿನ ಸಂವಿಧಾನಕ್ಕೆ ಸಂವಾದಿಯಾಗಬಲ್ಲ ಅದೆಷ್ಟೋ ತತ್ವಗಳು ವಿಚಾರಗಳು ಶರಣರ ವಚನಗಳಲ್ಲಿ ಅವರ ಅಂದಿನ ಕ್ರಾಂತಿಯ ಇತಿಹಾಸದಲ್ಲಿ ನಿಚ್ಚಳವಾಗಿ ಕಂಡುಬರುತ್ತವೆ. ೮೦೦ ವರ್ಷ ಗತಿಸಿಹೋಗಿದ್ದರೂ ಅವು ಇಂದಿನ ನಮ್ಮ ಸಂವಿಧಾನದ ತತ್ವಗಳಿಗೆ ಸಮನಾಗಿ ಸ್ಪಂದಿಸುವಲ್ಲಿ ಶರಣರ ಆ ತತ್ವಗಳ ಸಾರ್ವಕಾಲಿಕತೆ ಎದ್ದುಕಾಣುತ್ತದೆ. ಅಂತೆಯೇ ಶರಣರ ವಿಚಾರಗಳು, ಅವರು ಅಂದು ಮಾಡಿದ ಕಾರ್ಯಗಳು, ಅಂದಿಗೂ ಇಂದಿಗೂ ಮುಂದೆಯೂ ಪ್ರಸ್ತುತ.**



ವೇದದ ಕರ್ಮಕಾಂಡವನ್ನು ಶರಣರು ಪ್ರಶ್ನಿಸಿದರು. ಅದರ ವಿರುದ್ಧವಾಗಿ ಪ್ರತಿಭಟಿಸಿದರು. ಅವರು ಹೆಚ್ಚು ಮಹತ್ವವನ್ನು ನೀಡಿದ್ದು ಜ್ಞಾನಕಾಂಡಕ್ಕೆ, ಉಪನಿಷತ್ತುಗಳ ದರ್ಶನಕ್ಕೆ. ವೇದವಲ್ಲಿ ಬಂದಿರುವ ಯಜ್ಞಯಾಗಾದಿಗಳ ಆಚರಣೆಯನ್ನು ಕಟುವಾಗಿ ಟೀಕಿಸುತ್ತಾರೆ. ಯಜ್ಞಯಾಗಾದಿಗಳಲ್ಲಿ ಪ್ರಾಣಿಯನ್ನು ಬಲಿಕೊಡುವುದೇ ಹಿಂಸೆಯಿಂದ ಕೂಡಿದುದಾಗಿದೆ; ಇಂಥ ಪ್ರವೃತ್ತಿಯನ್ನು ಅವರು ಖಂಡಿಸಿದರು.

*ದಯವಿಲ್ಲದ ಧರ್ಮವದೇವುದಯ್ಯ ?*
*ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ*
*ದಯವೇ ಧರ್ಮದ ಮೂಲವಯ್ಯ*
*ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ* (ಬಸವಣ್ಣ)

ಈ ಮೊದಲು ಬುದ್ಧನ ಹೃದಯವು ಕೂಡ ಹೀಗೆ ಮಿಡಿದದ್ದನ್ನು ಕಾಣುತ್ತೇವೆ. ಅವನೂ ಸಹ ಯಜ್ಞಯಾಗಾದಿಗಳನ್ನು ಪ್ರತಿಭಟಿಸಿ ನಿಂತಿದ್ದ. ಬಸವಣ್ಣನ ನೇತೃತ್ವದಲ್ಲಿ ಶರಣರೂ ಅದನ್ನು ಅಂದಿನಂತೆಯೇ ವಿರೋಧಿಸಿದರು. ಅಶ್ವಮೇಧ ಮೊದಲಾದ ಯಾಗಗಳು, ಹೋಮ ನೇಮಗಳು, ಇವೆಲ್ಲವುಗಳಿಗಿಂತ ಶರಣರ ನುಡಿಗಳು ಅಧಿಕ ಮಹತ್ವ ಪಡೆದವು. 'ಹಾಲ ತೊರೆಗೆ ಬೆಲ್ಲದಂತಹ ಕೆಸರು, ಸಕ್ಕರೆಯಂತಹ ಮರಳು ತವರಾಜದಂತಹ ತೆರೆನೊರೆಗಳು, ಇಂತಪ್ಪ ಆದ್ಯರ ವಚನವಿರಲು' ಇವುಗಳನ್ನು ಬಿಟ್ಟು ಮತ್ತೊಂದನ್ನು ಬಯಸುವುದು ಬಾವಿಯ ತೋಡಿ ಉಪ್ಪು ನೀರನ್ನು ಸವಿದಂತೆ ಆಗುತ್ತದೆ ಎಂದು ಶರಣರು ತಿಳಿಸುತ್ತಾರೆ. ಹಾಗೆಯೇ ಮರಾಠಿಯ ಸಂತ ರಾಮದಾಸನು ಕೂಡ

*ಸುಖಾನಂದಕಾರೀ ನಿವಾರೀ ಭಯಾತೇ।*
*ಜಗೀ ಭಕ್ತಿಭಾವೇ ಭಜಾವೇ ತಯಾತೇ॥*
*ವಿವೇಕೇ ತಜಾವಾ ಅನಾಚಾರ ಹೇವಾ।*
*ಪ್ರಭಾತೇ ಮನೀ ರಾಮ ಚಿಂತೀತಜಾವಾ॥* (ರಾಮದಾಸ)

ಅಂದರೆ ಭಗವಂತನ ಅಸ್ತಿತ್ವದ ಭಾವನೆ ನಿರ್ಮಾಣವಾಗುವುದಕ್ಕಾಗಿ ಹಾಗೂ ಅದು ಮನಸ್ಸಿನಲ್ಲಿ ಸ್ಥಿರವಾಗುವುದಕ್ಕಾಗಿ ಅಂತಃಕರಣವು ನಿರ್ಮಲವಾಗಬೇಕಾಗುತ್ತದೆ. ದ್ವೇಷ-ಮತ್ಸರಗಳು ಆನಂದವನ್ನು ನಾಶಮಾಡುತ್ತವೆ. ಅವೆಲ್ಲವುಗಳನ್ನು ಇಲ್ಲದಂತೆ ಮಾಡುವುದಕ್ಕಾಗಿ ವಿವೇಕದಂಥ ಬೇರೆ ಮಾರ್ಗವಿಲ್ಲ. ರಾಮದಾಸನಂತೆ ಇನ್ನುಳಿದ ಸಂತರೂ ಕೂಡ ದಯೆ, ಅಂತಃಕರಣ, ವಿವೇಕದ ಬಗ್ಗೆ ಮಾರ್ಮಿಕವಾಗಿ ತಿಳಿಸಿದ್ದಾರೆ. ಒಂದು ಸಲ ಸಂತ ಗೋರಾ ಕುಂಬಾರನು ಕೆಲಸದ ನಂತರ ಉಣ್ಣಬೇಕಾದ ಬುತ್ತಿಯನ್ನು ಒಂದು ನಾಯಿ ಬಂದು ಬಾಯಿಯಲ್ಲಿ ಹಿಡಿದುಕೊಂಡು ಓಡುತ್ತದೆ. ಆದರೆ ಗೋರಾ ಕುಂಬಾರನು ಮುಂದೆ ಹೋಗಿ ನಾಯಿಯನ್ನು ನಿಲ್ಲಿಸಿ ಅದಕ್ಕೆ ಬುತ್ತಿಯನ್ನು ಬಿಚ್ಚಿ ತಿನ್ನಿಸುತ್ತಾನೆ. ಅಲ್ಲಿಯೇ ಇದ್ದ ನೀರನ್ನು ಸಹ ತಂದು ಅದಕ್ಕೆ ಕುಡಿಸುತ್ತಾನೆ. ಆದರೆ ನಮ್ಮಲ್ಲಿಯ ಮನಸ್ಸುಗಳು ಇಂದು ಎಷ್ಟೊಂದು ಕಠೋರವಾಗುತ್ತಿವೆಯೆಂದರೆ ಮನುಷ್ಯ ಮನುಷ್ಯನನ್ನೇ ನುಂಗುತ್ತಿದ್ದಾನೆ. ನರಮಾನವನ ಪಾಡೇ ಈ ರೀತಿಯಾಗಿರುವಾಗ ಇನ್ನು ಪ್ರಾಣಿ ದಯೆ ಎಲ್ಲಿಯದು ? ದಯವಿಲ್ಲದೆ ಹಿಂಸೆಗೆ ಇಳಿದಿರುವ ಮಾನವನ ಕೆಲವು ಘಟನೆಗಳನ್ನು ನೆನೆಸಿಕೊಳ್ಳುವುದಾದರೆ, ಗುಜರಾತಿನ ಬೆಸ್ಟ್ ಬೇಕರಿ ಪ್ರಕರಣ, ಅಮೆರಿಕಾದ ವ್ಯಾಪಾರಿ ಕೇಂದ್ರಗಳ ಮೇಲಿನ ದಾಳಿ, ಮುಂಬೈಯಲ್ಲಿನ ಬಾಂಬುಗಳ ಸರಣಿ ಸ್ಫೋಟ, ಕಂಬಾಲಪಲ್ಲಿಯ ಸಜೀವದಹನ, ಇರಾಕಿನಲ್ಲಿ ನರಮೇಧ, ಈ ರೀತಿಯ ಇನ್ನೂ ಹತ್ತು ಹಲವಾರು ಹಿಂಸಾಕೃತ್ಯಗಳು ಉದಾಹರಣೆಯಾಗಿ ನಮ್ಮೆದುರಿಗೆ ನಿಲ್ಲುತ್ತವೆ. 'ದಯೆ'ಯ ಪ್ರಜ್ಞೆಯನ್ನು ಮನುಷ್ಯನಲ್ಲಿ ಮೂಡಿಸುತ್ತಿರುವುದರಿಂದ ವಚನಸಾಹಿತ್ಯ ಮತ್ತು ಸಂತಸಾಹಿತ್ಯ ಇಂದಿಗೂ ಅವಶ್ಯವಾಗಿದೆ.

**ಅಸ್ಪೃಶ್ಯತೆಯ ನಿವಾರಣೆ**

'ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ' ಎಂದು ಕೃಷ್ಣನು ಗೀತೆಯಲ್ಲಿ ಹೇಳಿದ ಆದರ್ಶವು ಯಾವಾಗಲೋ ಮಾಯವಾಗಿ, ಹುಟ್ಟಿನಿಂದ ಉತ್ತಮ ರೆನಿಸಿಕೊಂಡವರು ಧರ್ಮವು ತಮ್ಮದೇ ಆಸ್ತಿ ಎಂದು ತಿಳಿದು ಸ್ವಾರ್ಥಸಾಧನೆಗೆ ಬಳಸಿಕೊಂಡರು. ಇದನ್ನು ಕಠೋರವಾಗಿ ಖಂಡಿಸಿ ತಮ್ಮ ಸಾಧನೆಯ ಶಕ್ತಿಯಿಂದ ಧರ್ಮದ ಸತ್ಯ ತಿರುಳನ್ನು ಶರಣರು, ಸಂತರು ತೋರಿಸಿಕೊಟ್ಟರು.

*ವೇದವನೋದಿ ವೇದಾಧ್ಯಯನ ಮಾಡಿಸಿದರೇನು ?*
*ಬ್ರಾಹ್ಮಣನಾಗಬಲ್ಲನೇ ?*
*ಬ್ರಹ್ಮವೇತ್ತುಗಳ ಶುಕ್ಲ ಶೋಣಿತದಿಂದ ಜನಿಸಿದರೇನು ?*
*ಬ್ರಾಹ್ಮಣನಾಗಬಲ್ಲನೇ ?*
*ಯಜನಾದ್ಯಷ್ಟ ಷಟ್ಕರ್ಮಂಗಳ ಬಿಡದೆ ಮಾಡಿದರೇನು ?*
*ಬ್ರಾಹ್ಮಣನಾಗಬಲ್ಲನೇ ?*
*'ಬ್ರಹ್ಮಜಾನಾತಿ ಬ್ರಾಹ್ಮಣ'ವೆಂಬ ವೇದವಾಕ್ಯವನರಿತು*
*ಬ್ರಹ್ಮೀಭೂತನಾದವನೇ ಬ್ರಾಹ್ಮಣ ನೋಡಾ*
*ಕಪಿಲಸಿದ್ಧ ಮಲ್ಲಿಕಾರ್ಜುನ* (ಸಿದ್ಧರಾಮ)

ಶರಣರಂತೆ ಸಂತರೂ ಸಹ ಅಸ್ಪೃಶ್ಯತೆಯ ನಿವಾರಣೆಗಾಗಿ ಸಾಕಷ್ಟು ಶ್ರಮಿಸಿದರು.

ಉದಾಹರಣೆಗೆ, ನಿವೃತ್ತಿ ಜ್ಞಾನದೇವ, ಸೋಪಾನ ಮುಕ್ತಾಬಾಯಿ. ''ಮಾದಾರ ಚೆನ್ನಯ್ಯನ ಮನೆಯ ಮಗನು ನಾನು'' ಎಂದು ಬಸವಣ್ಣ ಹೇಳಿಕೊಂಡಂತೆ, ಸಂತ ನಾಮದೇವನೂ ಸಹ ''ಸಿಂಪಿಯ ಜಾತಿಯವ ನಾನು'' ಎಂದು ಹೇಳಿಕೊಂಡದ್ದು ಜಾತಿಭೇದ ಭಾವವನ್ನು ನಿವಾರಿಸಲಿಕ್ಕೆಂದು ತಿಳಿಯುವುದು. ಅಸ್ಪೃಶ್ಯತೆಯ ನಿವಾರಣೆಗಾಗಿ ಅವರು ತಮ್ಮನ್ನು ತಾವು ಕೆಳಜಾತಿಗೆ ಸಮೀಕರಿಸಿಕೊಂಡದ್ದು ಅರ್ಥಪೂರ್ಣವೂ, ಪ್ರಸ್ತುತವೂ ಆಗಿದೆ.

**ಜಾತಿಮುಕ್ತ ಸಮಾಜ ನಿರ್ಮಿಸುವುದು**

ನೂರಾರು ಜಾತಿ ಭೇದಗಳು, ಅವುಗಳಲ್ಲಿಯ ಮೇಲು ಕೀಳುಗಳೆಂಬ ಕಚ್ಚಾಟಗಳು ಇವೆಲ್ಲವುಗಳಿಂದ ಶರಣರು ರೋಸಿಹೋಗಿದ್ದರು. ಮಾನವ ವರ್ಗದಲ್ಲಿ ಅವರು ಎರಡೇ ಎರಡು ಕುಲಗಳೆಂದು ಭಾವಿಸಿದ್ದರು. ಅವು ಗುಣದಿಂದ ನೀಚ, ಶ್ರೇಷ್ಠ ಎಂಬುವು ಗಳಾಗಿದ್ದವು. 'ಜಾತಿ ಗೋತ್ರಗಳೊಳಗೆ ನೀಚ, ಶ್ರೇಷ್ಠವೆಂಬ ಎರಡು ಕುಲವಲ್ಲದೆ ಹೊಲೆ ಹದಿನೆಂಟು ಜಾತಿ ಎಂಬ ಕುಲವಿಲ್ಲ' ಎಂದು ಮಾದಾರ ಚೆನ್ನಯ್ಯ ಹೇಳುತ್ತಾನೆ.

*ಶುಕ್ಲ ಶೋಣಿತ ಮಜ್ಜೆಮಾಂಸ ಹಸಿವು ತೃಷೆ,*
*ವ್ಯಸನ ವಿಷಯಾದಿಗಳೊಂದೇ ಭೇದ,*
*ಮಾಡುವ ಕೃಷಿ ವ್ಯವಸಾಯ ಹಲವು ಅಲ್ಲದೆ*
*ತೋರುವ ತೋರಿಕೆ ಅರಿವ ಅತ್ಮನೊಂದೇ ಭೇದ.*
*ಆವ ಕುಲವಾದಡೂ ಅರಿದಲ್ಲಿಯೇ ಪರತತ್ವ ಭಾವಿ*
*ಮರೆದಲ್ಲಿಯೇ ಮಲ ಮಾಯಾ ಸಂಬಂಧಿ...* (ಚೆನ್ನಬಸವಣ್ಣ)

ಸಮಾಜದ ಹಲವಾರು ಮೌಢ್ಯಗಳಲ್ಲಿ ಅಂದಿನ ಕಾಲದ ಸಮಾಜದಲ್ಲಿ ಆಳವಾಗಿ ಬೇರೂರಿದ್ದ ಜಾತಿಯು ಕೂಡ ಒಂದು ಕಠೋರವಾದ ಮೌಢ್ಯವಾಗಿತ್ತು. ಶರಣರಂತೆ ಸಂತರಿಗೆ ಸಹ ಸಮಾಜದಿಂದ ಅದನ್ನು ಮುಕ್ತಗೊಳಿಸುವುದು ಮುಖ್ಯ ಧ್ಯೇಯವಾಗಿತ್ತು. ಸಂತ ನಾಮದೇವನು ಜಾತಿಯ ಮೂಲಕ ಮನುಷ್ಯನನ್ನು ಗುರುತಿಸಬಾರದೆಂದು ಹೇಳುವ ಸಂದರ್ಭದಲ್ಲಿ ಅವನ ಅಭಂಗದ ಒಂದು ಉದಾಹರಣೆಯನ್ನು ಇಲ್ಲಿ ನೋಡಬಹುದು :

*ಹೊಲಸು ನೆಲದಲ್ಲಿ ಬೆಳೆದ ತುಳಸಿ ಮೈಲಿಗೆಯಲ್ಲ*
*ಕಾಗೆಮಲದಲ್ಲಿ ಬೆಳೆದಶ್ವತ್ಥ ಹೊಲೆಯಲ್ಲ*
*ದಾಸಿಪುತ್ರ ನೃಪನಾದರೆ ಹಿಂದಿನದ ನೆನೆಯುವರೆ ?*
*ನಾಮಾ ಹೇಳುವ ಜಾತಿ ನೆನೆಯದಿರಿ ನಾ ಸಿಂಪಿ*
(ನಾಮದೇವ)

**ಕಾಯಕ ನಿಷ್ಠೆ**

*ಕಾಯಕದಲ್ಲಿ ನಿರತನಾದಡೆ*
*ಗುರು ದರುಶನವಾದರೂ ಮರೆಯಬೇಕು,*
*ಲಿಂಗ ಪೂಜೆಯಾದಡೂ ಮರೆಯಬೇಕು,*
*ಕಾಯಕವೇ ಕೈಲಾಸವಾದ ಕಾರಣ*
*ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು* (ಆಯ್ದಕ್ಕಿ ಮಾರಯ್ಯ)

ಎಂದು ಶರಣರು ಕಾಯಕದ ಮಹತ್ವವನ್ನು ಸಾರಿದ್ದಾರೆ.

**ದಾಸೋಹ ಮನೋಭಾವ**

ದಾಸೋಹವೆಂದರೆ ನಮ್ಮ ದುಡಿತದ ಫಲವಾಗಿ ಬಂದ ಹೆಚ್ಚಿನ ಲಾಭವನ್ನು ವಿನಮ್ರಭಾವದಿಂದ ಸಮಾಜಕ್ಕೆ ಸಮರ್ಪಿಸುವದಾಗಿದೆ. ಸಮಾಜದ ಸುಧಾರಣೆಗೆ, ಸಾರ್ವಜನಿಕ ಇತರ ಕೆಲಸಗಳಿಗೆ ಉದಾರವಾಗಿ ತನು, ಮನ, ಧನಗಳಿಂದ ಸಮರ್ಪಿಸುವ ಪ್ರತಿಯೊಂದು ಕೆಲಸವನ್ನು ದಾಸೋಹವೆಂದು ಕರೆಯುತ್ತೇವೆ.

*ತನುವಿಡಿದು ದಾಸೋಹ ಮಾಡಿ*
*ಮನವಿಡಿದು ದಾಸೋಹ ಮಾಡಿ*
*ಧನವಿಡಿದು ದಾಸೋಹ ಮಾಡಿ...* (ಅಕ್ಕಮಹಾದೇವಿ)

ಎಂದು ಅಕ್ಕಮಹಾದೇವಿಯು ನಾವು ಮಾಡಿದ ದಾಸೋಹವು ತನು, ಮನ, ಧನದಿಂದ ಕೂಡಿದುದಾಗಿರಬೇಕೆನ್ನುತ್ತಾಳೆ.

ಶರಣರಂತೆ ಸಂತರೂ ಸಹ ದಾಸೋಹ ಮನೋಭಾವವನ್ನು ಉಳ್ಳವರಾಗಿದ್ದರು. ಪ್ರತಿಯೊಬ್ಬ ಸಂತರೂ ತಮ್ಮ ಮನೆಯಲ್ಲಿ ಅಡುಗೆಯನ್ನು ಮಾಡಿಸಿ ಸಂತರಿಗೆ, ಭಕ್ತಾದಿಗಳಿಗೆ ನಿರ್ಮಲ ಮನಸ್ಸಿನಿಂದ ಊಟಕ್ಕೆ ಹಾಕುತ್ತಿದ್ದರು. ಇಂದಿಗೂ ಸಹ ವಾರಕರಿ ಸಂತರಲ್ಲಿ ಈ ದಾಸೋಹ ಪದ್ಧತಿಯನ್ನು ಕಾಣುತ್ತೇವೆ. ವಾರಕರಿ ಸಂತರು ಪಂಢರಪುರ ಯಾತ್ರೆಗೆ ಹೋಗುವಾಗ ದಾರಿಯಲ್ಲಿ ಭಕ್ತಾದಿಗಳು ಅವರಿಗಾಗಿ ಅಡುಗೆಯನ್ನು ಮಾಡಿ, ಅವರಿಗೆ ಊಟ ಬಡಿಸಿ, ಅವರನ್ನು ಸಂತೃಪ್ತಿಯಿಂದ ಯಾತ್ರೆಗೆ ಕಳುಹಿಸಿಕೊಡುತ್ತಾರೆ.

ಅಕ್ಕಮಹಾದೇವಿ

**ಆರ್ಥಿಕ ಅಸಮಾನತೆ**

ತಗ್ಗು ಇದ್ದಲ್ಲಿ ನೀರು ಸಂಗ್ರಹವಾಗುವಂತೆ ಯಾರು ಆರ್ಥಿಕತೆಯಿಂದ ಸಬಲರಾಗಿ ಮುಂದುವರೆದಿದ್ದಾರೋ ಮತ್ತೆ ಅವರೇ ಮುಂದುವರೆಯುತ್ತಿದ್ದಾರೆ. ಮತ್ತು ಯಾರು ಆರ್ಥಿಕತೆಯಿಂದ ದುರ್ಬಲರಾಗಿರುವರೋ ಅವರು ಹಾಗೇ ದುರ್ಬಲರಾಗಿ ತಿನ್ನಲಿಕ್ಕೆ ಅನ್ನವಿಲ್ಲದೆ, ಇರಲಿಕ್ಕೆ ಮನೆಯಿಲ್ಲದೆ, ತೊಡಲಿಕ್ಕೆ ಬಟ್ಟೆಯಿಲ್ಲದೆ ನಿರ್ಗತಿಕರಾಗಿದ್ದಾರೆ. ಇಂಥ ಅಸಮಾನತೆಯನ್ನು ಹೋಗಲಾಡಿಸಬೇಕಾದರೆ ಶರಣರು ಹಾಕಿಕೊಟ್ಟ ದಾರಿಯನ್ನು ಕ್ರಮಿಸುವುದು ಇಂದು ಬಹಳ ಮುಖ್ಯವಾಗಿದೆ. ನುಲಿಯ ಚಂದಯ್ಯನ ವಚನವೊಂದು ಆರ್ಥಿಕ ಅಸಮಾನತೆಯನ್ನು ಹಾಗೂ ಕಾಯಕದ ಮಹತ್ವವನ್ನು ಎತ್ತಿ ತೋರಿಸುತ್ತದೆ.

*ಸತ್ಯ ಶುದ್ಧ ಕಾಯಕದಲ್ಲಿ ಚಿತ್ತ*
*ವಿಚ್ಛಂದವಾಗಿರಬೇಕು*
*ನೇಮದ ಕೂಲಿ ಅಂದಿನ*
*ನಿತ್ಯ ಕಾಯಕದಲ್ಲಿ ಸಂದಿರಬೇಕು.*
*ನೇಮದ ಕೂಲಿಯ ಬಿಟ್ಟು*
*ಹೇಮದಾಸೆಗೆ ಕಾಮಿಸಿ*
*ದ್ರವ್ಯವ ಹಿಡಿದರೆ*
*ತಾ ಮಾಡುವ ಸೇವೆ ನಷ್ಟವಯ್ಯ* (ನುಲಿಯ ಚಂದಯ್ಯ)

ಜೀವನದಲ್ಲಿ ಎಲ್ಲರೂ ಕಾಯಕ ಮಾಡಬೇಕು, ನಾವು ಮಾಡುವ ಕಾಯಕಕ್ಕಷ್ಟೇ ಫಲವನ್ನು ನಿರೀಕ್ಷಿಸಬೇಕೆನ್ನುವುದು ಈ ವಚನದ ಧ್ವನಿಯಾಗಿದೆ. ಮಾರಯ್ಯ ತನಗೆ ಅಗತ್ಯವಾದುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಅಕ್ಕಿಯನ್ನು ಆಯ್ದು ಕಟ್ಟಿಕೊಂಡು ಬಂದಿರುತ್ತಾನೆ. ಆ ವೇಳೆಯಲ್ಲಿ ಹೆಂಡತಿ ಲಕ್ಕಮ್ಮ ಅದನ್ನು ನೋಡಿ ಇಷ್ಟೊಂದು ಅಕ್ಕಿಯನ್ನು ಸಂಗ್ರಹಿಸುವುದು ಉಚಿತವಲ್ಲವೆಂದು ತನ್ನೊಂದು ವಚನದಲ್ಲಿ ತಿಳಿಸುತ್ತಾಳೆ.

ತುಕಾರಾಮನ ಒಂದು ಅಭಂಗದಂತೆ, ಈ ಜಗತ್ತಿನ ಪ್ರತಿಯೊಂದು ಬಂಡವಾಳಕ್ಕೆ ವಿಠ್ಠಲನೊಬ್ಬನೇ ಕಾರಣೀ ಪುರುಷನಾಗಿದ್ದಾನೆ. ಅದಕ್ಕಾಗಿ ಬಂಡವಾಳದ ಆಸೆಯನ್ನು ತೊರೆದು ಯಾವಾಗಲೂ ವಾಣಿಯಿಂದ 'ವಿಠ್ಠಲ ವಿಠ್ಠಲ' ಅನ್ನಲು ತಿಳಿಸುತ್ತಾನೆ. ಸಂತ ರಾಮದಾಸನ ಅಭಂಗವೊಂದು ಈ ಸಾರವನ್ನೇ ವ್ಯಕ್ತಪಡಿಸುತ್ತದೆ :

*ನಕೋ ರೇ ಮನಾ ದ್ರವ್ಯ ತೇ ಪೂಢಿಲಾಚೆ।*
*ಅತಿ ಸ್ವಾರ್ಥಬುದ್ಧೀನ ರೆ ಪಾಪ ಸಾಚೆ।*
*ಘಡೆ ಭೋಗಣೆ ಪಾಪ ತೇ ಕರ್ಮ ಖೋಟೆ।*
*ನ ಹೋತಾ ಮನಾಸಾರಿಖೆ ದುಃಖ ಮೋಠೆ॥* (ರಾಮದಾಸ)

ನಮಗಿಂತ ಮುಂಚೆ ಯಾರು ಸಂಪತ್ತನ್ನು ಗಳಿಸಿ ಇಟ್ಟಿರುತ್ತಾರೋ ಅವರ ಸಂಪತ್ತಿನ ಮೇಲೆ ಆಸೆ ಪಡಬಾರದೆಂದು ರಾಮದಾಸ ತಿಳಿಸುತ್ತಾನೆ. ಮತ್ತು ಎರಡನೆಯವರ ದ್ರವ್ಯವೂ ನಮಗೆ ಪುಕ್ಕಟ್ಟೆಯಾಗಿ ದೊರೆಯಲಿ ಎಂಬುದು ನೀಚತನ ಬುದ್ಧಿಯಾಗಿದೆ. ಇದು ಪಾಪಕ್ಕೆ ಗುರಿಯಾಗುವ ದಾರಿಯಾಗಿದೆ. ಅಷ್ಟೇ ಅಲ್ಲದೆ ಅಂಥ ಸ್ವಾರ್ಥಬುದ್ಧಿಯಿಂದ ಕೆಟ್ಟಕರ್ಮವನ್ನೂ ಮಾಡಿದರೆ ಅಂಥವರಿಂದ ಭಗವಂತನು ದೂರವಾಗುತ್ತಾನೆಂದು ತಿಳಿಸುತ್ತಾನೆ.

*ಮೊಲೆ ಮುಡಿ ಬಂದರೆ ಹೆಣ್ಣೆಂಬರು*
*ಗಡ್ಡ ಮೀಸೆ ಬಂದರೆ ಗಂಡೆಂಬರು*
*ನಡುವೆ ಸುಳಿದಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ*
*ಕಾಣಾ ರಾಮನಾಥ* (ದೇವರ ದಾಸಿಮಯ್ಯ)

ಎಂದು ದೇವರ ದಾಸಿಮಯ್ಯನು ಸ್ತ್ರೀ ಪುರುಷರಲ್ಲಿ ಯಾವುದೇ ಭೇದವಿಲ್ಲವೆನ್ನುತ್ತಾನೆ. ಸ್ತ್ರೀ ಪುರುಷರಿಬ್ಬರೂ ಆತ್ಮಸಾಕ್ಷಾತ್ಕಾರದ ಗುರಿಯನ್ನು ತಲುಪುವಲ್ಲಿ ಸಮಾನವಾದ ಅಧಿಕಾರವನ್ನು ಪಡೆದವರಾಗಿದ್ದಾರೆ. ಇವರಿಬ್ಬರ ಜೀವಿತದ ಕೊನೆಯ ಗುರಿಯೂ ಸಹ ಅದೇ ಆಗಿರುತ್ತದೆ. ಸ್ತ್ರೀಯನ್ನು ಅಸ್ಪೃಶ್ಯರಂತೆ ಕಾಣುತ್ತಿದ್ದ ಸಂದರ್ಭದಲ್ಲಿ ಶರಣರು ಸ್ತ್ರೀಯನ್ನು ಕಂಡ ರೀತಿ ಉದಾತ್ತವಾದುದು, ಆದರ್ಶಪ್ರಾಯವಾದುದು. ಅವರಿಗೆ ಹೆಣ್ಣು ಮಾಯೆಯಾಗಿ ಕಾಣಲಿಲ್ಲ; ಆದಿಶಕ್ತಿಯಾಗಿ, ಜಗಜ್ಜನನಿಯಾಗಿ ಗೋಚರಿಸಿದಳು. ನೋಡುವ

ದೃಷ್ಟಿದೋಷದಿಂದ ಸ್ತ್ರೀಯು ಮಾಯೆಯಾಗಿ ಭೋಗವಸ್ತುವಾಗಿ ಕಾಣಬಹುದು. ದೃಷ್ಟಿ ಪರಿಶುದ್ಧವಾದರೆ ಆಕೆ ಆದಿಶಕ್ತಿಯಾಗಿ ಕಾಣಿಸುತ್ತಾಳೆ. ''ಹೆಣ್ಣು ಮಾಯೆಯಲ್ಲ... ಮನದ ಮುಂದಣ ಆಸೆಯೇ ಮಾಯೆ'' ಎಂದು ಪ್ರಭುದೇವನು ಸೂತ್ರ ರೂಪವಾಗಿ ಹೇಳಿದ ಮಾತನ್ನು ಈ ಸಂಬಂಧದಲ್ಲಿ ನೋಡಬಹುದು. ಮನದ ಮುಂದಿನ ಆಸೆಯನ್ನು ಹರಿದು ನೋಡಿದಾಗ ಆಕೆ ಭೋಗವಸ್ತುವು ಅಲ್ಲ, ಜೀವನರಂಗದಲ್ಲಿ ಸಮಸಮವಾಗಿ ನಿಂತು ಒಂದೇ ಗುರಿಯ ಕಡೆಗೆ ನಡೆಯಲು ಸಹಾಯಕವಾಗಬಲ್ಲವಳು.

ಮರಾಠಿ ವಾರಕರಿ ಮಹಿಳಾ ಸಂತರಾದ ಮುಕ್ತಾಬಾಯಿ, ಜನಾಬಾಯಿ, ಬಹಿನಾಬಾಯಿ, ಸಕುಬಾಯಿ, ಕಾನ್ಹೋಪಾತ್ರಾ ಇನ್ನೂ ಅನೇಕರು ಸಂತ ಚಳುವಳಿಯಲ್ಲಿ ಭಾಗವಹಿಸಿದ್ದರು. ಅಂದರೆ ಪುರುಷ ಸಂತರೊಡಗೂಡಿ ಮಹಿಳಾ ಸಂತರು ಇರುತ್ತಿದ್ದುದನ್ನು ಗಮನಿಸಿದಾಗ ಸಂತರೂ ಮಹಿಳೆಯರಿಗೆ ಸ್ಥಾನಮಾನವಿತ್ತುದು ಸ್ಪಷ್ಟವಾಗುತ್ತದೆ. ಚರ್ಚೆ, ಸಭೆ-ಸಮಾರಂಭಗಳಲ್ಲಿ ಅವರಿಗೂ ಸಮಾನ ಅವಕಾಶಗಳಿದ್ದವು.



ಭಕ್ತ ತುಕಾರಾಮ

**ಅತಿಥಿ ಸತ್ಕಾರ**

*ಏನು ಬಂದಿರಿ ಹದುಳವಿದ್ದಿರೆ ಎಂದೊಡೆ*
*ನಿಮ್ಮ ಮೈಸಿರಿ ಹಾರಿಹೋಹುದೇ ?*
*ಒಡನೆ ನುಡಿದರೆ ಸಿರಿ ಹೊಟ್ಟೆಯೊಡೆಯುವುದೇ ?*
*ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿದ್ದಡೆ*
*ಕೆಡಹಿ ಮೂಗ ಕೊಯ್ಯದೆ ಮಾಣ್ಬನೆ ಕೂಡಲಸಂಗಮದೇವ* (ಬಸವಣ್ಣ)

ಎಂದು ತಿಳಿಸಿದ ಬಸವಣ್ಣನವರು ಮನೆಗೆ ಬಂದ ಅತಿಥಿಗಳನ್ನು, ಬೀಗರು-ಬಿಜ್ಜರನ್ನು ನಿರ್ಲಕ್ಷಿಸುವವರನ್ನು ತಮ್ಮ ಚಾಟಿ ಏಟಿನಿಂದ ಎಚ್ಚರಿಸುತ್ತಾರೆ.

ಇಂದು ಮಾನವ ಸಂಬಂಧಗಳು ಕೃತಕವಾಗಿಬಿಟ್ಟಿವೆ. ಪ್ರೀತಿ, ಸತ್ಕಾರ ಎಲ್ಲವೂ ಅವನಿಂದ ಬಹುದೂರ ಹೋಗುತ್ತಿವೆ. ಎಷ್ಟು ಬೇಕು ಅಷ್ಟಕ್ಕಷ್ಟೇ ಮಾನವನ ಸಂಬಂಧಗಳು ಜರೂರಾಗಿವೆ. ಇಂದು ನಮ್ಮ ಜೊತೆಯಲ್ಲಿಯೇ ವಾಸಿಸುವವರ ಬಗ್ಗೆಯೇ ನಮಗೆ ತಿಳಿದಿರುವುದಿಲ್ಲ, ಇನ್ನು ಬಂದವರನ್ನು ಸತ್ಕರಿಸುವುದಂತೂ ದೂರವೇ ಉಳಿಯಿತು. ಮಾನವೀಯ ಸಂಬಂಧಕ್ಕಾಗಿ ಶರಣರ ಸಂತರ ಉಪದೇಶಗಳು ಇಂದು ಪ್ರಸ್ತುತವೆನಿಸುತ್ತವೆ.

**ದೇವಾಲಯ ಸಂಸ್ಕೃತಿಯ ಶೋಷಣೆಯ ವಿರೋಧ**

*ಉಳ್ಳವರು ಶಿವಾಲಯ ಮಾಡುವರು*
*ನಾನೇನು ಮಾಡುವೆ ಬಡವನಯ್ಯ*
*ಎನ್ನ ಕಾಲೇ ಕಂಬ ದೇಹವೇ ದೇಗುಲ*
*ಶಿರ ಹೊನ್ನ ಕಲಶವಯ್ಯ*
*ಕೂಡಲಸಂಗಮದೇವಾ ಕೇಳಯ್ಯ*
*ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ* (ಬಸವಣ್ಣ)

ಆಗಿನ ಕಾಲದಲ್ಲಿ ದೇವಾಲಯಗಳು, ಗುಡಿ ಗುಂಡಾರಗಳೆಲ್ಲವೂ ಶೋಷಣೆಯ ತಾಣಗಳಾಗಿದ್ದವು. ಅವೆಲ್ಲವುಗಳನ್ನು ಶರಣರು ತೀವ್ರವಾಗಿ ವಿರೋಧಿಸಿದರು. ಅದಕ್ಕಾಗಿ ಅವರೊಂದು ಪರ್ಯಾಯ ದಾರಿಯನ್ನು ಹುಡುಕಿದರು. ಅದೇನೆಂದರೆ, ದೇವರು ಮತ್ತು ಭಕ್ತರ ನಡುವೆ ನೇರವಾದ ಮತ್ತು ಶಾಶ್ವತವಾದ ಸಂಬಂಧವನ್ನು ಬೆಸೆಯುವ ಸಲುವಾಗಿ ಲಿಂಗ ದೀಕ್ಷೆ ನೀಡಿದರು. ಮತ್ತು ಆಗಿನ ಕಾಲದ ಶೋಷಣೆಯಿಂದ ಅವರನ್ನು ಮುಕ್ತಗೊಳಿಸಿದರು.

**ನಡೆನುಡಿಯಲ್ಲಿ ಸಾಮರಸ್ಯ**

*ಭಕ್ತಿ ಭಾಷೆಯ ನುಡಿಯ ನುಡಿವೆ, ನುಡಿದಂತೆ ನಡೆವೆ...*
*ಎನ್ನ ನಡೆ-ನುಡಿಯೊಳಗೆ ಒಂದು ಜವ ಕೊರತೆಯಾದರೆ*
*ಎನ್ನನದ್ದಿ ನೀನೆದ್ದು ಹೋಗು ಕೂಡಲಸಂಗಮದೇವ* (ಬಸವಣ್ಣ)

ಅದೇ ರೀತಿ

*ನುಡಿಯಲ್ಲಿ ಕರ್ಕಶವಿಲ್ಲದೆ, ನಡೆಯಲ್ಲಿ ಬೇಸರವೋಗದೆ*
*ಹಿಡಿದ ಭಕ್ತಿಯ ಕಡೆತನಕ ಬಿಡದೆ;*
*ಬಡತನ ಎಡರು ಸಂಕಟಗಳು ಬಂದಲ್ಲಿ*
*ಚಿಂತೆಯಿಂದ ಕಾಂತಿಗುಂದದೆ,*
*ಅಡಿಗಡಿಗೆ ಶಿವ ಶಿವ ಎಂಬ ನುಡಿಯ ಮರೆಯದಿರ್ಪ*
*ಸದ್ಭಕ್ತರಿಗೆ ಬೇಡಿದ ಸದವಿಯನೀವ ನಮ್ಮ*
*ಅಖಂಡೇಶ್ವರಾ* (ಷಣ್ಮುಖ ಶಿವಯೋಗಿ)

ಎನ್ನುವ ಮಾತುಗಳನ್ನು ನಡೆ-ನುಡಿಯ ಬಗ್ಗೆ ಶರಣರು ತಿಳಿಸಿದ್ದಾರೆ. ಶರಣರಂತೆ ಸಂತರೂ ಸಹ ನಡೆ-ನುಡಿಯ ಬಗ್ಗೆ ತಮ್ಮ ವಿಚಾರಗಳನ್ನು ಈ ರೀತಿ ತಿಳಿಸಿದ್ದಾರೆ :

*ಮನಾ ಪಾವಿಜೆ ಸರ್ವಹೀ ಸೂಖ ಜೇಥೆ।*

**ಸತ್ಯ**

*ದೇವಲೋಕ ಮರ್ತ್ಯಲೋಕವೆಂಬುದು*
*ಬೇರಿಲ್ಲ ಕಾಣಿರಣ್ಣ*
*ಸತ್ಯವ ನುಡಿವುದೇ ದೇವಲೋಕ।*
*ಮಿಥ್ಯವ ನುಡಿವುದೇ ಮರ್ತ್ಯಲೋಕ।*
*ಆಚಾರವೇ ಸ್ವರ್ಗ ಅನಾಚಾರವೇ ನರಕ।*
*ನೀವೇ ಪ್ರಮಾಣಂ ಕೂಡಲಸಂಗಮದೇವ* (ಬಸವಣ್ಣ)

ಇಂದು ಸತ್ಯವು ಕ್ವಚಿತ್ತಾಗಿಬಿಟ್ಟಿದೆ. ದಿನನಿತ್ಯ ನ್ಯಾಯಾಲಯಗಳಲ್ಲಿ ಎಷ್ಟೊಂದು ಸುಳ್ಳುಗಳೇ ಸತ್ಯವಾಗುತ್ತವೆ; ಸತ್ಯಗಳೇ ಕೆಲವೊಂದು ಬಾರಿ ಸುಳ್ಳಾಗುತ್ತವೆ. ಭಗವದ್ಗೀತೆಯ ಮೇಲೆ ಪ್ರಮಾಣ ಮಾಡಿಯೇ ಈ ರೀತಿ ನಡೆದುಕೊಳ್ಳಲಾಗುತ್ತದೆ. ಸುಳ್ಳು ನುಡಿಯುವುದನ್ನೇ ತೀವ್ರವಾಗಿ ವಿರೋಧಿಸಿದ ಶರಣರು ಇಂದು ಬಹಳ ಪ್ರಸ್ತುತವಾಗಿ ಕಂಡುಬರುತ್ತಾರೆ.

*ಜಗೀ ಸರ್ವಸೂಖಿ ಅಸಾ ಕೋಣ ಆಯೆ ?*
*ವಿಚಾರೆ ಮನಾ ತೂಚಿ ಶೋಧೂನಿ ಪಾಹೆ।*
*ಮನಾ ತಾಚಿರೆ ಪೂರ್ವಸಂಚಿತ ಕೇಲೆ।*
*ತಯಾಸಾರಿಖೆ ಭೋಗಣೆ ಪ್ರಾಪ್ತ ಝಾಲೆ॥* (ರಾಮದಾಸ)

ನೀನು ಸ್ವತಃ ವಿಚಾರಗಳ ಮೂಲಕ ಸೂಕ್ಷ್ಮವಾಗಿ ನಿರೀಕ್ಷಣೆ ಮಾಡು ಹಾಗೂ ಈ ಪ್ರಪಂಚದಲ್ಲಿ ಯಾವ ಮನುಷ್ಯನಾದರೂ ಸುಖಿಯಾಗಿರುವನೆ ಎಂಬುದನ್ನು ಶೋಧಿಸಿ ನೋಡೆಂದು ಸಂತ ರಾಮದಾಸನು ಮನುಷ್ಯನಿಗೆ ಬುದ್ಧಿ ಹೇಳುತ್ತಾನೆ.

**ಅಪಾರವಾದ ಮಾನವಪ್ರೇಮ**

*ಇವನಾರವ, ಇವನಾರವ, ಇವನಾರವ ಎಂದೆನಿಸದಿರಯ್ಯಾ*
*ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯಾ*
*ಕೂಡಲ ಸಂಗಮದೇವಾ ನಿಮ್ಮ ಮನೆಯ ಮಗನೆನಿಸಯ್ಯಾ* (ಬಸವಣ್ಣ)

ಬಸವಣ್ಣನ ಬಹಳ ಮೌಲಿಕವಾದ ವಚನದ ಈ ಮಾತುಗಳನ್ನು ಗಮನಿಸಬೇಕಾಗುತ್ತದೆ. ಯಾರೇ ಇರಲಿ ಇವನಾರು ? ಅವನಾರು ? ಎಂದು ಪ್ರಶ್ನಿಸಬಾರದು. ಅವನನ್ನು ತಮ್ಮೊಳಗೆ ಬರಮಾಡಿಕೊಂಡೂ ಸಕಲರೂ ಒಂದಾಗಿ ಬಾಳುವ ಶರಣರ ರೀತಿ ವಿಶ್ವಬಾಂಧವ್ಯದ ಮೂಲಮಂತ್ರವಾಗಿದೆ. ಹೀಗೆ ಉಪದೇಶಿಸಿದ ಶರಣರು ಅಂದಿನ ಉಚ್ಚವರ್ಣೀಯರಿಂದ ನಿರ್ಲಕ್ಷ್ಯಕ್ಕೊಳಗಾದ ಕೆಳಜಾತಿಯವರನ್ನು ತಮ್ಮ ಬಂಧು-ಬಾಂಧವರೆಂದು ಅಪ್ಪಿಕೊಂಡು ಬದುಕಿ ಬಾಳಿದ್ದು ಒಂದು ಅಪೂರ್ವ ಸಾಧನೆಯೆಂದೇ ಅರಿಯಬೇಕಾಗುತ್ತದೆ.

ಸಹಬಾಳ್ವೆ ಸಹೋದರತೆಯನ್ನು ಗಾಳಿಗೆ ತೂರಿ ಒಮ್ಮತವಿಲ್ಲದೆ ಯಾವಾಗಲೂ ಹೊಡೆದಾಡುವ ಅಂದಿನ ಸಂದರ್ಭವನ್ನು ಈ ರೀತಿ ಬಸವಣ್ಣನವರು ವಿಡಂಬಿಸಿದ್ದಾರೆ :

*ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವನು ?*
*ಕೋಳಿಯೊಂದು ಕುಟುಕ ಕಂಡರೆ ಕೂಗಿ ಕರೆಯದೆ ತನ್ನ ಕುಲವೆಲ್ಲವ ?*
*ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗೆ ಕೋಳಿಯಿಂದ ಕರಕಷ್ಟ!*
*ಕೂಡಲಸಂಗಮದೇವಾ* (ಬಸವಣ್ಣ)

''ಈ ರೀತಿ ನಮ್ಮ ಇಂದಿನ ಸಂವಿಧಾನಕ್ಕೆ ಸಂವಾದಿಯಾಗಬಲ್ಲ ಅದೆಷ್ಟೋ ತತ್ವಗಳು ವಿಚಾರಗಳು ಶರಣರ ವಚನಗಳಲ್ಲಿ ಅವರ ಅಂದಿನ ಕ್ರಾಂತಿಯ ಇತಿಹಾಸದಲ್ಲಿ ನಿಚ್ಚಳವಾಗಿ ಕಂಡುಬರುತ್ತವೆ. ೮೦೦ ವರ್ಷ ಗತಿಸಿಹೋಗಿದ್ದರೂ ಅವು ಇಂದಿನ ನಮ್ಮ ಸಂವಿಧಾನದ ತತ್ವಗಳಿಗೆ ಸಮನಾಗಿ ಸ್ಪಂದಿಸುವಲ್ಲಿ ಶರಣರ ಆ ತತ್ವಗಳ ಸಾರ್ವಕಾಲಿಕತೆ ಎದ್ದು ಕಾಣುತ್ತದೆ. ಅಂತೆಯೇ ಶರಣರ ವಿಚಾರಗಳು ಅವರು ಅಂದು ಮಾಡಿದ ಕಾರ್ಯಗಳು, ಅಂದಿಗೂ ಇಂದಿಗೂ ಮುಂದೆಯೂ ಪ್ರಸ್ತುತ'' ಎಂದು ಡಾ॥ ಬಸವರಾಜ ಸಾದರ ಅವರು ಹೇಳಿದ ಮಾತುಗಳು ಇಲ್ಲಿ ಪ್ರಸ್ತುತವಾಗಿವೆ.

ವಿಜಯ ಆರ್. ಕಾಂಬಳೆ
ಮಲಪ್ರಭಾ ವಸತಿ ನಿಲಯ, ರೂಂ. ನಂ. ೩೪, ಕ.ವಿ.ವಿ., ಧಾರವಾಡ - ೦೩



# ಓಟದ ಸ್ಪರ್ಧೆಯ ಮುಕ್ತಾಯ

ಕಳೆದ ತಿಂಗಳು ಐದೂ ಗ್ರಹಗಳು ಸಂಜೆ ನೋಡಲು ಸಿಕ್ಕಿದ್ದವು. ಈಗ ಈ ಗುಂಪಿನಿಂದ ಮಾಯವಾಗುವ ಮೊದಲ ಗ್ರಹ ಶನಿ ೪ರಂದು ಸೂರ್ಯನೊಡ ಗೂಡುವುದು. ತಾತ್ಪರ್ಯವೆಂದರೆ ಅದು ಈ ತಿಂಗಳು ನೋಡಲು ಸಿಗುವುದೇ ಇಲ್ಲ. ಆಕಾಶ ಶುಭ್ರವಾಗಿದ್ದು ಬೆಳಗಿನ ಜಾವ ತಾಳ್ಮೆಯಿಂದ ಕಾದರೆ ಶನಿ ಸೂರ್ಯನನ್ನು ದಾಟಿ ಬರುವುದನ್ನು ಗುರುತಿಸಬಹುದು. ೨೭ರಂದು ಬೆಳಗಿನ ಜಾವ ಪೂರ್ವ ದಿಕ್ಕಿನಲ್ಲಿ ರೇಖಾಚಂದ್ರನನ್ನು ಗುರುತಿಸಿ. ಅದರ ಪಕ್ಕ ಕಾಣುವ ಚುಕ್ಕೆಯೇ ಶನಿ.

ಶನಿಯ ಹೊರತು ಉಳಿದ ನಾಲ್ಕು ಗ್ರಹಗಳೂ ಸಂಜೆಯ ಆಕಾಶದಲ್ಲಿ ಇರುತ್ತವೆ. ಆದರೆ ಅವನ್ನು ಗುರುತಿಸಲು ಮೋಡವಿಲ್ಲದ ಶುಭ್ರ ಆಕಾಶ ಬೇಕು. ಗುರು ಗ್ರಹವನ್ನು ಸುಲಭವಾಗಿ ಹುಡುಕಬಹುದು. ಸುಮಾರು ಮಧ್ಯರಾತ್ರಿಯ ನಂತರವೂ ಕಾಣ ಸಿಗುವ ಈ ಗ್ರಹ ೮ರಂದು ಹಿನ್ನಡೆಯನ್ನು ಮುಗಿಸಿ ಧನು ರಾಶಿಯಿಂದ ಮುಂದಕ್ಕೆ ಹೊರಡುತ್ತದೆ. ಬರುವ ವರ್ಷ ಇದೇ ಹೊತ್ತಿಗೆ ಅದರ ಚಲನೆಯನ್ನು ಗುರುತಿಸಲು ಈಗಲೇ ಅದರ ಸ್ಥಾನವನ್ನು ಗುರುತುಮಾಡಿಕೊಳ್ಳಿ. ಆಕಾಶ ಶುಭ್ರ ವಾಗಿದ್ದರೆ ಗುರುಗ್ರಹದ ಆಸುಪಾಸನ್ನು ಮರೆಯದೆ ಗಮನಿಸಿ. ಅದು ನಮ್ಮ ಗೆಲಾಕ್ಸಿ ಆಕಾಶಗಂಗೆಯೊಳಗೆ ತೇಲುತ್ತಿರುವ ಹಾಗೆ ಕಾಣುತ್ತದೆ. ಅಲ್ಲಿ ನೆಬ್ಯುಲಾಗಳು ನಕ್ಷತ್ರಗುಚ್ಛಗಳು ಹೇರಳವಾಗಿವೆ.

ಉಳಿದ ಮೂರು ಅಂದರೆ ಬುಧ, ಶುಕ್ರ ಮತ್ತು ಮಂಗಳ ಪಶ್ಚಿಮದ ಅಂಚಿನಲ್ಲಿ ಓಟದ ಸ್ಪರ್ಧೆ ನಡೆಸುತ್ತವೆ. ಸುಮಾರು ೧೨ರಿಂದ ೧೯ರವರೆಗೆ ಸಂಜೆ ಮೋಡ ಬಿಡುವು ಮಾಡಿಕೊಟ್ಟಾಗಲೆಲ್ಲಾ ಗಮನಿಸಿ. ಈ ಮೂರು ಗ್ರಹಗಳು ಪರಸ್ಪರ ಜಾಗ ಬದಲಿಸುತ್ತಿರುತ್ತವೆ. ಶುಕ್ರವನ್ನು ಗುರುತಿಸುವುದು ಸುಲಭ. ಉಳಿದವೆರಡೂ ಕ್ಷೀಣ ಕಾಯಗಳು. ೧೧ರಂದು ಬುಧ ಗ್ರಹದ ಗರಿಷ್ಠ ಕೋನೋನ್ನತಿ. ಆದ್ದರಿಂದ ಅದನ್ನು ಗುರುತಿಟ್ಟುಕೊಳ್ಳಬಹುದು. ೨೪ರಂದು ಅದರ ಹಿನ್ನಡೆ ಆರಂಭ. ತಿಂಗಳ ಕೊನೆಗೆ ಅದು ದಿಗಂತದ ಅಂಚಿಗೆ ಸರಿಯುವುದನ್ನು ಗಮನಿಸ ಬಹುದು. ೨೯ರ ಅಮಾವಾಸ್ಯೆಯ ಮುಂದಿನ ದಿನಗಳಲ್ಲಿ ಸಂಜೆಯ ಆಕಾಶದಲ್ಲಿ ರೇಖಾ ಚಂದ್ರನೊಡನೆ ಮಂಗಳ ಮತ್ತು ಶುಕ್ರಗ್ರಹಗಳನ್ನು ಕಾಣಬಹುದು.



೧೨ರ ಸಂಜೆ ಪಶ್ಚಿಮದಲ್ಲಿ ಶುಕ್ರ, ಮಂಗಳ, ಬುಧ ಮತ್ತು ಚಿತ್ರಾ ನಕ್ಷತ್ರ

ಉ

ದ

ನೆಪ್ಚ್ಯೂನ್ ಗ್ರಹವನ್ನು ನೋಡಬೇಕೆನ್ನುವವರು ದುರ್ಬೀನನ್ನು ಸಜ್ಜಾಗಿಟ್ಟು ಕೊಳ್ಳಬೇಕು. ೧೩ರಂದು ಚಂದ್ರನ ಪಕ್ಕದಲ್ಲಿ ಇದು ಕಾಣಲಿದೆ. ಆಚ್ಛಾದನೆಯ ನೋಟ ನಮಗೆ ಸಿಗುವುದಿಲ್ಲವಾದರೂ ಗ್ರಹವನ್ನು ಗುರುತಿಸಲು ಇದು ಒಳ್ಳೆಯ ಅವಕಾಶ.

೨೨ರಂದು ವಿಷು, ಅಂದರೆ ಭೂಮಿಯ ಪಥದ ಒಂದು ಮುಖ್ಯ ಹಂತ. ಹಗಲು-ರಾತ್ರಿಗಳ ಅವಧಿ ಸಮ. ಆ ಮುಂದೆ ಉತ್ತರ ಗೋಳಾರ್ಧದಲ್ಲಿರುವ ನಮಗೆ ಹಗಲಿನ ಅವಧಿ ಹ್ರಸ್ವವಾಗುತ್ತಾ ಹೋಗುತ್ತದೆ. ಚಳಿಗಾಲದ ಆಗಮನದ ಸಂಕೇತ ಇದು.

**ಖಗೋಳ ದಿನಚರಿ**

೧ ಶುಕ್ರ, ಬುಧ ಮತ್ತು ರೇಖಾ ಚಂದ್ರಗಳ ಸಮಾಗಮ
೨ ಚಂದ್ರ - ಮಂಗಳ ಸಮಾಗಮ
೪ ಸೂರ್ಯ - ಶನಿ ಸಮಾಗಮ
೭ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೮ ಗುರುಗ್ರಹದ ಹಿನ್ನಡೆ ಮುಕ್ತಾಯ
೯ ಚಂದ್ರ - ಗುರು ಸಮಾಗಮ
೧೧ ಬುಧ ಗ್ರಹದ ಗರಿಷ್ಠ ಕೋನೋನ್ನತಿ
ಬುಧ - ಶುಕ್ರ- ಮಂಗಳ ಮೂರೂ ಗ್ರಹಗಳ ಸಮಾಗಮ
೧೩ ನೆಪ್ಚ್ಯೂನ್ ಆಚ್ಛಾದನೆ (ಭಾರತಕ್ಕೆ ಕಾಣುವುದಿಲ್ಲ)
೧೫ ಹುಣ್ಣಿಮೆ ೧೪:೪೩ಕ್ಕೆ
೨೨ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
ಶರದ್ ವಿಷುವ
೨೪ ಬುಧ ಗ್ರಹದ ಹಿನ್ನಡೆ ಆರಂಭ
೨೯ ಅಮಾವಾಸ್ಯೆ ೧೩:೪೨ ಕ್ಕೆ
ಅಕ್ಟೋಬರ್ ೧, ೨
ಚಂದ್ರ, ಮಂಗಳ ಮತ್ತು ಶುಕ್ರಗಳ ಸಮಾಗಮ

**ಟಿಪ್ಪಣಿ : ಎರಡು ಚಂದ್ರಗಳು ?**

ಪ್ರತಿ ವರ್ಷ ಆಗಸ್ಟ್ ಕೊನೆಯ ವಾರದಲ್ಲಿ ಒಂದು ಗುಲ್ಲು ಹಬ್ಬುತ್ತದೆ. ೨೭ರಂದು ಮಂಗಳ ಗ್ರಹ ಚಂದ್ರದಷ್ಟು ದೊಡ್ಡದಾಗಿ ಕಾಣುತ್ತದೆ; ಆಕಾಶದಲ್ಲಿ ಎರಡು ಚಂದ್ರಗಳು ಕಾಣಲಿವೆ – ಇತ್ಯಾದಿ. ಇದು ಈಮೈಲ್ ಮೂಲಕ ಹರಡುವ ಗುಲ್ಲು. ಅಮೆರಿಕಾದಿಂದ ಬಂದ ಕಾರಣ ಅದಕ್ಕೆ ಬಹಳ ಬೆಲೆ ಉಂಟು. ಕೆಲವರು ಫೋನ್‌ನಲ್ಲಿ, ಕೆಲವರು ಖುದ್ದಾಗಿ ಬಂದು ವರ್ಷವರ್ಷವೂ ಈ ಬಗ್ಗೆ ವಿಚಾರಿಸಿಕೊಂಡಿದ್ದಾರೆ. ಕಳೆದ ಬಾರಿ ಬಂದು ಆ ಸುದ್ದಿ ಸುಳ್ಳು ಎಂದು ತಿಳಿದುಕೊಂಡು ಹೋದವರೊಬ್ಬರಿಗೆ ೨೭ರ ರಾತ್ರಿ ಆಕಾಶ ನೋಡಿ ಖಾತ್ರಿ ಮಾಡಿಕೊಳ್ಳಿ ಎಂದು ಹೇಳಿದ್ದೆ. ಆಶ್ಚರ್ಯವೆಂದರೆ ಅವರು ಪುನಃ ಈ ಬಾರಿಯೂ ಬಂದಿದ್ದುದು. ಈ ಪ್ರಮುಖ ಘಟನೆಯ ಬಗ್ಗೆ ನಭಾವಲೋಕನದಲ್ಲಿ ಪ್ರಸ್ತಾಪವೇ ಇಲ್ಲ ಎಂದು ಒಬ್ಬರು ದೂರಿದರು. ಮೊದಲೇ ಹೇಳಿದಂತೆ ಇದು ಗುಲ್ಲು, ಮಂಗಳ ಎಂದೆಂದೂ ಚಂದ್ರನಷ್ಟು ದೊಡ್ಡದಾಗಿ ಕಾಣುವುದಿಲ್ಲ. ಇಂತಹ ವದಂತಿಗಳನ್ನು ನಂಬಬೇಡಿ. ಗುಲ್ಲುಗಳ ಬಗ್ಗೆ ಬರೆದು ಪುಟ ತುಂಬಿಸಬೇಕಾದ ಪರಿಸ್ಥಿತಿ ಇನ್ನೂ ಬಂದಿಲ್ಲ.

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಪರಮಾಣು ಒಪ್ಪಂದ : ಎಡಪಕ್ಷಗಳು ಎಡವಿದ್ದು ತಪ್ಪು

ತನು ಮೆಹ್ತಾ ತಿವಾರಿ



**ನಾನು ಎಡ ಪಕ್ಷಗಳ ಬೆಂಬಲಿಗಳು. ಜನಸಾಮಾನ್ಯರ ಆಕಾಂಕ್ಷೆಗಳಿಗಾಗಿ ಸದಾ ಕಿವಿಗೊಡುವ, ತರ್ಕಬದ್ಧವಾಗಿ ಮತ್ತು ಪುರೋಗಾಮಿ ದೃಷ್ಟಿಯಿಂದ ವಿಮರ್ಶೆ ಮಾಡುವ ಈ ಪಕ್ಷಗಳು ಇತ್ತೀಚೆಗೆ ಎಡವಿದ್ದು ಆಶ್ಚರ್ಯಕರ. ಅದೊಂದು ದೊಡ್ಡ ಹಿನ್ನಡೆಯೆಂದು ನನ್ನ ಭಾವನೆ. ಏಕೆಂಬುದನ್ನು ವಿವರಿಸುತ್ತೇನೆ.**

### ಒಪ್ಪಂದದಲ್ಲಿ ಹುಳುಕೇನಿದೆ ?

ಅಮೆರಿಕಾದ ಹೈಡ್ ಆ್ಯಕ್ಟ್ ನಮ್ಮನ್ನು ನಿರ್ಬಂಧಿಸುತ್ತದೆಂಬ ನಿಲುವು ತಪ್ಪು ಅರ್ಥೈಸುವಿಕೆಯ ಫಲ. ಅದು ಅಮೆರಿಕಾವನ್ನು ನಿರ್ಬಂಧಿಸುತ್ತದೆ, ನಮ್ಮನ್ನಲ್ಲ. ಅದು ದುರಹಂಕಾರದ ಒಂದು ಶಾಸನವೆಂಬುದು ನಿಜ. ಬೇರೆ ರಾಷ್ಟ್ರಗಳ ವಿದೇಶಾಂಗ ವ್ಯವಹಾರಗಳಲ್ಲಿ ಮೂಗುತೂರಿಸುವ ಕ್ರಮ ಅದು. ಆದರೆ ಅಮೆರಿಕಾದ ಆಜ್ಞೆಗಳನ್ನು ನಾವು ಪಾಲಿಸುವುದು, ಬಿಡುವುದು, ನಮ್ಮ ತೀರ್ಮಾನ. ಆ ಶಾಸನದ ಇಂಗಿತವನ್ನು ಮೀರಿ ಅಮೆರಿಕಾ ನಮ್ಮೊಡನೆ ಒಪ್ಪಂದ ಮಾಡಿಕೊಂಡರೆ ಅದು ಅವರ ತಲೆನೋವು. ಅವರ ದೇಶದ ಪ್ರಜಾಪ್ರತಿನಿಧಿ ಸಭೆಗೆ ಸಮಜಾಯಿಷಿ ನೀಡುವುದು ಅವರ ಕೆಲಸ, ನಮ್ಮದಲ್ಲ. ಇರಾನ್ ಹಾಗೂ ಅಣ್ವಸ್ತ್ರ ನಿಶ್ಯಸ್ತ್ರೀಕರಣಗಳ ಬಗ್ಗೆ ತಮ್ಮ ದೇಶದ ನಿಲುವನ್ನು ತಾಳದ ದೇಶಗಳೊಡನೆ ಅಮೆರಿಕಾ ಒಪ್ಪಂದ ಮಾಡಿಕೊಳ್ಳಕೂಡದೆಂದು ಆ ಶಾಸನ ಹೇಳುತ್ತದೆ. ಭಾರತವು ಅಮೆರಿಕಾದೊಡನೆ ಮಾಡಿಕೊಂಡಿರುವ ಒಪ್ಪಂದದಲ್ಲಿ ಇಂತಹ ನಿಯಮಗಳೇನೂ ಉಕ್ತವಾಗಿಲ್ಲ. ಭಾರತದ ಪರವಾಗಿ ಶಾಸನ ಹೊರಡಿಸುವುದು ಹೈಡ್ ಆ್ಯಕ್ಟ್ ವ್ಯಾಪ್ತಿಗೆ ಸೇರುವುದಿಲ್ಲ. ಆ ಶಾಸನವು ಅಮೆರಿಕಾ ಸರ್ಕಾರ ಏನು ಮಾಡಬೇಕೆಂಬುದನ್ನು ಹೇಳುತ್ತದೆ. ಭಾರತವು ಅಮೆರಿಕಾದ ನಿಲುವಿಗೆ ವಿರೋಧವಾಗಿ ನಡೆದುಕೊಂಡರೆ ಅಮೆರಿಕಾ ಭಾರತದ ಮೇಲೆ ದಿಗ್ಬಂಧನಗಳನ್ನು ವಿಧಿಸಬೇಕೆಂದು ಅಲ್ಲಿ ಹೇಳಲಾಗಿದೆ. ಹೇಳಿಕೊಳ್ಳಲಿ, ನಮಗೇನಂತೆ. ನಮ್ಮಿಷ್ಟದಂತೆ ನಡೆದುಕೊಳ್ಳುವುದು ನಮ್ಮ ಕರ್ತವ್ಯ. ನಾವು ಇರಾನ್ ಪರ ನಿಲ್ಲುತ್ತೇವೆನ್ನಿ: ಅಮೆರಿಕಾ ಏನು ಮಾಡಬಹುದು ? ದಿಗ್ಬಂಧನದ ಹೆಸರಲ್ಲಿ ಪರಮಾಣು ಇಂಧನ, ಇತ್ಯಾದಿಗಳ ವ್ಯಾಪಾರ ನಿಲ್ಲಿಸ ಬಹುದು. ಅದರಿಂದ ನಮಗೇನೂ ಆಗುವುದಿಲ್ಲ, ಏಕೆಂದರೆ, ಈಗಾಗಲೆ ಅಂತಹ ದಿಗ್ಬಂಧನಕ್ಕೆ ನಾವು ಒಳಗಾಗಿದ್ದೇವೆ. ಅಣ್ವಸ್ತ್ರಗಳ ವಿಸ್ತರಣೆಯನ್ನು ನಿರೋಧಿಸುವ ಒಪ್ಪಂದಕ್ಕೆ ನಾವು ಸಹಿ ಹಾಕಿಲ್ಲವಾದ್ದರಿಂದ ನಮಗೆ ಪರಮಾಣು ಇಂಧನ, ತಂತ್ರಜ್ಞಾನ, ಇತ್ಯಾದಿಗಳ ಬಾಬ್ತು ವ್ಯಾಪಾರ ಈಗಲೂ ಸಾಧ್ಯವಿಲ್ಲ. ಹೈಡ್ ಆ್ಯಕ್ಟ್‌ನಿಂದ ಹೆಚ್ಚೆಂದರೆ ಇದೇ ಪರಿಣಾಮ ಮರುಕಳಿಸಬಹುದು, ಅಷ್ಟೆ. ವಿದೇಶಾಂಗ ನೀತಿಯು ಹೀಗೇ ಇರಬೇಕೆಂದು ಭಾರತ-ಅಮೆರಿಕಾ ಒಪ್ಪಂದವು ಎಲ್ಲೂ ಹೇಳಿಲ್ಲ, ಹೇಳುವಂತೆಯೂ ಇಲ್ಲ. ಸಾರ್ವಭೌಮತ್ವವನ್ನು ಹೇಗೆ ಚಲಾಯಿಸುತ್ತೇವೆಂಬುದು ನಮ್ಮ ಜವಾಬ್ದಾರಿ ಮಾತ್ರ.

ಹಾಗಿದ್ದರೆ ಅಮೆರಿಕಾ ತನ್ನ ಪ್ರಕಟಿತ ನೀತಿಯ ವಿರುದ್ಧ ನಮ್ಮೊಡನೆ ಒಪ್ಪಂದ ಏಕೆ ಮಾಡಿಕೊಳ್ಳುತ್ತಿದೆ ? ಅದಕ್ಕೆ ಉತ್ತರ, ನಾವು ಸಾಧಿಸಿರುವ ಅಭಿವೃದ್ಧಿಯಲ್ಲಿದೆ. ಭಾರತವು ವಿಸ್ತರಿಸುತ್ತಿರುವ ಮಾರುಕಟ್ಟೆಯೆಂದು ಅಮೆರಿಕಾಕ್ಕೆ ಮನವರಿಕೆಯಾಗಿದೆ. ಹೀಗೆ ವಿಸ್ತರಿಸುತ್ತಿರುವ ಸಂದರ್ಭದಲ್ಲಿ ಪರಮಾಣು ಕ್ಷೇತ್ರದ ವ್ಯಾಪಾರದಲ್ಲಿ ಅಮೆರಿಕಾಕ್ಕೆ ಲಾಭವಿದೆಯೆಂಬುದನ್ನು ಅಮೆರಿಕಾ ಗ್ರಹಿಸಿದೆ. ಅಂದರೆ, ಅಮೆರಿಕಾದ ಬಂಡವಾಳಶಾಹಿ ನೀತಿಗೆ ಇದು ಸಮಂಜಸವಾಗಿದೆ. ಕಾನೂನಿಗಿಂತ ಲಾಭದ ವ್ಯಾಮೋಹ ಅವರಿಗೆ ಹೆಚ್ಚು ಪ್ರೇರಣೆ ನೀಡುತ್ತದೆ. ಕಾನೂನು ಮತ್ತು ನಿಯಮಗಳನ್ನು ಗೌರವಿಸುವುದು ಅಮೆರಿಕಾದ ಸಂಪ್ರದಾಯವಲ್ಲ, ಅದರ ದೃಷ್ಟಿ ಯಾವಾಗಲೂ ವ್ಯಾಪಾರ ಮತ್ತು ಲಾಭಗಳತ್ತ.

ಇರಲಿ, ನಾವಾದರೂ ಏಕೆ ಈ ಒಪ್ಪಂದವನ್ನು ಮಾಡಿಕೊಳ್ಳಲು ಹಾತೊರೆಯುತ್ತಿದ್ದೇವೆ ? ಅದಕ್ಕೆ ಉತ್ತರ, ನಮ್ಮ ತಂತ್ರಗಾರಿಕೆ. ಈ ಒಪ್ಪಂದ ಮಾಡಿಕೊಳ್ಳಲು ಅಮೆರಿಕಾ ಒಂದು ವಿಶೇಷ ಮಾನ್ಯತೆ ಪಡೆದುಕೊಳ್ಳಬೇಕು. ಏನದು ? ''ಪರಮಾಣು ಪ್ರಪಂಚ'' (ಅಂದರೆ, ಅಣ್ವಸ್ತ್ರ ವಿಸ್ತರಣೆಯ ವಿರೋಧಿ ಬಣ) ಭಾರತಕ್ಕೆ ಒಂದು ''ವಿನಾಯಿತಿ'' ನೀಡಬೇಕೆಂಬುದು. ಅಂದರೆ, ಭಾರತ ಆ ಅಣ್ವಸ್ತ್ರ ವಿಸ್ತರಣೆ ವಿರೋಧಿ ಒಪ್ಪಂದಕ್ಕೆ ಸಹಿ ಹಾಕಬೇಕಾಗಿಲ್ಲ ಎಂಬ ವಿನಾಯಿತಿ. ಹಾಗೆ ಸಹಿ ಹಾಕದೆಯೇ ವ್ಯಾಪಾರದಲ್ಲಿ ತೊಡಗಲು ನಮಗೆ ಅಂತರರಾಷ್ಟ್ರೀಯ ಪರಮಾಣು ಶಕ್ತಿ ಕೇಂದ್ರ, ಪರಮಾಣು ಇಂಧನ ಸರಬರಾಜು ಮಾಡುವ ಗುಂಪು, ಮುಂತಾದವು ಒಪ್ಪಿಗೆ ನೀಡುತ್ತವೆ. ಅದರಿಂದ ನಮಗೇನು ಪ್ರಯೋಜನ ? ಬೇಕಾದಷ್ಟಿದೆ; ಏಕೆಂದರೆ, ಈ ಒಪ್ಪಿಗೆ (''ಅರ್ಹತಾಪತ್ರ'' ಎಂದು ಬೇಕಾದರೂ ಕರೆಯಿರಿ) ಪಡೆದು ಅಮೆರಿಕಾ ಮಾತ್ರವಲ್ಲ, ನಾವು ಫ್ರಾನ್ಸ್, ರಷ್ಯಾ, ಚೀಣಾ, ಬ್ರಿಟನ್, ಮುಂತಾದ ದೇಶಗಳೊಡನೆಲ್ಲಾ ವ್ಯಾಪಾರಕ್ಕಿಳಿಯಬಹುದು. ನಮ್ಮ ದೇಶದ ಇರಾನ್ ಬಗೆಗಿನ ನೀತಿಯಿಂದಾಗಿಯೋ, ಬೇರೆ ಯಾವ ಕಾರಣದಿಂದಲೋ ಅಮೆರಿಕಾ ದಿಗ್ಬಂಧನ ವಿಧಿಸಿದರೂ ನಾವು ಬೇರೆ ದೇಶಗಳೊಡನೆ ವ್ಯಾಪಾರ ಮುಂದುವರಿಸು ವುದಕ್ಕ ಅಡ್ಡಿ ಇರುವುದಿಲ್ಲ. ಅಮೆರಿಕಾ ವಿಧಿಸಬಹುದಾದ ದಿಗ್ಬಂಧನವೆಂಬ ಗುಮ್ಮನಿಗೆ ಬೆದರಿ ಪರಮಾಣು ಕ್ಷೇತ್ರದ ವ್ಯಾಪಾರದಿಂದ ಭಾರತವು ವಿಮುಖವಾಗಬೇಕಿಲ್ಲ. ಬೇರೆಯವರು ವ್ಯಾಪಾರ ಮಾಡುವುದಾದರೆ ಅದನ್ನು ತಪ್ಪಿಸಲು ಅಮೆರಿಕಾ ಯಾವ ದೊಣೆನಾಯಕ !

ಆದ್ದರಿಂದ, ಈ ಒಪ್ಪಂದವು ಭಾರತಕ್ಕೆ ಬಾಧಕವಲ್ಲ. ಅದು ನಮ್ಮ ರಾಷ್ಟ್ರೀಯ ಹಿತಕ್ಕೆ ಪೂರಕವಾಗಿದೆ. ನಾವು ವಿನಾಯಿತಿಗೆ ''ಅರ್ಹತಾಪತ್ರ'' ಪಡೆದರೆ ತಾವು ವ್ಯಾಪಾರಕ್ಕೆ ಸಿದ್ಧವೆಂದು ರಷ್ಯಾ ಮತ್ತು ಫ್ರಾನ್ಸ್ ಈಗಾಗಲೇ ಘೋಷಿಸಿವೆ. ಯಾವುದೇ ವಕೀಲರನ್ನು ಕೇಳಿ, ಅವರೇನು ಹೇಳುತ್ತಾರೆ ? ಎಲ್ಲ ಒಪ್ಪಂದಗಳೂ ಪರಸ್ಪರ ಇಬ್ಬರಿಗೂ ಲಾಭದಾಯಕವಾಗಿರುವಾಗ ಮಾತ್ರ ಮಾಡಿಕೊಳ್ಳಲಾಗುತ್ತವೆ ಎಂದು. ಅಮೆರಿಕಾಕ್ಕೆ ಲಾಭವಿದೆ, ನಿಜ; ಆದರೆ, ಭಾರತಕ್ಕೂ ಲಾಭ ವಿದೆ. ನಮಗೆ ಮಾರಾಟ ಮಾಡುವುದು ಅವರಿಗೆ ಲಾಭ, ನಾವು ಅವನ್ನು ಕೊಳ್ಳುವುದು ನಮ್ಮ ಉದ್ಯಮಗಳ ವರ್ಧನೆಗಾಗಿ ಲಾಭ. ಒಪ್ಪಂದವು ತಾನಾಗಿಯೇ ಹಾನಿಕಾರಕವಲ್ಲ. ಅದರಿಂದ ನಮ್ಮ ಹಿತ ಕಾಯ್ದುಕೊಳ್ಳಲು ಸೋತರೆ ಮಾತ್ರ ಅದು ಹಾನಿಕರ. ಯಾವುದೇ ಸಂದರ್ಭದಲ್ಲಿ ಮುಂದೊಂದು ದಿನ ಅಮೆರಿಕಾ ದಿಗ್ಬಂಧನ ವಿಧಿಸಿದರೆ ಅಂದಿನ ಭಾರತ ಸರ್ಕಾರ ಏನು ಮಾಡಬೇಕೆಂಬುದು ಆ ಸರ್ಕಾರದ ತೀರ್ಮಾನವಾಗಿರುತ್ತದೆ. ಅಮೆರಿಕಾ ಹೇಳಿದಂತೆಯೇ ಮಾಡಿ ತೀರಬೇಕೆಂಬ ನಿರ್ಬಂಧವೇನೂ ಇಲ್ಲ. ''ಅದೆಂತಹ ದಿಗ್ಬಂಧನ ವಿಧಿಸುತ್ತೀಯೋ ನೋಡಿಬಿಡೋಣ'' ಎಂದು ಹೇಳುವ ಛಾತಿ ಭಾರತ ಸರ್ಕಾರಕ್ಕಿರಬೇಕು, ಅಷ್ಟೆ.

ಇದರಲ್ಲಿ ಹೊಸತೇನೂ ಇಲ್ಲವಲ್ಲವೆ ? ಬಂಗ್ಲಾದೇಶದ ವಿಮೋಚನಾ ಸಮರದ ವೇಳೆಯಲ್ಲಿ ಅಮೆರಿಕಾದ ನೌಕಾಪಡೆ ನಮ್ಮ ಬಾಗಿಲಿಗೆ ಬಂದುನಿಂತಿತ್ತು. ಅಥವಾ ಎಲ್.ಟಿ.ಟಿ.ಇ. ಉಗ್ರರನ್ನು ತಡೆಗಟ್ಟಲು ಹಿಂದೂ ಮಹಾಸಾಗರಕ್ಕೆ ಅಮೆರಿಕಾವನ್ನು ಕರೆತರಲು ಜಯವರ್ದನೆ ಸಿದ್ಧರಾಗಿದ್ದುದನ್ನು ನೆನೆಸಿಕೊಳ್ಳೋಣ. ಅವು ಯಾವುವೂ ಎಂಥದೋ ಒಪ್ಪಂದದಿಂದಾಗಿ ಘಟಿಸಿದ ವಿದ್ಯಮಾನಗಳಲ್ಲ. ಎಲ್ಲ ಸಂದರ್ಭಗಳಲ್ಲೂ ನಮ್ಮ ಎಚ್ಚರ ನಮ್ಮನ್ನು ಕಾಪಾಡಬೇಕು, ಅಷ್ಟೆ. ನಮ್ಮ ಸಾರ್ವಭೌಮತ್ವವನ್ನು ರಕ್ಷಿಸಿಕೊಳ್ಳುವ ಹಕ್ಕನ್ನು ನಮ್ಮಿಂದ ಕಿತ್ತುಕೊಳ್ಳಲು ಯಾರಿಗೆ ತಾನೆ ಸಾಧ್ಯ? ಪ್ರಸ್ತುತ ಒಪ್ಪಂದದಲ್ಲಿ ಭಾರತದ ಸಾರ್ವಭೌಮತ್ವಕ್ಕೆ ಧಕ್ಕೆಯುಂಟುಮಾಡಬಹುದಾದ ಯಾವ ಉಲ್ಲೇಖವಿದೆ ? ಎಡಪಕ್ಷಗಳು ಅಂತಹದ್ದೇನನ್ನೂ ಗುರುತಿಸಿಲ್ಲ. ಹಾಗಿದ್ದ ಪಕ್ಷದಲ್ಲಿ, ಈ ಒಪ್ಪಂದವು ನಮಗೆ ಹೇಗೆ ಮಾರಕ? ಎಡ ಪಕ್ಷಗಳಿಗೆ ಏಕಿಷ್ಟು ಭಯ ? ಏನೇ ಆದರೂ ನಾವೀಗ ಇರುವುದಕ್ಕಿಂತಲೂ ಕೆಟ್ಟ ಪರಿಸ್ಥಿತಿ ಯಾವುದೂ ಬರಲಾರದು. ಏಕೆಂದರೆ, ಈಗಲೂ ನಮಗೆ ದಿಗ್ಬಂಧನ ವಿಧಿಸಲಾಗಿದೆ, ಮತ್ತೆ, ನಾಳೆಯೂ ವಿಧಿಸಬಹುದು. ಇದರಲ್ಲಿ ಹೊಸದಾಗಿ ನಾವು ಕಳೆದುಕೊಳ್ಳುವುದೇನಿದೆ ? ನಮ್ಮ ಗವಿಯಲ್ಲೇ ಅವಿತು ಕುಳಿತುಕೊಳ್ಳಬೇಕಾದ ಅವಶ್ಯಕತೆಯೇನೂ ಇಲ್ಲ. ನಿರ್ಭಯವಾಗಿ ಭವಿಷ್ಯದತ್ತ ಹೆಜ್ಜೆಹಾಕಲು ನಾವು ಅಳುಕಬೇಕಾಗಿಲ್ಲ.



**ಒಪ್ಪಂದದ ಉಪಯುಕ್ತತೆಯ ಬಗ್ಗೆ ಸಂಶಯ**

ಯಾವುದೇ ಒಪ್ಪಂದದಲ್ಲೂ ಉಪಯುಕ್ತವಾದುದೇನು, ಅನಪೇಕ್ಷಣೀಯವಾದುದೇನು, ಎಂಬುದು ಗ್ರಹಿಸುವವರ ದೃಷ್ಟಿಯನ್ನವಲಂಬಿಸಿರುತ್ತದೆ. ಈ ಒಪ್ಪಂದವನ್ನು ಸಹ ಎರಡೂ ಅಂಶಗಳ ಸಮ್ಮಿಲನವೆಂದು ಬಗೆಯುವುದು ಅನುಚಿತವಲ್ಲ. ಭಾರತದ ಬಹುಸಂಖ್ಯೆಯ ಜನ ಅದನ್ನು ಸ್ವಾಗತಿಸುತ್ತಾರಾದರೆ, ಅಲ್ಪಸಂಖ್ಯಾತ ಅಭಿಪ್ರಾಯವನ್ನು ಒತ್ತಾಯದಿಂದ ಹೇರಲು ಹವಣಿಸುವುದು ಪ್ರಜಾಪ್ರಭುತ್ವಕ್ಕೆ ಒಗ್ಗುವಂತಹ ಅಂಶವಲ್ಲ. ''ಒಪ್ಪಂದವು ನಾಳೆ ಹಾನಿಯುಂಟುಮಾಡುವಂತಾದರೆ ನಾನದನ್ನು ನಿಭಾಯಿಸುತ್ತೇನೆ'' ಎಂಬ ಭರವಸೆ ಬಹುಮಂದಿಗೆ ಇದ್ದರೆ, ಅಲ್ಪಮತ ಇರುವ ಅಭಿಪ್ರಾಯವನ್ನು ಪ್ರತಿಷ್ಠೆಯ ಪ್ರಶ್ನೆಯನ್ನಾಗಿಸಬಾರದು. ಆ ರೀತಿಯ ಅಡಚಣೆಯೊಡ್ಡುವುದು ಒಳ್ಳೆಯದಲ್ಲ. ನಮ್ಮ ದೇಶದ ವಿಜ್ಞಾನಿಗಳಲ್ಲಿ ಬಹುಮಂದಿ ಒಪ್ಪಂದದ ಪರವಾಗಿದ್ದಾರೆ. ಅಂತೆಯೇ, ಬಹುಸಂಖ್ಯೆಯ ವೈಜ್ಞಾನಿಕ ಸಂಸ್ಥೆಗಳು ಸಹ. ರಕ್ಷಣಾ ವಿಭಾಗದ ನೀತಿ ನಿರೂಪಕರು ಅದರ ಪರವಾಗಿರುವುದೇ ಹೆಚ್ಚು. ಅಧಿಕಾರಿ ವರ್ಗ, ರಾಯಭಾರಿಗಳು, ಉದ್ಯಮಿಗಳು, ಹೀಗೆ ಎಲ್ಲ ವಿಭಾಗಗಳಲ್ಲೂ ಅಧಿಕ ಜನ ಒಪ್ಪಂದವನ್ನು ಸ್ವಾಗತಿಸಿದ್ದಾರೆ. ಸಾಮಾನ್ಯ ಜನರ ಅಭಿಪ್ರಾಯವು ಪಾರ್ಲಿಮೆಂಟಿಗೆ ಚುನಾಯಿತರಾಗಿರುವ ಪ್ರತಿನಿಧಿಗಳ ಮುಖೇನ ವ್ಯಕ್ತವಾಗುತ್ತದೆಂದು ಭಾವಿಸುವುದು ಸಹಜ. ಇಂದಿನ ಸಂದರ್ಭದಲ್ಲಿ ಬಹುಮತ ಯಾವ ಕಡೆಗಿದೆ ? ಇದರ ಬಗ್ಗೆ ಎಡ-ಬಲ-ಮಧ್ಯ, ಹೀಗೆ ಯಾವ ರಾಜಕೀಯ ಪ್ರಭೇದಕ್ಕೆ ಸೇರಿದ್ದರೂ ಅಭಿಪ್ರಾಯದ ಬಹುಮತವನ್ನು ನಿರ್ಧರಿಸಲು ಅಂತಿಮವಾಗಿ ಪಾರ್ಲಿಮೆಂಟಿನತ್ತಲೇ ನಾವು ದೃಷ್ಟಿ ಹರಿಸಬೇಕು. ಆ ಬಹುಮತದ ತೀರ್ಮಾನಕ್ಕೆ ನಾವು ಬದ್ಧರಾಗಿರಬೇಕಾಗುತ್ತದೆ. ಎಡಪಕ್ಷಗಳದ್ದು ಸುಮಾರು ೬೦ ಸ್ಥಾನಗಳು, ಕಾಂಗ್ರೆಸ್‌ನದು ೨೨೦, ಭಾರತೀಯ ಜನತಾ ಪಕ್ಷದ್ದು ೧೮೦. ನಿಜಕ್ಕೂ ನೋಡಿದರೆ ಕಾಂಗ್ರೆಸ್ ಮತ್ತು ಭಾಜಪ, ಎರಡೂ ಒಪ್ಪಂದದ ಸಮರ್ಥನೆ ಮಾಡುವಂಥವೇ. ಭಾಜಪದ ವಿರೋಧವು ಕೇವಲ ತೋರಿಕೆಯದು, ಮತ್ಸರದ್ದು; ಕಾಂಗ್ರೆಸ್ಸಿನ ಪ್ರಧಾನಿ ಅದಕ್ಕೆ ಸಹಿ ಹಾಕಕೂಡದೆಂಬುದಷ್ಟೇ ಭಾಜಪದ ಅಪ್ರಕಟಿತ ನಿಲುವು. ಅದನ್ನು ಗಮನಿಸಿದರೆ ಒಪ್ಪಂದದ ಪರವಾಗಿ ೪೦೦ ಮಂದಿ ಇದ್ದಾರೆ; ವಿರೋಧವಾಗಿ ಒಂದು ಗಟ್ಟಿಯಾದ ಸೈದ್ಧಾಂತಿಕ ನಿಲುವು ಉಳ್ಳವರು ೬೦ ಮಂದಿ.

ಎಡ ಪಕ್ಷಗಳು ಅಭಿಪ್ರಾಯ ವೈವಿಧ್ಯದ ಈ ಒಳಗುಟ್ಟನ್ನು ಅರಿಯಬೇಕಾಗಿತ್ತು. ಅವರು ಅದನ್ನು ಅರಿತಿಲ್ಲವೆಂದಲ್ಲ, ಆದರೆ ಅದನ್ನು ಅಂಗೀಕರಿಸಲು ಅವರು ಸಿದ್ಧರಿಲ್ಲ. ತಮ್ಮ ವಿರೋಧವನ್ನು ದಾಖಲಿಸಿ, ಬಹುಮತದ ಅಭಿಪ್ರಾಯಕ್ಕೆ ತಲೆಬಾಗುವುದು ಇಡೀ ಪ್ರಕರಣವನ್ನು ಪ್ರತಿಷ್ಠೆಯ ಪ್ರಶ್ನೆ ಮಾಡುವುದಕ್ಕಿಂತಲೂ ಉತ್ತಮವಾದ್ದು. ಅದನ್ನು ಮನ್ನಿಸದೆ ಎಡ ಪಕ್ಷಗಳು ದೊಡ್ಡ ತಪ್ಪನ್ನು ಮಾಡಿದುವು. ಪ್ರಾದೇಶಿಕ ಪಕ್ಷಗಳು, ಚಿಕ್ಕ ಪಕ್ಷಗಳು, ಮುಂತಾದುವನ್ನೆಲ್ಲಾ ಕಲೆಹಾಕಲು ಹೊರಟಿದ್ದು ಯೋಗ್ಯವಲ್ಲ. ಆ ಕೆಲವು ಪಕ್ಷಗಳಿಗೆ ಒಪ್ಪಂದದ ಬಗ್ಗೆ ನಿಯಮಿತವಾದ ಒಂದು ಅಭಿಪ್ರಾಯವೇ ಇರಲಿಲ್ಲವೆಂದು ಎಡ ಪಕ್ಷಗಳಿಗೆ ಗೊತ್ತಿರಲಿಲ್ಲವೆಂದು ನಂಬುವುದು ಕಷ್ಟ. ಬಹುಜನ ಸಮಾಜ ಪಕ್ಷ, ಅಕಾಲಿ ದಳ, ಮುಂತಾದ ಪಕ್ಷಗಳು ಒಪ್ಪಂದವನ್ನು ಯಾವಾಗ ಚರ್ಚಿಸಿದ್ದವು ? ಅವುಗಳಿಗೆ ಕೆಲವು ಸ್ವಂತದ, ಪ್ರಾದೇಶಿಕ, ಆಶಯಗಳಷ್ಟೇ ಮುಖ್ಯ. ಬೌದ್ಧಿಕ ಬದ್ಧತೆಯಾಗಲಿ, ತಾತ್ವಿಕ ನಂಬಿಕೆಯಾಗಲಿ ಇಲ್ಲದೆಯೂ ಒಪ್ಪಂದವನ್ನು ವಿರೋಧಿಸುವವರನ್ನು ಎಡ ಪಕ್ಷಗಳು ಹೇಗೆ ಪರಾಮರ್ಶೆ ಮಾಡಬೇಕೆಂಬುದು ಮುಖ್ಯ. ''ಕುದುರೆ ವ್ಯಾಪಾರ''ವನ್ನು ತೆಗಳುವವರು ಅಂತಹ ವ್ಯಾಪಾರದ ಭೂಮಿಕೆಯನ್ನು ರಚಿಸಿಕೊಡಬಾರದು. ಲಂಚವನ್ನು ಹಣದ ರೂಪದಲ್ಲೇ ಕೊಡಬೇಕಾಗಿಲ್ಲವಲ್ಲವೆ ? ಸಮಾಜವಾದಿ ಪಕ್ಷಕ್ಕೆ ಕಾಂಗ್ರೆಸ್ ಎಂಥದೋ ಲಂಚ ನೀಡಿದಾಗ, ಮಾಯಾವತಿಯವರಿಗೆ ಪ್ರಧಾನಿ ಪಟ್ಟದ ಆಸೆ ಹುಟ್ಟಿಸುವುದು ಆಮಿಷವಲ್ಲವೆ? ಎಡ ಪಕ್ಷಗಳ ವಕ್ತಾರರು ಅಂತಹ ಆಮಿಷವನ್ನೊಡ್ಡಿದ್ದು ಖೇದಕರ. ಆಮೇಲೆ ''ಕುದುರೆ ವ್ಯಾಪಾರ'' ಎಗ್ಗಿಲ್ಲದೆ ಸಾಗಿತು. ಈಗ ಅದನ್ನೆಲ್ಲಾ ಕೆದಕುವುದು ಅನವಶ್ಯಕ. ಯಾರು ಯಾರಿಗೆ, ಎಷ್ಟು, ಲಂಚ ಕೊಟ್ಟರೆಂಬುದು ಸ್ವಲ್ಪ ಬಹಿರಂಗ, ಸ್ವಲ್ಪ ಗುಟ್ಟು. ಒಮ್ಮೆ ನೀತಿಯ ಹಾದಿಯಿಂದ ಸರಿದರೆ ಮುಗಿಯಿತು; ಕೊಳಕು ಪ್ರಸಂಗಗಳು ಕಟ್ಟಿಟ್ಟ ಬುತ್ತಿ. ಅಂತಹ ಕೊಳಕು ಮಡುವಿನಲ್ಲಿ ಈಸಿ, ಜೈಸಲು ಎಡ ಪಕ್ಷಗಳಿಗೆ ಸಾಧ್ಯವಾಗದು; ಅದು ಆ ಪಕ್ಷಗಳ ಹೆಮ್ಮೆಯೂ ಹೌದು. ಅವರಿಗೆ ತತ್ತ್ವ ಎಂಬುದು ಪ್ರಧಾನವಾದ್ದು ಮತ್ತು ಅಂಥದೇ ದೃಷ್ಟಿ ಇದ್ದವರೊಡನೆ ಸಖ್ಯವು ಸಾಧ್ಯ. ಅಂತಹವಲ್ಲದವರೊಡನೆ ಏಗುವುದು ಕಷ್ಟ ಮತ್ತು ಅಗೌರವ. ಯಾರಿಗೋ ಸಿಂಹಾಸನ ಕಲ್ಪಿಸಿಕೊಡುವ ಗೋಜಿಗೆ ಹೋಗುವುದು ಎಡ ಪಕ್ಷಗಳಿಗೆ ಶೋಭಿಸುವುದಿಲ್ಲ. ಪಾರ್ಲಿಮೆಂಟಿನಲ್ಲಿ ಸೋಲುವುದಲ್ಲದೆ ತಮ್ಮ ಬೆಂಬಲಿಗರಿಗೆ ಅಸಮಾಧಾನವನ್ನು ತಂದದ್ದಷ್ಟೇ ಎಡ ಪಕ್ಷಗಳ ಸಾಧನೆ ! ಹಾಗಾಗಬಾರದಾಗಿತ್ತೆಂಬುದು ನನ್ನ ಖಚಿತ ಅಭಿಪ್ರಾಯ.

**ಪರಮಾಣು ಒಪ್ಪಂದಕ್ಕೆ ಅಷ್ಟು ಮಹತ್ವವೆ ?**

ನಮ್ಮ ದೇಶಕ್ಕೆ ಮತ್ತು ಜನರಿಗೆ ಪರಮಾಣು ಒಪ್ಪಂದವು ಅತಿ ಪ್ರಮುಖ ವಿಷಯವಲ್ಲ. ಹಣದುಬ್ಬರ, ಶಿಕ್ಷಣ, ನಿರುದ್ಯೋಗ, ಆಡಳಿತದ ವೈಖರಿ, ಭ್ರಷ್ಟಾಚಾರ, ಇವು ಅತಿ ಪ್ರಮುಖ. ಎಡಪಕ್ಷಗಳು ಇವುಗಳನ್ನು ಗುರಿಯಾಗಿಸಬೇಕಲ್ಲವೆ ? ಸರ್ಕಾರವನ್ನು ಇವುಗಳ ಬಗ್ಗೆ ತರಾಟೆಗೆ ತೆಗೆದುಕೊಳ್ಳುವುದು ಹೆಚ್ಚು ಉಪಯುಕ್ತ. ಅರವತ್ತು ಮತಗಳನ್ನು ಬತ್ತಳಿಕೆಯಲ್ಲಿ ಇಟ್ಟುಕೊಂಡು ಪರಮಾಣು ಒಪ್ಪಂದವನ್ನು ಹೊಡೆದುಹಾಕಲು ಹಾತೊರೆದಿದ್ದು ಸರಿ ಎನಿಸುವುದಿಲ್ಲ. ಪಿಂಚಣಿ ಹಣವನ್ನು ತೊಡಗಿಸುವ ವಿಷಯದಲ್ಲಿ ಸುಧಾರಣೆಯನ್ನು ತರಲು ಸರ್ಕಾರ ಕಾದುಕುಳಿತಿದೆ, ಶಿಕ್ಷಣದ ಹಕ್ಕಿನ ಬಗೆಗಿನ ಮಸೂದೆ ಇದೆ, ಹಣದುಬ್ಬರ ತಡೆಯುವ ಕ್ರಮಗಳ ಪ್ರಶ್ನೆ ಇದೆ. ಇವಕ್ಕೆಲ್ಲಾ ಜನಪರವಾದ ನಿಲುವುಗಳನ್ನು ಭದ್ರಗೊಳಿಸಬೇಕಾದ ಜವಾಬ್ದಾರಿ ಎಡ ಪಕ್ಷಗಳಿಗಿತ್ತು. ಪಾರ್ಲಿಮೆಂಟಿನಲ್ಲಿ ಪ್ರಧಾನಿಯವರ ನಿರ್ಣಯವನ್ನು ಮತಕ್ಕೆ ಹಾಕಬೇಕಾಗಿದ್ದ ದಿನಗಳಲ್ಲಿ ರಾಹುಲ್ ಗಾಂಧಿ ವಿದರ್ಭದಲ್ಲಿ ಪ್ರಗತಿಪರ ಪತ್ರಕರ್ತ ಪಿ. ಸಾಯಿನಾಥ್ ಜೊತೆ ಪ್ರವಾಸದಲ್ಲಿದ್ದುದನ್ನು ಗಮನಿಸಿ. ವಿದರ್ಭದ ರೈತನಿಗೆ ಅನುಕೂಲವಾಗುವಂತೆ ಶಾಸನವನ್ನು ರೂಪಿಸಬೇಕಾಗಿದ್ದುದು ಎಡ ಪಕ್ಷಗಳ ಜವಾಬ್ದಾರಿಯಾಗಿತ್ತು; ಅದಕ್ಕಿಂತಲೂ ಈ ಪರಮಾಣು ಒಪ್ಪಂದವು ಮಹತ್ತರವಾಗಿಬಿಟ್ಟಿತು ! ಗ್ರಾಮೀಣ ಪ್ರದೇಶಗಳಲ್ಲಿ ಕಡ್ಡಾಯವಾಗಿ ನೀಡಬೇಕಾದ ಕನಿಷ್ಠ ಉದ್ಯೋಗದ ಬಗೆಗಿನ ಶಾಸನವನ್ನು ರೂಪಿಸುವುದು ಮುಖ್ಯವೋ ಬಹುಮತದ ರಾಜಕೀಯ ಪ್ರಹಸನ ಮುಖ್ಯವೋ ? ಎಡ ಪಕ್ಷಗಳ ಆಯ್ಕೆಯು ಅವರ ತತ್ತ್ವಬದ್ಧ ದೃಷ್ಟಿಕೋನಕ್ಕೆ ಭಿನ್ನವಾದ ಹಾದಿಯದಾಯಿತು.

ಶುದ್ಧವಾದ ಆಡಳಿತ ಮತ್ತು ಒಳ್ಳೆಯ ಶಿಕ್ಷಣ ನಮ್ಮ ತುರ್ತು ಅಗತ್ಯಗಳು. ನಮ್ಮ ಪ್ರಜಾಪ್ರಭುತ್ವದ ಭವಿಷ್ಯ ಅವನ್ನು ಅವಲಂಬಿಸಿದೆ. ಎಡ ಪಕ್ಷಗಳ ನಾಯಕರು ಇವುಗಳಿಗೆ ಒತ್ತುಕೊಟ್ಟು ಕೆಲಸ ನಿರ್ವಹಿಸಬೇಕಾಗಿದೆ. ಇವು ಗೌಣವಾಗುವಂತೆ ಮಾಡುವ ಕಾರ್ಯಕ್ರಮಗಳಿಗೆ ಮತ್ತು ಪಕ್ಷಗಳಿಗೆ ಎಡ ಪಕ್ಷಗಳು ಕಟ್ಟುಬೀಳಬಾರದು. ರಾಜಕೀಯ ತಂತ್ರಗಳನ್ನು ರೂಪಿಸುವಾಗ ಇದನ್ನು ಖಂಡಿತಕ್ಕೂ ಮರೆಯಕೂಡದು.

ತನು ಮೆಹ್ತಾ ತಿವಾರಿ
ವಕೀಲರು, ಯೂಸುಫ್ ಬಿಲ್ಡಿಂಗ್, ಮುಂಬಯಿ

ಪ್ರತಿಕ್ರಿಯೆಗಳಿಗೆ ಸ್ವಾಗತವಿದೆ. ಆಯ್ದ ಕೆಲವು ಪ್ರತಿಕ್ರಿಯೆಗಳನ್ನು ಪ್ರಕಟಿಸುವ ಉದ್ದೇಶವಿದೆ. ಪ್ರತಿಕ್ರಿಯೆಯು ೨೫೦ ಪದಗಳ ಮಿತಿಯಲ್ಲಿರಲಿ. – ಸಂ.

# ಭಾವನೆಗಳನ್ನು ನೋಯಿಸುವುದೆಂದರೆ...?

**ನಗರಗೆರೆ ರಮೇಶ್**

ಶ್ರೀ ಹುಲಿಕಲ್ ನಟರಾಜ್ ಅವರು ವೃತ್ತಿಯಿಂದ ಶಿಕ್ಷಕರು. ಪ್ರವೃತ್ತಿಯಿಂದ ಪವಾಡಗಳನ್ನು ಬಯಲು ಮಾಡುವುದನ್ನು ರೂಢಿಸಿಕೊಂಡಿದ್ದಾರೆ. ಇಂಥ ಒಂದು ಕಾರ್ಯಕ್ರಮದ ಭಾಗವಾಗಿ ಕೆಲವು ವರ್ಷಗಳ ಹಿಂದೆ ಮಡಿಕೇರಿಯಲ್ಲಿ ಮಾಟ ಮಂತ್ರಗಳ ಪೊಳ್ಳುತನವನ್ನು ಬಯಲುಗೊಳಿಸಿದ್ದಕ್ಕಾಗಿ ಸಂಘಪರಿವಾರದ ಸದಸ್ಯರೊಬ್ಬರು ಅವರ ವಿರುದ್ಧ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದ್ದರು. ನಟರಾಜ್ ಅವರು ಜನರ ನಂಬಿಕೆಗಳನ್ನು ಪ್ರಶ್ನಿಸುವ ಮೂಲಕ ಅವರ ಭಾವನೆಗಳಿಗೆ ನೋವುಂಟುಮಾಡಿದರೆಂಬುದು ಅವರ ಆರೋಪವಾಗಿತ್ತು.

ಕೇರಳದ ಅಯ್ಯಪ್ಪ ಸ್ವಾಮಿಯ ಗುಡಿಯ ಬಳಿಯ ಬೆಟ್ಟಗಳ ಸಾಲಿನಲ್ಲಿ ವರ್ಷಕ್ಕೊಮ್ಮೆ ಕಾಣಿಸಿಕೊಳ್ಳುವ 'ಮಕರ ವಿಳಕ್ಕು' ಮಾನವ ನಿರ್ಮಿತವೇ ಎಂದು ಸಾಧಿಸಹೊರಟ ವಿಚಾರವಾದಿಗಳು ದೇವಸ್ಥಾನದ ಜನರಿಂದ ಹಲ್ಲೆಗೊಳಗಾದರು. ಇಲ್ಲಿಯೂ ಈ ವಿಚಾರವಾದಿಗಳ ವಿರುದ್ಧದ ಆರೋಪ ಮೇಲಿನ ತರಹದ್ದೇ – ಜನರ ಭಾವನೆಗಳಿಗೆ ನೋವುಂಟುಮಾಡಿದರು. ಆದರೆ ಇತ್ತೀಚೆಗೆ ಆ ದೇವಸ್ಥಾನಕ್ಕೆ ಸಂಬಂಧಪಟ್ಟವರೊಬ್ಬರು ಆ ಜ್ಯೋತಿಯ ಹಿಂದಿನ ರಹಸ್ಯವನ್ನು ಹೊರಗೆಡವಿದ್ದಾರೆ. ಕೇರಳದ ವಿದ್ಯುಚ್ಛಕ್ತಿ ಇಲಾಖೆಯವರು ನಿಗದಿತ ದಿನ, ನಿಗದಿತ ಸಮಯದಲ್ಲಿ ಆ ಜ್ಯೋತಿಯನ್ನು ಸೃಷ್ಟಿಸುತ್ತಾರೆ. ಇದರಿಂದ ಭಕ್ತರ ಮನಸ್ಸಿಗೆ ಆಗಿರುವ ನೋವಿನ ಬಗೆಗೆ ಯಾವ ವರದಿಯೂ ಬಂದಿಲ್ಲ.

ತಸ್ಲೀಮಾ ನಸ್ರೀನ್ ಮುಸ್ಲಿಂ ಮೂಲಭೂತವಾದಿಗಳನ್ನು ಟೀಕಿಸಿದ್ದರಿಂದ ಆಕೆಯ ವಿರುದ್ಧ ಫತ್ವಾ ಹೊರಡಿಸಲಾಗಿ ತನ್ನ ದೇಶ ಬಿಟ್ಟು ಈಚಿನವರೆಗೆ ಸ್ವೀಡನ್‌ನಲ್ಲಿ ತಲೆಮರೆಸಿಕೊಂಡಿರಬೇಕಾಗಿ ಬಂದಿತ್ತು. ಇದೇ ರೀತಿಯ ಪ್ರಾಣಾಪಾಯವನ್ನು ಸಲ್ಮಾನ್ ರಷ್ದಿ ಇರಾನ್‌ನ ಖೊಮೇನಿಯಿಂದ ಎದುರಿಸಿದ್ದು, ಇಂಗ್ಲೆಂಡಿನಲ್ಲಿ ರಹಸ್ಯ ಜೀವನ ನಡೆಸಬೇಕಾಯಿತು.

ಬರ್ಟ್ರಂಡ್ ರಸೆಲ್ ಕ್ರಿಶ್ಚಿಯನ್ ಧರ್ಮದ ಬಗ್ಗೆ ಆಡಿದ ಮಾತುಗಳಿಂದಾಗಿ ಅಮೆರಿಕಾದ ಒಂದು ಕಾಲೇಜಿನಲ್ಲಿ ಅವರಿಗೆ ಅಧ್ಯಾಪಕ ಹುದ್ದೆಯನ್ನು ನಿರಾಕರಿಸಲಾಯಿತು. ಈ ನಿಟ್ಟಿನಲ್ಲಿ ತೀರ ಇತ್ತೀಚಿನ ಉದಾಹರಣೆ ಒಂದಿದೆ. ಉತ್ತರ ಕರ್ನಾಟಕದವರ ಅನುಕೂಲಕ್ಕಾಗಿ ಪ್ರಾರಂಭಿಸಲು ಯೋಜಿಸಲಾಗಿರುವ ನ್ಯಾಯಾಲಯ ಪೀಠವನ್ನು ಆಷಾಢ ಮಾಸದಲ್ಲಿ ಶುರುಮಾಡುವುದರ ವಿರುದ್ಧ ವಕೀಲರೊಬ್ಬರು ರಾಜ್ಯದ ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಿದ್ದರು.

ಆಶ್ಚರ್ಯದ ಸಂಗತಿಯೆಂದರೆ ಈ ಮೊಕದ್ದಮೆ ನ್ಯಾಯಾಲಯದಲ್ಲಿ ವಿಚಾರಣೆಗೆ ಅಂಗೀಕೃತವಾಯಿತು. ಇಲ್ಲಿಯು ಅದೇ ವಾದ: ಹಿಂದುಗಳ ಮನಸ್ಸಿಗೆ ನೋವಾಗುತ್ತದೆ. ಈ ರಾಜ್ಯದಲ್ಲಿರುವ ಎಲ್ಲರೂ ಹಿಂದುಗಳಲ್ಲ; ಮತ್ತು ಎಲ್ಲ ಹಿಂದುಗಳಿಗೂ ಆಷಾಢ ಮಾಸ ಅಶುಭ ಮಾಸವಲ್ಲ ಎನ್ನುವ ಸಾಮಾನ್ಯ ಜ್ಞಾನ ಆ ವಕೀಲರಿಗಿಲ್ಲದಿರುವುದೇ ಸೋಜಿಗವಾದ ಸಂಗತಿ!

ಇಂಥ ಉದಾಹರಣೆಗಳು ಸಾಕಷ್ಟು ಸಂಖ್ಯೆಯಲ್ಲಿ ಹಿಂದಿನ ಕಾಲದಲ್ಲಿಯೂ ಸಿಗುತ್ತವೆ. ಸಾಕ್ರೆಟಿಸ್, ಗೆಲಿಲಿಯೊ, ಗಿಯಾರ್ಡಾನೊ ಬ್ರುನೊರಂಥವರು ಪಾಶ್ಚಾತ್ಯದೇಶಗಳಲ್ಲಿ ಇಂಥ ಆರೋಪಗಳನ್ನೆದುರಿಸಿದರು. ನಮ್ಮ ದೇಶದಲ್ಲಿ ಚಾರ್ವಾಕರಿಂದ ಹಿಡಿದು ಇತ್ತೀಚಿನ ಎ. ಕೆ. ರಾಮಾನುಜನ್ (ಅವರ ರಾಮಾಯಣದ ಬಗೆಗಿನ ಬರಹದಿಂದಾಗಿ) ವರೆಗೂ ಇಂಥ ಆರೋಪಗಳು ಹಲವು ಬಾರಿ ಕೇಳಿಬಂದಿವೆ.

ಮೇಲಿನ ಎಲ್ಲ ಸಂದರ್ಭಗಳಲ್ಲಿಯೂ ಜನರ ವಾದದ ಹಿಂದೆ ಒಂದೇ ಥರದ ಆಲೋಚನಾ ಕ್ರಮವಿರುವುದು ಸ್ಪಷ್ಟವಾಗುತ್ತದೆ. ದುರಂತವೆಂದರೆ ಕ್ರಿಸ್ತ ಪೂರ್ವ ಕಾಲದಲ್ಲಿನ ಆಲೋಚನಾ ಕ್ರಮವು ಕ್ರಿಸ್ತಶಕದ ೨೧ನೆಯ ಶತಮಾನದಲ್ಲಿಯೂ ಮುಂದುವರೆದಿದೆ ಎಂಬುದು. ಅಲ್ಲಿಯವರೆಗೂ ಜನರು ನಂಬಿಕೊಂಡುಬಂದಿರುವ ಚಿಂತನೆಗಳನ್ನು, ಆಚರಣೆಗಳನ್ನು ವಿಶ್ಲೇಷಣೆಗೆ ಒಳಪಡಿಸಿ ತರ್ಕಕ್ಕೆ ನಿಲುಕದಿದ್ದಾಗ ಅವುಗಳನ್ನು ವಿರೋಧಿಸುವವರ ವಿರುದ್ಧ ಇಂಥ ಆಪಾದನೆಗಳು ಮಾತ್ರವಲ್ಲ, ಹಲ್ಲೆಗಳೂ ಇತಿಹಾಸದ ಭಾಗವಾಗಿವೆ, ಇಂದಿಗೂ ಮುಂದುವರೆದಿವೆ.

ಹಳೆಯ ನಂಬಿಕೆಗಳನ್ನು ಬಿಡಲು ಸಿದ್ಧರಿಲ್ಲದಿರುವ ಜನರನ್ನು ಎರಡು ವಿಧವಾಗಿ ವಿಂಗಡಿಸಬಹುದು. (ಇನ್ನೂ ಬೇರೆ ವಿಂಗಡನೆಗಳೂ ಸಾಧ್ಯ.) ಮುಗ್ಧತೆ ಅಥವಾ ಮೌಢ್ಯದ ಪರಿಣಾಮವಾಗಿ 'ಪರಂಪರೆ'ಯ ಹೆಸರಿನಲ್ಲಿ ಹಳೆಯದಕ್ಕೆ ಜೋತುಬೀಳುವವರು ಒಂದು ಗುಂಪು. ಮತ್ತೊಂದು ಗುಂಪು ನಿಜಕ್ಕೂ ಅಪಾಯಕಾರಿಯಾದವರು. ಜನರಲ್ಲಿನ ಮೂಢನಂಬಿಕೆಗಳನ್ನು ಪೋಷಿಸುವುದರಲ್ಲಿಯೇ ಅವರ ಸ್ವಾರ್ಥ ಅಡಗಿದೆ. ಗೆಲಿಲಿಯೊ ದೂರದರ್ಶಕ ಯಂತ್ರದ ಸಹಾಯದಿಂದ ವಿಶ್ವದ ಕೇಂದ್ರ ಸೂರ್ಯನೆಂದು ಸಾರಿದಾಗ ಚರ್ಚಿನ ಅಧಿಕಾರ ಪೀಠವೇ ಅಲುಗಾಡಿತು. ಈ ಹೊಸ ವಾದವನ್ನು ಜನರು ಒಪ್ಪಿಕೊಂಡರೆ, ನಂತರದ ಕಾಲದಲ್ಲಿ ಚರ್ಚಿನ ಪ್ರಾಧಾನ್ಯತೆಯೇ

ಹಳೆಯ ನಂಬಿಕೆಗಳನ್ನು ಬಿಡಲು ಸಿದ್ಧರಿಲ್ಲದಿರುವ ಜನರನ್ನು ಎರಡು ವಿಧವಾಗಿ ವಿಂಗಡಿಸಬಹುದು. (ಇನ್ನೂ ಬೇರೆ ವಿಂಗಡನೆಗಳೂ ಸಾಧ್ಯ.) ಮುಗ್ಧತೆ ಅಥವಾ ಮೌಢ್ಯದ ಪರಿಣಾಮವಾಗಿ 'ಪರಂಪರೆ'ಯ ಹೆಸರಿನಲ್ಲಿ ಹಳೆಯದಕ್ಕೆ ಜೋತು ಬೀಳುವವರು ಒಂದು ಗುಂಪು. ಮತ್ತೊಂದು ಗುಂಪು ನಿಜಕ್ಕೂ ಅಪಾಯಕಾರಿಯಾದವರು. ಜನರಲ್ಲಿನ ಮೂಢನಂಬಿಕೆಗಳನ್ನು ಪೋಷಿಸುವುದರಲ್ಲಿಯೇ ಅವರ ಸ್ವಾರ್ಥ ಅಡಗಿದೆ. ಗೆಲಿಲಿಯೊ ದೂರದರ್ಶಕ ಯಂತ್ರದ ಸಹಾಯದಿಂದ ವಿಶ್ವದ ಕೇಂದ್ರ ಸೂರ್ಯನೆಂದು ಸಾರಿದಾಗ ಚರ್ಚಿನ ಅಧಿಕಾರ ಪೀಠವೇ ಅಲುಗಾಡಿತು. ಈ ಹೊಸ ವಾದವನ್ನು ಜನರು ಒಪ್ಪಿಕೊಂಡರೆ, ನಂತರದ ಕಾಲದಲ್ಲಿ ಚರ್ಚಿನ ಪ್ರಾಧಾನ್ಯತೆಯೇ ಪ್ರಶ್ನೆಗೊಳಪಡುವುದೆಂಬ ಭಯ ಅಂದಿನ ಕ್ರಿಶ್ಚಿಯನ್ ಪುರೋಹಿತಶಾಹಿಗೆ. ಅದೇ ರೀತಿ ೧೨ನೆಯ ಶತಮಾನದಲ್ಲಿ ಬಸವಣ್ಣ ಅಂತರ್‌ಜಾತಿ ವಿವಾಹವನ್ನು ಮುಂದುನಿಂತು ಮಾಡಿಸಿದಾಗ, ಹಿಂದೂ ಸಮಾಜದ ಪುರೋಹಿತಶಾಹಿಯ ಪ್ರಾಬಲ್ಯಕ್ಕೆ ಪೆಟ್ಟು ಬೀಳುವ ಸನ್ನಿವೇಶವು ಉಂಟಾಯಿತು. ಪರಿಣಾಮವೇನು ಎಂಬುದು ಎಲ್ಲರಿಗೂ ತಿಳಿದ ವಿಷಯವೇ. ಗೆಲಿಲಿಯೊ, ಜೈಲು ಸೇರಬೇಕಾಯಿತು. ಇಲ್ಲಿ ಕಲ್ಯಾಣದಲ್ಲಿ ರಕ್ತದ ಕೋಡಿ ಹರಿಯಿತು. ಮುಗ್ಧ, ಮೂಢ ಭಕ್ತಿ, ನಂಬಿಕೆಗಳನ್ನಿಟ್ಟುಕೊಂಡವರಿಗಿಂತಲೂ ಇಂಥ ಸ್ಥಾಪಿತ ಹಿತಾಸಕ್ತಿಗಳು ಸಮಾಜಕ್ಕೆ ಕಂಟಕಪ್ರಾಯರಾಗಿರುವುದು ಎಂದಿನಿಂದಲೂ ನಡೆದುಕೊಂಡು ಬಂದಿರುವ ವಾಸ್ತವ. ಜನರು ಮೌಢ್ಯದಿಂದ ಬಿಡುಗಡೆಗೊಂಡರೆ ತಮ್ಮ ಸ್ಥಾನಕ್ಕೆ ಕುತ್ತು ಬರುತ್ತದೆನ್ನುವ ಭಯದಿಂದ ಪರಂಪರೆಯ ಹೆಸರಿನಲ್ಲಿ ಹಳೆಯದೆಲ್ಲವೂ ಮುಂದುವರೆಯಬೇಕೆನ್ನುವ ಯಥಾಸ್ಥಿತಿವಾದಿಗಳಿವರು.

ಪ್ರಶ್ನೆಗೊಳಪಡುವುದೆಂಬ ಭಯ ಅಂದಿನ ಕ್ರಿಶ್ಚಿಯನ್ ಪುರೋಹಿತಶಾಹಿಗೆ. ಅದೇ ರೀತಿ ೧೨ನೆಯ ಶತಮಾನದಲ್ಲಿ ಬಸವಣ್ಣ ಅಂತರ್‌ಜಾತಿ ವಿವಾಹವನ್ನು ಮುಂದುನಿಂತು ಮಾಡಿಸಿದಾಗ, ಹಿಂದೂ ಸಮಾಜದ ಪುರೋಹಿತಶಾಹಿಯ ಪ್ರಾಬಲ್ಯಕ್ಕೆ ಪೆಟ್ಟು ಬೀಳುವ ಸನ್ನಿವೇಶವು ಉಂಟಾಯಿತು. ಪರಿಣಾಮವೇನು ಎಂಬುದು ಎಲ್ಲರಿಗೂ ತಿಳಿದ ವಿಷಯವೇ. ಗೆಲಿಲಿಯೊ, ಜೈಲು ಸೇರಬೇಕಾಯಿತು. ಇಲ್ಲಿ ಕಲ್ಯಾಣದಲ್ಲಿ ರಕ್ತದ ಕೋಡಿ ಹರಿಯಿತು. ಮುಗ್ಧ, ಮೂಢ ಭಕ್ತಿ, ನಂಬಿಕೆಗಳನ್ನಿಟ್ಟುಕೊಂಡವರಿಗಿಂತಲೂ ಇಂಥ ಸ್ಥಾಪಿತ ಹಿತಾಸಕ್ತಿಗಳು ಸಮಾಜಕ್ಕೆ ಕಂಟಕಪ್ರಾಯರಾಗಿರುವುದು ಎಂದಿನಿಂದಲೂ ನಡೆದುಕೊಂಡು ಬಂದಿರುವ ವಾಸ್ತವ. ಜನರು ಮೌಢ್ಯದಿಂದ ಬಿಡುಗಡೆಗೊಂಡರೆ ತಮ್ಮ ಸ್ಥಾನಕ್ಕೆ ಕುತ್ತು ಬರುತ್ತದೆನ್ನುವ ಭಯದಿಂದ ಪರಂಪರೆಯ ಹೆಸರಿನಲ್ಲಿ ಹಳೆಯದೆಲ್ಲವೂ ಮುಂದುವರೆಯಬೇಕೆನ್ನುವ ಯಥಾಸ್ಥಿತಿವಾದಿಗಳಿವರು.




ಮತ್ತೊಂದು ರೀತಿಯ ಜನರೂ ಇದ್ದಾರೆ: ಸಾಧಾರಣವಾಗಿ ಉದಾರವಾದಿಗಳು ಎಂದು ಕರೆಸಿಕೊಳ್ಳುವ ಇವರು ಕಂದಾಚಾರಗಳು ಕೊನೆಗಾಣಬೇಕೆಂಬ ಇಚ್ಛೆಯಿದ್ದರೂ 'ಸುಮ್ಮನೆ ಬೇರೆಯವರ ಮನಸ್ಸು ನೋಯಿಸುವುದೇಕೆ ?' ಎಂದು ಸುಮ್ಮನಾಗುವರು. ಇವರು 'ಗಾಯಗೊಳಿಸಲು ಸಿದ್ಧ, ಆದರೆ ಹೊಡೆಯಲು ತಯಾರಿಲ್ಲ' ಎಂಬಂತಹ ಜನ. ಇವರಿಂದ ಯಥಾಸ್ಥಿತಿವಾದಿಗಳಿಗೆ ಸ್ವಲ್ಪ ಹೆಚ್ಚು ಬಲವೂ ಬಂದೊದಗುತ್ತದೆ. ಇಂಥ ಪಲಾಯನವಾದಿ ಮನೋಧರ್ಮ ನಮ್ಮನ್ನು ಯಾವ ಸ್ಪಷ್ಟ ನಿಲುವನ್ನೂ ತಳೆಯಲು ಬಿಡುವುದಿಲ್ಲ.

ಅಂದರೆ, ಸಾಧಾರಣವಾಗಿ ಜನ ನಂಬುವ, ಒಪ್ಪುವ ವಿಷಯಗಳನ್ನು ಪ್ರಶ್ನಿಸಿ ಅಥವಾ ಅವುಗಳನ್ನು ವಿರೋಧಿಸಿ ಅವರ ಮನಸ್ಸಿಗೆ ಆಘಾತವನ್ನುಂಟುಮಾಡಬೇಕೆಂಬುದು ಇಲ್ಲಿನ ವಾದವಲ್ಲ. ಇಲ್ಲಿನ ವಿರೋಧವು ವ್ಯಕ್ತಿಗಳ ತತ್ವಕ್ಕೆ ಸಂಬಂಧಿಸಿದ್ದೆ ಹೊರತು, ವ್ಯಕ್ತಿಗಳಿಗಲ್ಲ. ಆ ತತ್ವಗಳು ಅವರ ವ್ಯಕ್ತಿತ್ವದ ಭಾಗವಾಗಿದ್ದರೆ ಆಗ ಈ ವಿರೋಧ ವೈಯಕ್ತಿಕವಾಗಿಯೂ ಕಾಣಬಹುದು. ಅದು ಅನಿವಾರ್ಯ; ಆದರೂ ವಿರೋಧದ ಮೂಲವಿರುವುದು ಚಿಂತನಾಕ್ರಮದಲ್ಲಿ ಎನ್ನುವುದು ಸತ್ಯ.

ಮನಸ್ಸಿಗೆ ನೋವುಂಟಾಗುವ ಪ್ರಕರಣಗಳು ಹೆಚ್ಚಾಗಿ ಧಾರ್ಮಿಕ ಕ್ಷೇತ್ರದಲ್ಲಿ ನಡೆಯುತ್ತವೆ. ಧರ್ಮದ ಹೆಸರಿನಲ್ಲಿ ಪ್ರಚಲಿತವಾಗಿರುವ ನಂಬಿಕೆಗಳು ಹಾಗೂ ಆಚರಣೆಗಳನ್ನು ಪ್ರಶ್ನೆ ಮಾಡದೆ ಮುಂದುವರೆಸಿಕೊಂಡು ಹೋದರೆ ಎಲ್ಲರಿಗೂ ಕ್ಷೇಮ. ಸಮಾಜ ಶಾಂತಮಯವಾಗಿರುತ್ತದೆ. ಇಲ್ಲದಿದ್ದರೆ ಅಶಾಂತಿ ಉಂಟಾಗಿ ಸಮಾಜದ ಸ್ವಾಸ್ಥ್ಯ ಕೆಡುತ್ತದೆ, ಎಂಬುದು ಪ್ರಮುಖ ಆರೋಪ.

ರಾಮನೆಂದರೆ ವಾಲ್ಮೀಕಿ ರಾಮಾಯಣದ ರಾಮ ಮಾತ್ರ ಎಂಬುದು ಒಪ್ಪಿದರೆ ಯಾವುದೇ ತೊಂದರೆಯಿಲ್ಲ. ಆ ರಾಮನನ್ನೇ ಅಧಿಕಾರದ ಹಾದಿಯಲ್ಲಿ ಒಂದು ಅಸ್ತ್ರವಾಗಿ ಬಳಸಬಹುದು. ಹಾಗಲ್ಲದೆ, ವಿವಿಧ ಸಮುದಾಯಗಳು ಹಲವು ರಾಮರನ್ನು ಸೃಷ್ಟಿಸಿವೆ ಅಂದಾಗ, ಒಂದು ರಾಜಕೀಯ ಅಸ್ತ್ರವಾಗಿ ರಾಮನ ಪ್ರಾಶಸ್ತ್ಯ ಕುಗ್ಗುತ್ತದೆ. ಇದೇ ಕಾರಣಕ್ಕೆ ಅಂಥ ವಿಷಯವನ್ನು ಪ್ರಸ್ತಾಪಿಸುವ ಗ್ರಂಥದ ವಿರುದ್ಧ ಒಂದು ಚಳುವಳಿಯೇ ರೂಪುಗೊಳ್ಳುತ್ತದೆ. ಯಾವುದೇ ಧರ್ಮದ ಪರವಾಗಿ, ಅದರ ರಕ್ಷಣೆಗಾಗಿ ಹೊರಡುವವರು ತಮ್ಮ ಧರ್ಮ ಗ್ರಂಥದಲ್ಲಿ ಹೇಳುವುದು ಸಾರ್ವಕಾಲಿಕ ಸತ್ಯ, ಅದನ್ನು ಯಾವ ಕಾರಣಕ್ಕೂ ಬದಲಾಯಿಸಲಾಗುವುದಿಲ್ಲ– ಎಂದು ಹಠತೊಡುತ್ತಾರೆ. ಆದರೆ ಯಾವುದೇ ಧರ್ಮ ಗ್ರಂಥ ಒಂದು ನಿರ್ದಿಷ್ಟ ಸಮುದಾಯ, ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ತನಗಾಗಿ ಸೃಷ್ಟಿಸಿಕೊಂಡದ್ದು ಎನ್ನುವ ಮಾತನ್ನು ಇವರು ಒಪ್ಪುವುದಿಲ್ಲ. ಅದು ಧಾರ್ಮಿಕವೆಷ್ಟೋ ಅಷ್ಟೆ ಸಾಮಾಜಿಕ ದಾಖಲೆ ಎನ್ನುವ ಸತ್ಯ ಅವರ ಮೂಲಭೂತವಾದದ ಭರದಲ್ಲಿ ಹುದುಗಿಹೋಗುತ್ತದೆ.

ಇತರರ ಭಾವನೆಗಳಿಗೆ ನೋವುಂಟುಮಾಡಬಾರದೆಂಬ ವಾದಕ್ಕೇ ಅಂಟಿಕೊಂಡಿದ್ದರೆ ಯಾವ ಸಮಾಜವೂ ಬದಲಾವಣೆಯನ್ನು ಕಾಣಲಾರದು. ಇದುವರೆಗೂ ಚರಿತ್ರೆಯಲ್ಲಿ ಕಂಡ ಎಲ್ಲ ಬದಲಾವಣೆಗಳೂ ಯಥಾಸ್ಥಿತಿಯನ್ನು, ಹಳೆಯ ಆಚರಣೆಗಳನ್ನು ಪ್ರಶ್ನಿಸುವುದರಿಂದಲೇ, ವಿರೋಧಿಸುವುದರಿಂದಲೇ ಆಗಿರುವಂಥವು. ಭಾರತೀಯ ಸಮಾಜದ ಮಟ್ಟಿಗಂತೂ ಇದು ನೂರಕ್ಕೆ ನೂರರಷ್ಟು ಸತ್ಯ. ಇಂಥ ಯೋಚನೆಯೇ ಎಲ್ಲರಿಗೂ ಇದ್ದಿದ್ದರೆ, ಇಂದು ಅಸ್ಪೃಶ್ಯತೆ ಶಿಕ್ಷಾರ್ಹ ಅಪರಾಧವಾಗುತ್ತಿರಲಿಲ್ಲ. ಸತಿಸಹಗಮನ, ದೇವದಾಸಿ ಪದ್ಧತಿ, ಬೆತ್ತಲೆ ಸೇವೆ, ಬಾಲ್ಯ ವಿವಾಹ ಮುಂತಾದ ಎಷ್ಟೋ ಆಚರಣೆಗಳು ಮುಂದುವರೆಯುತ್ತಲೇ ಇದ್ದವು. ಅವೆಲ್ಲವೂ ಜನರ ನಂಬಿಕೆಗೆ ಸಂಬಂಧಿಸಿದವೇ ಅಲ್ಲವೆ! ಜನರ ಈ ನಂಬಿಕೆಯನ್ನು ಹಿತಾಸಕ್ತ ಶಕ್ತಿಗಳು ಬಳಸಿಕೊಂಡು ತಮ್ಮ ಆಧಿಪತ್ಯವನ್ನು ಮುಂದುವರೆಸಿಕೊಳ್ಳುತ್ತವೆ. ಅವರ ಈ ಹುನ್ನಾರದ ಪರಿಣಾಮವಾಗಿ ಧರ್ಮದ, ಅದರ ಆಚರಣೆಗಳ ಬಗ್ಗೆ ಕೇವಲ ಕುರುಡು ಅಭಿಮಾನವಿರುವವರು ಇನ್ನೂ ಹೆಚ್ಚಿನ ಶೋಷಣೆಗೆ ಒಳಗಾಗುವರು.

ಈ ರೀತಿಯ ಶೋಷಣೆಯನ್ನು ವಿರೋಧಿಸಿದಾಗ ಬೆಲ್ಚಿ, ಕಂಬಾಲಪಲ್ಲಿ, ಚುಂಡೂರು, ಖೆರ್ಲಾಂಜೆ ಮುಂತಾದ ಕಡೆ ನಡೆದ ಮಾರಣಹೋಮಗಳು ಘಟಿಸುತ್ತವೆ. ಧರ್ಮದ ಹೆಸರಿನಲ್ಲಿ, ನಮ್ಮ ಪರಂಪರೆ ಎಂಬ ಸೋಗಿನಲ್ಲಿ ಸಮುದಾಯದ ಒಂದು ಜನಾಂಗವನ್ನು ಪ್ರಾಣಿಗಳಿಗಿಂತಲೂ ಕೀಳಾಗಿ ಕಾಣುವ ಪ್ರವೃತ್ತಿಯು ಇನ್ನೂ ಪೂರ್ತಿಯಾಗಿ ಅಳಿಸಿಹೋಗಿಲ್ಲ. ಕೆಲವು ಕಡೆಯಂತೂ ಈ ಅಸಹನೆ ಅತೀರೇಕಕ್ಕೆ ಹೋಗಿ ನರಮೇಧದಲ್ಲಿ ಪರ್ಯವಸಾನಗೊಳ್ಳುತ್ತದೆ. ಜನರ 'ಈ ನಂಬಿಕೆ'ಗೆ ಧಕ್ಕೆ ತಾರದೆ, ಈ 'ಭಾವನೆಯನ್ನು ನೋಯಿಸದೆ' ಸಾಮಾಜಿಕ ಬದಲಾವಣೆಯನ್ನು ಸಾಧ್ಯವಾಗಿಸುವುದಾದರೂ ಹೇಗೆ ? ವೈಯಕ್ತಿಕ ನಿಂದನೆಗೂ ಭಿನ್ನಾಭಿಪ್ರಾಯದ ಅಭಿವ್ಯಕ್ತಿಗೂ ನಡುವಿನ ವ್ಯತ್ಯಾಸ ತಿಳಿಯದಿದ್ದರೆ ಸದುದ್ದೇಶ ವಿರುವವರೂ ಇಂಥಾ ತಪ್ಪುಗಳನ್ನು ಮಾಡುವ ಸಂದರ್ಭಗಳೇ ಹೆಚ್ಚು.

ತೀವ್ರ ಬದಲಾವಣೆಗಳ ಈ ಯುಗದಲ್ಲಿ ನಾವು ಇನ್ನೂ 'ಭಾವನೆಗಳಿಗೆ ಧಕ್ಕೆಯಾಗಬಾರದು' ಎಂಬ ಈ ಮೋಸದ ಪರಿಕಲ್ಪನೆಗೆ ಅಂಟಿಕೊಂಡದ್ದೇ ಆದರೆ ಇಲ್ಲಿಯವರೆಗೂ ಎಲ್ಲ ಅನುಕೂಲಗಳನ್ನು ಅಧಿಕಾರವನ್ನು ಅನುಭವಿಸುತ್ತಿರುವವರ ಪರವಾಗಿಯೇ ಯೋಚಿಸಿದಂತಾಗುತ್ತದೆ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು. ಬದಲಾವಣೆಯಲ್ಲಿ, ಪ್ರಗತಿಯಲ್ಲಿ, ನಂಬಿಕೆ ಇರುವವರು ಇಂಥ ಅರ್ಥಹೀನ, ಅನರ್ಥಕಾರಿ ವಾದಕ್ಕೆ ಬಲಿಯಾಗದೆ ಮನುಷ್ಯ ವಿರೋಧಿ ಚಿಂತನೆಗಳು ಮತ್ತು ಆಚರಣೆಗಳನ್ನು ವಿರೋಧಿಸಿದಾಗ ಮಾತ್ರ ಜನರ ಏಳ್ಗೆ ಸಾಧ್ಯ. ಫ್ರಾನ್ಸಿನ ರಾಜಮನೆತನದವರ ಮನಸ್ಸಿಗೆ ನೋವಾಗುತ್ತದೆಂದು ಅಲ್ಲಿನ ಜನರು ಸುಮ್ಮನೆ ಕುಳಿತಿದ್ದರೆ 'ಸಮಾನತೆ, ಸ್ವಾತಂತ್ರ್ಯ, ಭ್ರಾತೃತ್ವ' ವೆಂಬ ಅತ್ಯಂತ ಮಾನವೀಯ ಮೌಲ್ಯಗಳು ಜಗತ್ತಿನಾದ್ಯಂತ ಪ್ರಖರ ಪ್ರಚಾರವನ್ನು ಪಡೆಯುತ್ತಲೇ ಇರಲಿಲ್ಲ. ಇಲ್ಲಿ ಮುಖ್ಯವಾದದ್ದು ಇತರರ ಭಾವನೆಗಳಿಗೆ ಧಕ್ಕೆಯಾಗುತ್ತದೆ, ಅಥವಾ ಆಗುವುದಿಲ್ಲ ಅನ್ನುವುದಲ್ಲ, ಆ ಭಾವನೆಗಳು ಯಥಾಸ್ಥಿತಿ ವಾದವನ್ನು, ಶೋಷಣೆಯನ್ನು ಪೋಷಿಸುವಂಥವೇ ಎನ್ನುವುದು. ಇಂಥ ಚಿಂತನೆಯನ್ನು ವಿರೋಧಿಸುವ ಪ್ರಕ್ರಿಯೆ ಅವಿರತವಾಗಿ ನಡೆದಾಗ ಮಾತ್ರ ಸಮಾಜ ಜೀವಂತವಾಗಿರಲು ಸಾಧ್ಯ, ಇಲ್ಲವಾದರೆ ಅದು ನಿಂತ ನೀರಾಗಿ ನಾರುವುದು ನಿಶ್ಚಯ.

**ನಗರಗೆರೆ ರಮೇಶ್**
'ನಾದ', ೩೬೬, ೮ನೇ ಅಡ್ಡ ರಸ್ತೆ, ೮ನೇ ಮುಖ್ಯ ರಸ್ತೆ, ಪದ್ಮನಾಭನಗರ
ಬೆಂಗಳೂರು -೫೬೦೦೭೦

# ಕಾಳೇಗೌಡ ನಾಗವಾರರ ಕಾವ್ಯ: ಒಂದು ಬದಲೀ ಓದು

ಡಾ|| ವಿನಯಾ

**ಕಾ**ಳೇಗೌಡ ನಾಗವಾರ ಅವರು ಕಥೆ, ಕಾವ್ಯ, ವಿಮರ್ಶೆ, ಜಾನಪದ ಸಂಗ್ರಹ, ಸಂಘಟನೆ, ಉಪನ್ಯಾಸ, ಬೋಧನೆ ಹೀಗೆ ಬಹುಮುಖಿಯಾಗಿ ತೊಡಗಿಕೊಳ್ಳುವ ಮೂಲಕ ತೊಂಭತ್ತರ ದಶಕದ ಕನ್ನಡ ಸಾಹಿತ್ಯ-ಸಂಸ್ಕೃತಿಯನ್ನು ರೂಪುಗೊಳಿಸಿದವರು. ಇವರ ಮೊದಲ ಕವನ ಸಂಕಲನ 'ಕರಾವಳಿಯಲ್ಲಿ ಗಂಗಾಲಗ್ನ' ಪ್ರಕಟವಾಗಿದ್ದು ೧೯೮೧ರಲ್ಲಿ. ಎರಡನೆಯ ಕವನ ಸಂಕಲನ 'ಕನ್ನೆಯ ಸ್ನೇಹ' ಪ್ರಕಟವಾಗಿದ್ದು ೧೯೯೦ರಲ್ಲಿ. ಬಂಡಾಯದ ಶೋಷಿತ ಪರ ನಿಲುವು ಮತ್ತು ಸಾಮಾಜಿಕ ನ್ಯಾಯದ ಕನಸು ಹಸಿಹಸಿಯಾಗಿದ್ದ ಕಾಲ ಅದು. ವಸಾಹತುಶಾಹಿ ಸಂವೇದನೆಯಲ್ಲಿ ಶಿಕ್ಷಣ ಮತ್ತು ಆಧುನಿಕತೆಗಳ ಸಮಾನತೆಯ ಆಶಾವಾದವನ್ನು ಬಿತ್ತಿದ್ದ ಸಂದರ್ಭ ಇದು. ಆದ್ದರಿಂದ ಆ ತಲೆಮಾರಿನ ಲೇಖಕರೊಳಗೆ ಸಂಭ್ರಮದ ಛಾಯೆ ಇತ್ತು. ಡಾ|| ಎಚ್. ಎಸ್. ರಾಘವೇಂದ್ರರಾವ್ ಅವರು ಗುರುತಿಸುವಂತೆ ತಾರುಣ್ಯ, ವಿದ್ಯಾಭ್ಯಾಸ ಮತ್ತು ಪ್ರೇಮ ಇವುಗಳ ಸಂಯೋಜನೆಯಿಂದ ಫಲಿತವಾಗಬಹುದಾದ ಆದರ್ಶವಾದವು ಸಾಮಾಜಿಕ ಹೋರಾಟಕ್ಕೆ ಪ್ರೇರಕ ಶಕ್ತಿಯಾಗಬಲ್ಲುದೆಂಬ ನಿಲುವು ಕಾಳೇಗೌಡ ನಾಗವಾರರದೂ ಆಗಿದೆ. ಕಳೆದ ಶತಮಾನದ ಕೊನೆಯ ದಶಕಗಳಲ್ಲಿ ಸಾಮಾಜಿಕ ಚರಿತ್ರೆಯಲ್ಲಿ ಪಲ್ಲಟವಾಗಿದೆ. ಆಧುನಿಕತೆಯ ರೂಪದಲ್ಲಿ ಅದರ ವಿರೋಧಿ ಸಂವೇದನೆಯಾದ ಜಾಗತೀಕರಣ ಕಾಲಿಟ್ಟಿದೆ. ದಮನಿತ ಸಂವೇದನೆಗೆ ಕಿಂಚಿತ್ತಾದರೂ ವಿಸ್ತರಣೆಯನ್ನು ಒದಗಿಸಿದ್ದ ಆಧುನಿಕತೆಯ ಸಾಮಾಜಿಕ ನ್ಯಾಯದ ಕನಸು ಸತ್ವಹೀನವಾಗಿದೆ. ಜಾತಿ ರಾಜಕಾರಣ, ಧಾರ್ಮಿಕ ಮತಾಂಧತೆ, ಬಹುರೂಪಿ ಲಿಂಗತಾರತಮ್ಯಗಳು ವಿಜೃಂಭಿಸುತ್ತಿವೆ. ಇಂತಹ ಸಂದರ್ಭದಲ್ಲಿ ಕನ್ನಡ ಸಂವೇದನೆಯನ್ನು ರೂಪುಗೊಳಿಸಿದ ಮುಖ್ಯ ಕವಿಯ ಕಾವ್ಯವನ್ನು ಅನುಸಂಧಾನಗೊಳಿಸಿಕೊಳ್ಳುವುದು ತುಂಬ ಅಗತ್ಯ ಎಂದುಕೊಂಡಿದ್ದೇನೆ. ನಾಗವಾರರ ಕವನ ಸಂಕಲನಗಳು ಪ್ರಕಟವಾದದ್ದು ಬಂಡಾಯ ಸಂವೇದನೆ ತನ್ನ ಶೃಂಗಸ್ಥಿತಿಯಲ್ಲಿದ್ದಾಗ, ಶೋಷಿತಪರ ನಿಲುವುಗಳು ಕನ್ನಡ ಮಾನಸವನ್ನು ಆವರಿಸಿಕೊಂಡ ದಿನಗಳಲ್ಲಿ. ನಾಗವಾರ ಅವರು ತುಂಬ ಪ್ರೀತಿಸುವ ಚಿಲಿಯ ಕವಿ ಪಾಬ್ಲೋ ನೆರುಡನ - *ರಕ್ತವಿದೆ ಬೀದಿಯ ಮೇಲೆ*

*ಬೀದಿಯ ಮೇಲೆ ರಕ್ತವಿದೆ*

ಎಂಬ ಸಾಲುಗಳು ಕಾವ್ಯವನ್ನು ಪ್ರೀತಿಸುವ ನಾಲಿಗೆಗಳಲ್ಲಿ ನಲಿಯುತ್ತಿದ್ದಾಗ. ವರ್ತಮಾನವನ್ನು ಕಾವ್ಯವಾಗಿಸುವ ಕರ್ಮಪಾಕದಲ್ಲಿ ಕನ್ನಡ ಕಾವ್ಯ ತನ್ನ ಸಂವಿಧಾನವನ್ನು ಬರೆಯುತ್ತಿದ್ದ ಸಂದರ್ಭವದು. ಎಲ್ಲ ಬಗೆ ಶೋಷಿತ ಸಂವೇದನೆಗಳು ತಮ್ಮ ಅಭಿವ್ಯಕ್ತಿಗಾಗಿ ನುಗ್ಗಿದ ನೀರಿನಂತೆ ದಿಕ್ಕು ಹುಡುಕುತ್ತಿದ್ದಾಗ, ಹಲವು ಮಾದರಿಗಳು ತೆರೆದುಕೊಂಡವು. ಇಂತಹ ಸಂಕ್ರಮಣ ಕಾಲದಲ್ಲಿ ನಾಗವಾರರು ವ್ಯವಸ್ಥೆಯ ಜಡತ್ವವನ್ನು ಚಲನಶೀಲಗೊಳಿಸಲು ಆಯ್ದುಕೊಳ್ಳುವುದು ಏಕಲಿಂಗೀ ಧೋರಣೆಯ ವಿರೋಧವನ್ನು. ವಚನಕಾರರು ಭವಿಯನ್ನು ಭಕ್ತನನ್ನಾಗಿಸುವ ಮೂಲಕ ಸಾಮಾಜಿಕ ಪರಿವರ್ತನೆಯ ಕನಸನ್ನು ಕಾಣುವಂತೆ ನಾಗವಾರರು ವೈಯಕ್ತಿಕ ಪಲ್ಲಟವನ್ನು ಒತ್ತಾಯಿಸುತ್ತಾರೆ. ಪ್ರಾಚೀನ ಕೋಟೆಯಂತಿರುವ ಬದುಕನ್ನು ಪ್ರೇಮದ ಚಲನಶೀಲತೆಗೆ ಒಡ್ಡುವ ಮೂಲಕ ಸಾಮಾಜಿಕ ಸಂಚಲನವನ್ನು ತರಬಹುದೆಂದು ಅಪೇಕ್ಷಿಸುತ್ತಾರೆ. ಇದಕ್ಕೆ ಲೋಹಿಯಾ ಹೇಳುವ ''ಪ್ರೇಮ ಮತ್ತು ಸೃಜನಶೀಲತೆ ಮನುಷ್ಯನನ್ನು ಸಹಜಗೊಳಿಸುವ ಪ್ರಮುಖ ನೆಲೆಗಳು'' ಎಂಬ ಚಿಂತನೆ ಬೆನ್ನೆಲುಬಾಗಿದೆ.

ನಾಗವಾರರ ಕಾವ್ಯಗಳ ಬಗ್ಗೆ ಕನ್ನಡ ವಿಮರ್ಶೆ ಸಾಕಷ್ಟು ಗಮನವನ್ನು ನೀಡಿದೆ. ಅವರ ಸಮಕಾಲೀನ ವಿಮರ್ಶೆ ಕೂಡ ಅವರನ್ನು ಮುಖ್ಯವಾಗಿ ಪರಿಗಣಿಸಿದೆ. ಬಂಡಾಯದ ನೇರ ಪ್ರತಿಭಟನಾತ್ಮಕ ದಾರಿಯನ್ನು ತುಳಿಯದೆ ಪಿಸುಮಾತುಗಳನ್ನು ಪೋಣಿಸಿದರು ಎಂಬ ಅಚ್ಚರಿ ಹೆಚ್ಚಾಗಿ ವ್ಯಕ್ತವಾಗಿದೆ. ಇವರ ಕಾವ್ಯಗಳ ಸೂಕ್ಷ್ಮ ಸಂವೇದನಾಶೀಲತೆ, ಸೌಂದರ್ಯ ಪ್ರಜ್ಞೆ, ಕಾವ್ಯ ನಿರ್ಮಿತಿಯ ಎಚ್ಚರ, ಅಂತರ್ಮುಖತೆಯನ್ನು ಜೋಪಾನವಾಗಿಟ್ಟುಕೊಂಡ ರೀತಿ, ಸಹಜತೆಯೆಡೆಗೆ ತುಡಿವ ಜಲತತ್ವ... ಹೀಗೆ ಬಹುಮುಖಿ ಸಾಧ್ಯತೆಗಳನ್ನು ತೋರಿದ್ದಾರೆ. ಇಷ್ಟಾಗಿಯೂ ಈ ಕವಿತೆಗಳು ಮತ್ತೊಂದು 'ಬದಲೀ ಓದಿಗೆ' ತೆರೆದುಕೊಳ್ಳುತ್ತಿರುವ ರೀತಿ ಬೆರಗಿನದು. ಮತ್ತೆ ಮತ್ತೆ ಅನುಸಂಧಾನಗೊಳಿಸಿಕೊಳ್ಳುವ ಇಲಾಸ್ಟಿಸಿಟಿ ಯಾವುದೇ ಕೃತಿಯೊಂದರ ಗುಣಾತ್ಮಕ ಅಂಶವೇ ಆಗಿದೆ.

ಕೃತಿ ರಚನೆಗೂ ಕೃತಿ ಓದಿಗೂ ಕಾಲ ಮತ್ತು ಚಿಂತನಾ ವಿಧಾನಗಳಲ್ಲಿ ಮೂಲಭೂತ ವ್ಯತ್ಯಾಸಗಳಿದ್ದಾಗ ಕೃತಿ ಬಿಟ್ಟುಕೊಡುವ ಅರ್ಥಗಳು ಹಲವು. ಅದು ಪಾರದರ್ಶಕವಷ್ಟೇ ಅಲ್ಲ, ವಕ್ರೀಭವನವೂ ಆಗಿರುತ್ತದೆ. ಪರಂಪರೆಯಿಂದ ದತ್ತವಾದ ತಿಳುವಳಿಕೆಗಳಿಂದ ಬದುಕನ್ನು ಗ್ರಹಿಸಿಕೊಳ್ಳುವುದಕ್ಕೂ ಬದುಕು ನೀಡಿದ ತಿಳುವಳಿಕೆಗಳ ಮೂಲಕ ಪರಂಪರೆಯನ್ನು ಪರಾಮರ್ಶಿಸುವುದಕ್ಕೂ ವ್ಯತ್ಯಾಸವಿದೆ. ಬಸವರಾಜ ಕಲ್ಗುಡಿಯವರು ಹೇಳುವಂತೆ ಕೃತಿಯೊಂದರ ಪ್ರತಿಯೊಂದು ಓದು ಕೂಡ ಒಂದು 'ಮಿಸ್-ರೀಡಿಂಗ್' (ಅಪ ಓದು) ಆಗಿರುತ್ತದೆ. ಆದ್ದರಿಂದ ಬದುಕನ್ನು ನಾವು ಓದುವ ಬದಲೀ ಕ್ರಮದಿಂದಾಗಿ ಈ ಓದು ಕೂಡ ಒಂದು ಬದಲೀ ಓದಾಗಿದೆ.

ನಾಗವಾರರ ಕಾವ್ಯಲೋಕವನ್ನು ಅಧ್ಯಯನದ ಅನುಕೂಲಕ್ಕಾಗಿ ಎರಡು ರೀತಿಗಳಲ್ಲಿ ವಿಂಗಡಿಸಬಹುದು. ೧) ಸಮಕಾಲೀನ ಸಾಮಾಜಿಕ ರಾಜಕೀಯ ಸಂಗತಿಗಳ ಸಹಸ್ಪಂದನ; ೨) ಗಂಡು ಹೆಣ್ಣು ಎಂಬ ಮಿಥ್ ಮೂಲಕ ವ್ಯವಸ್ಥೆಯ ಚೌಕಾಬಂದಿಯನ್ನು ಉಲ್ಲಂಘಿಸುವುದು.

ತನ್ನ ಕಾಲವನ್ನು ಬಿಂಬಿಸಿಕೊಳ್ಳದ ಕಾವ್ಯ ಮುಂದಿನ ತಲೆಮಾರಿಗೆ ಬರಡಾಗಿ ಗೋಚರಿಸುತ್ತದೆ. ಸೃಜನಶೀಲ ಮನಸ್ಸು ವರ್ತಮಾನಕ್ಕೆ ಸ್ಪಂದಿಸುವ ದಾಖಲೆಯಾಗಿ ಇಲ್ಲಿ ಹಲವಾರು ಕವಿತೆಗಳಿವೆ. ಅಂಬೇಡ್ಕರ್, ಇಂದಿರಾಗಾಳಿ ಮೊದಲಾದ ವ್ಯಕ್ತಿಕೇಂದ್ರಿತ ಕವಿತೆಗಳಿವೆ. ರಾಮರಾಜ್ಯ, ಸ್ವಾತಂತ್ರ್ಯೋತ್ಸವ ೪೦ ಮೊದಲಾದ ಸಾಮಾಜಿಕ ಕೇಂದ್ರದ ಕವಿತೆಗಳಿವೆ. ಈ ವಿಂಗಡನೆ ಕವಿತೆಯ ಕೇಂದ್ರ ವೈಯಕ್ತಿಕತೆಯಿಂದ ಸಾಮಾಜಿಕತೆಯೆಡೆಗೆ ಚಲಿಸುತ್ತದೆಯೋ ಸಾಮಾಜಿಕತೆಯಿಂದ ವೈಯಕ್ತಿಕತೆಯೆಡೆಗೆ ಚಲಿಸುತ್ತದೆಯೋ ಎಂಬುದನ್ನು ತಿಳಿಯುವುದಕ್ಕಷ್ಟೇ ಸೀಮಿತವಾದದ್ದು. ಬಂಡಾಯ ಸಂದರ್ಭದಲ್ಲಿ ಬಂದ ಉಳಿದ ಕವಿತೆಗಳ ಸಂವೇದನೆಗೂ ಇವುಗಳಿಗೂ ಮೂಲಭೂತ ವ್ಯತ್ಯಾಸಗಳಿಲ್ಲ. ಆದರೆ

ನಾಗವಾರರ ಕಾವ್ಯಗಳ ಬಗ್ಗೆ ಕನ್ನಡ ವಿಮರ್ಶೆ ಸಾಕಷ್ಟು ಗಮನವನ್ನು ನೀಡಿದೆ. ಅವರ ಸಮಕಾಲೀನ ವಿಮರ್ಶೆ ಕೂಡ ಅವರನ್ನು ಮುಖ್ಯವಾಗಿ ಪರಿಗಣಿಸಿದೆ. ಬಂಡಾಯದ ನೇರ ಪ್ರತಿಭಟನಾತ್ಮಕ ದಾರಿಯನ್ನು ತುಳಿಯದೆ ಪಿಸುಮಾತುಗಳನ್ನು ಪೋಣಿಸಿದರು ಎಂಬ ಅಚ್ಚರಿ ಹೆಚ್ಚಾಗಿ ವ್ಯಕ್ತವಾಗಿದೆ. ಇವರ ಕಾವ್ಯಗಳ ಸೂಕ್ಷ್ಮ ಸಂವೇದನಾಶೀಲತೆ, ಸೌಂದರ್ಯ ಪ್ರಜ್ಞೆ, ಕಾವ್ಯ ನಿರ್ಮಿತಿಯ ಎಚ್ಚರ, ಅಂತರ್ಮುಖತೆಯನ್ನು ಜೋಪಾನವಾಗಿಟ್ಟುಕೊಂಡ ರೀತಿ, ಸಹಜತೆಯೆಡೆಗೆ ತುಡಿವ ಜಲತತ್ವ... ಹೀಗೆ ಬಹುಮುಖಿ ಸಾಧ್ಯತೆಗಳನ್ನು ತೋರಿದ್ದಾರೆ. ಇಷ್ಟಾಗಿಯೂ ಈ ಕವಿತೆಗಳು ಮತ್ತೊಂದು 'ಬದಲೀ ಓದಿಗೆ' ತೆರೆದುಕೊಳ್ಳುತ್ತಿರುವ ರೀತಿ ಬೆರಗಿನದು. ಮತ್ತೆ ಮತ್ತೆ ಅನುಸಂಧಾನಗೊಳಿಸಿಕೊಳ್ಳುವ ಇಲಾಸ್ಟಿಸಿಟಿ ಯಾವುದೇ ಕೃತಿಯೊಂದರ ಗುಣಾತ್ಮಕ ಅಂಶವೇ ಆಗಿದೆ.

ದೇಶದ ಚರಿತ್ರೆಯನ್ನು ದಾಖಲಿಸುವಾಗ ಎಲ್ಲ ಏಳುಬೀಳುಗಳೊಂದಿಗೆ ದಾಖಲಿಸಿಕೊಳ್ಳುವ 'ಸ್ವಾತಂತ್ರ್ಯೋತ್ಸವ ೫೦'ದಂಥ ಅಪರೂಪದ ಕವಿತೆಯಿದೆ. ದೇಶವಿಭಜನೆಯ ನೋವು, ಕ್ರೌರ್ಯ ಮತ್ತು ಸಂಕಟಗಳಿಗೆ ಕನ್ನಡ ಸಂವೇದನೆ ತೆರೆದುಕೊಂಡಿದ್ದು ವಿರಳ. ಸಾದತ್ ಹಸನ್ ಮಾಂಟೊ, ಅಮೃತಾ ಪ್ರೀತಂ ಮೊದಲಾದವರಿಗೆ ಸಂವೇದನೆಯನ್ನು ರೂಪಿಸಿದ ಚಾರಿತ್ರಿಕ ಅನಾಹುತದ ಸೆಳಕುಗಳು ಕನ್ನಡದಲ್ಲಿ ವ್ಯಾಪಿಸಿಕೊಳ್ಳಲಿಲ್ಲ. ಎಚ್. ವಿ. ಸಾವಿತ್ರಮ್ಮನವರ 'ನಿರಾಶ್ರಿತೆ' ಎಂಬ ಕಥನದಂತೆ, ನಾಗವಾರರ 'ಸ್ವಾತಂತ್ರ್ಯೋತ್ಸವ ೫೦' ಎಂಬ ಕವಿತೆ ದೇಶವಿಭಜನೆಯ ಕರಾಳ ಸಂಗತಿಯನ್ನೊಳಗೊಂಡಿದೆ. ಕವಿಗೆ ವಿಭಜನೆ ಕ್ರೂರವಾಗಿ ಕಾಣುವುದು ದೇಶಪ್ರೇಮ ಎಂಬ ಭಾವನಾತ್ಮಕ ಸ್ಥಿತಿಗಲ್ಲ, ಸಾಮಾನ್ಯ ಅಸಹಾಯಕರ ಬದುಕುವ ಹಕ್ಕನ್ನು ಕಸಿದುಕೊಳ್ಳುವ ವಾಸ್ತವಕ್ಕಾಗಿ. ''ಬರಿದು ಕೈ ಮುರಿದ ಮನವಾಗಿ ಉಟ್ಟ ಬಟ್ಟೆಗಳಲ್ಲೆದ್ದ ಉಣ್ಣದೊಡಲುಗಳ'' ಕಥೆ ಹೇಳುವ ಕವಿಯ 'ತಾಯ ಮನಸಿಗೆ' ಪರದೇಸಿ ಗರ್ಭ ಹೊತ್ತ ಎಳೆಯ ಬಾಲೆಯರ ಕಣ್ಣೊಳಗಿನ ಯಾತನೆ ಕಾಡುತ್ತದೆ. ಈ ಚಿತ್ರವನ್ನು ಮಗುಚಿಹಾಕಿ ಸ್ವಾತಂತ್ರ್ಯದ ಉತ್ಸವದಲ್ಲಿ ಪಾಲು ಪಡೆಯುವುದು ಕಷ್ಟವಾಗುತ್ತದೆನ್ನುವುದೇ ನಾಗವಾರರ ಸಂವೇದನಾಶೀಲತೆಗೆ ಸಾಕ್ಷಿಯಾಗಿದೆ.

ಇವರ ಕಾವ್ಯಗಳ ಪ್ರಧಾನ ಸೆಲೆಯಿರುವುದು ಹೆಣ್ಣು-ಗಂಡಿನ ಸಂಬಂಧದ ಸಂಕರ ಸೃಷ್ಟಿಯಲ್ಲಿ, ಬದುಕನ್ನು ಗ್ರಹಿಸುವುದಕ್ಕೆ ಹೆಣ್ಣು ಒಂದು ಮಾಧ್ಯಮ. ಬೇಂದ್ರೆಗೆ 'ಬೆಳಗು' ಭಾಷೆಯಾದಂತೆ ನಾಗವಾರರಿಗೆ 'ಹೆಣ್ಣು' ಭಾಷೆ. ಹೆಣ್ಣನ್ನು ಗೈರುಹಾಜರಾಗಿಸಿಕೊಂಡ ಒಂದು ನೋಟವೇ ಸಾಧ್ಯವಿಲ್ಲ ಎನ್ನುವಷ್ಟು, ಇವರ ಕಾವ್ಯಗಳ ಭಿತ್ತಿ ಹೆಣ್ಣು. ಉದಾಹರಣೆಗೆ 'ಉತ್ಕಲದಲ್ಲೊಂದು ಹಗಲ' ಎಂಬ ಕವಿತೆಯನ್ನು ಗಮನಿಸಬಹುದು. ಉತ್ಕಲದ ನೋಟ ಪೂರ್ಣಗೊಳ್ಳುವುದು ಅಲ್ಲಿಯ ಚೆಲುವೆಯರ ಕೋಮಲತೆಯ ಇರುವಿಕೆಯೊಂದಿಗೆ. ನರಸಿಂಹಸ್ವಾಮಿಯವರ ಕಾವ್ಯದ ಪ್ರಧಾನ ಭಿತ್ತಿ ಹೆಣ್ಣಾಗಿದ್ದರೂ, ಅಲ್ಲವಳು ಪ್ರತಿನಿಧೀಕರಣಗೊಳ್ಳುವುದು ಹೆಂಡತಿಯಾಗಿ! ಹಾಗಾಗಿ ಅಲ್ಲಿಯ ಭಾವಕೋಶಕ್ಕೆ ಖಾಸಗಿ ಒಲವು ನಿಲುವುಗಳು ದತ್ತವಾಗುತ್ತವೆ. ನಾಗವಾರರು ತಮ್ಮ ಕಾವ್ಯವನ್ನು ''ನನ್ನ ಖಾಸಗಿ ಖುಷಿ ಮತ್ತು ಬಿಡುಗಡೆಗಾಗಿ ರಚನೆಯಾದವು'' ಎಂದು ಹೇಳಿದ್ದಾರಾದರೂ, ಕಾವ್ಯಗಳ ನಿರ್ವಚನದಲ್ಲಿ ಕವಿಯ ನೇರ ಹಾಜರಾತಿ ಕಾಣುವುದಿಲ್ಲ. ಇಲ್ಲಿ ಪ್ರತಿನಿಧೀಕರಣಗೊಳ್ಳುವ ಹೆಣ್ಣು ಸಂಬಂಧದ ಐಡೆಂಟಿಟಿಯನ್ನು ಹೊಂದಿದವಳಲ್ಲ. ಆಧುನಿಕತೆಯ ಕಾರಣದಿಂದ ಶಿಕ್ಷಣ ಮತ್ತು ಉದ್ಯೋಗಗಳಲ್ಲಿ ಮೊದಲ ಬಾರಿ ಕಾಣಿಸಿಕೊಂಡ 'ಸಾಮಾಜಿಕ ಐಡೆಂಟಿಟಿ' ಇಲ್ಲಿದೆ. ಇದು ಆಧುನಿಕ ಕನ್ನಡ ಕಾವ್ಯದಲ್ಲಿ ಹೆಣ್ಣು ಪ್ರತಿನಿಧೀಕರಣಗೊಳ್ಳುತ್ತಿರುವ ಹೊಸ ವಿನ್ಯಾಸವೂ ಹೌದು. ಈ ವಿನ್ಯಾಸದಲ್ಲಿ ಸಹಜ ಜೀವಂತಿಕೆಯನ್ನು ಧಾರಣಗೊಳಿಸುವಲ್ಲಿ ನಾಗವಾರರ ಕಾವ್ಯ ಯಶಸ್ವಿಯಾಯಿತೆ, ಎಂಬುದು ಪ್ರಶ್ನೆ. ನಾಗವಾರರಿಗೆ ತುಂಬ ಇಷ್ಟವಾದ ಪರಿಕಲ್ಪನೆ ಪ್ರೀತಿ ಮತ್ತು ನಿರ್ಭೀತಿ. ವೈಯಕ್ತಿಕವಾದ ಸಾಂಪ್ರದಾಯಿಕ ಗಡಿಯ ಉಲ್ಲಂಘನೆ, ಸಾಮಾಜಿಕ ಸೀಮೋಲ್ಲಂಘನೆಯೂ ಆಗಬಹುದೆಂಬ ಚಿಂತನೆ ಕವಿಯದು. ಸ್ತ್ರೀ ಸಮಾನತೆಯನ್ನು ಪ್ರಬಲವಾಗಿ ಪ್ರತಿಪಾದನೆ ಮಾಡುವ ನಾಗವಾರರ ಕಾವ್ಯಗಳಲ್ಲಿ ಈ ಚಿಂತನೆಗಳು ಅಂಚಿನಲ್ಲಿ ನಿಂತುಬಿಡುತ್ತವೆ.

ನಾಗವಾರರ ಕಾವ್ಯಜಗತ್ತಿನ ನಾಯಕ ಕುಮೀಬಾ. ಜೀವಮೂಲ ಕಾಮದ ಪ್ರತೀಕವಾದ ಕುಮೀಬಾ ಅನುರಕ್ತ. ಹಾಗಾಗಿ ಕಾವ್ಯದ ನಾಯಕಿ ಅನು. ಈ ಪಾತ್ರಗಳು ಕವಿಯ ಜೀವನ ಗ್ರಹಿಕೆಯನ್ನೂ ಸ್ಪಷ್ಟಪಡಿಸುತ್ತವೆ. 'ಕರಾವಳಿಯಲ್ಲಿ ಗಂಗಾಲಗ್ನ' ಎಂಬ ಕಥನ ಕಾವ್ಯವನ್ನು ಗಮನಿಸಬಹುದು. ಗೋಕರ್ಣದ ಕಡಲ ತಡಿಯಲ್ಲಿ ಮುಸ್ಸಂಜೆ ನಡೆಯುವ ಕಥನ ಪ್ರಸಂಗಕ್ಕೆ ಕಾವ್ಯದಲ್ಲಿ ಆದ್ಯತೆಯಿದೆ. ಇದು ಅಲ್ಲಿ ನಡೆಯುವ ಜನಪದ ಆಚರಣೆಯ ಪೂರ್ವಾರ್ಧ. ಗೌರಿಯ ಕಣ್ತಪ್ಪಿಸಿ ಶಿವ ಗಂಗೆಯನ್ನು ವಿವಾಹವಾಗಲು ಓಡಿ ಬರುತ್ತಾನೆ. ಶಿವನ ವಿಗ್ರಹವನ್ನು ಪಲ್ಲಕ್ಕಿಯಲ್ಲಿಟ್ಟುಕೊಂಡ ಪೂಜಾರಿಗಳ ಸಣ್ಣ ಗುಂಪು ಕರಾವಳಿಯ ಕಾಲುದಾರಿಯಲ್ಲಿ ಅಕ್ಷರಶಃ ಓಡಿ ಬರುತ್ತಾರೆ. ಬೆಳಗು ಜಾವದಲ್ಲಿ ಗಂಗಾವಳಿ ನದೀತೀರದ ಗಂಗೆಯ ದೇವಸ್ಥಾನಕ್ಕೆ ಬರುತ್ತಾರೆ. ಗಂಗೆಯ ದೇವಸ್ಥಾನದಲ್ಲಿ ಪೂಜಾರಿಗಳು ಬಾಗಿಲು ತೆಗೆಯುವುದಿಲ್ಲ. ಶಿವನನ್ನು ಬಾಗಿಲಲ್ಲಿ ತಡೆಯಲಾಗುತ್ತದೆ. ಶಿವ-ಗಂಗೆಯರ ನಡುವೆ ಎರಡು ಗಂಟೆಗಳಿಗೂ ಮೇಲ್ಪಟ್ಟು ವಾಗ್ವಾದ ನಡೆಯುತ್ತದೆ.

ಬೆಳಗಿನ ೫ ಗಂಟೆಯಷ್ಟೊತ್ತಿಗೆ ದೇವಾಲಯದ ಬಾಗಿಲು ತೆಗೆದು, ಶಿವ-ಗಂಗೆಯರ ವಿವಾಹ ತರಾತುರಿಯಿಂದ ನಡೆದು, ೬ ಗಂಟೆ ಹೊತ್ತಿಗೆ ಶಿವದೇವರು ಹೊರಳಿ ಮತ್ತೊಂದು ದಾರಿಯಿಂದ ತನ್ನ ದೇವಾಲಯ ತಲುಪ ಬೇಕಾಗುತ್ತದೆ. ಬೆಳಗಾಗುವಷ್ಟೊತ್ತಿಗೆ ಜಾತ್ರ ಕರಗಿ ಇಡೀ ಮೈದಾನ ಬರೀ ಕಸ - ಕಡ್ಡಿಗಳಿಂದ ತುಂಬಿರುತ್ತದೆ. ಇಡೀ ಘಟನೆ ಒಂದು ಪ್ರಹಸನದಂತೆ ನಡೆಯುತ್ತದೆ. ಬಾಲ್ಯ ದಿಂದಲೂ ನಮ್ಮ ಬದುಕಿನೊಂದಿಗೆ ಬೆರೆತುಹೋದದ್ದು ಗಂಗಾಲಗ್ನದ ಈ ಉತ್ತರಾರ್ಧ. ಈ ಕಥಾನಕ ಅಲ್ಲಿಯ ಜನಮಾನಸದಲ್ಲಿ ಶಿವತತ್ವವಾಗಿ ಬೇರೂರಿಲ್ಲ, ಗಂಗೆಯ ಅಸಹಾಯಕತೆಗೆ ಮಿಡಿವ ಸ್ತ್ರೀತತ್ವವಾಗಿ ಬೇರೂರಿದೆ. ಈ 'ಗಂಗಾಲಗ್ನ' ಗಂಗೆಯ ಆಯ್ಕೆಯಲ್ಲ ಶಿವನ ಆಯ್ಕೆಯದು. ತನ್ನದಲ್ಲದ ಆಯ್ಕೆಗೆ ಒಡ್ಡಿಕೊಳ್ಳುವಾಗಿನ ಪ್ರತಿರೋಧ, ಸೆಡವುಗಳೆಲ್ಲ ಆಚರಣೆಯಲ್ಲಿವೆ. ಸಾಮಾಜಿಕವಾಗಿ ಕೂಡ ಸಂಚಲನೆ ನಡೆಯುವುದು ದಮನಿತ ಸಂಸ್ಕೃತಿಯಲ್ಲಲ್ಲ, ಮೇಲ್ ಸಂಸ್ಕೃತಿಯಲ್ಲಿ, ದೇವಾಲಯವನ್ನು ಶಿವ ಪ್ರವೇಶಿಸುವ ಪೂರ್ವದಲ್ಲಿ ನಡೆಯುವ ಇಡೀ ಸಂಭಾಷಣೆ ಪುರುಷ ಸೂಕ್ತವೇ ಆಗಿದೆ. 'ಬಯಕೆ-ಬಳಕೆ'ಯ ಸ್ಥಿತಿಗೆ ಹೆಣ್ಣನ್ನು ಸನ್ನದ್ಧಗೊಳಿಸುವಂತೆ ಗಂಗಾಲಗ್ನದ ಕಥೆಯಿದೆ. ದೈವಿಕ ಸಂಸ್ಕೃತಿಯಲ್ಲಿ ಹೆಣ್ಣಿನ ಪಾತಿವ್ರತ್ಯದ ಮಹತಿಯನ್ನು ಸಾರಲು 'ತುಳಸಿ ಲಗ್ನ' ವಿದ್ದಂತೆ, ದ್ರಾವಿಡ ಸಂಸ್ಕೃತಿಯಲ್ಲಿ ಗಂಗಾಲಗ್ನವಿದೆ. ಸಮಾಜವಾದಿ ಚಿಂತನೆಗೆ ಇದು ಜನಸಾಗರದ ಕನಸಿನಾಳದ ಸುಪ್ತ ಬಯಕೆಯ ಸಂಭ್ರಮಾಚರಣೆಯಾಗಿ ಕಂಡರೆ, ಮಾರ್ಕ್ಸ್‌ವಾದಿ ಚಿಂತನೆಗೆ ಪುರಾಣ ಪರಂಪರೆಯೊಳಗಿನ ಕ್ರಾಂತಿಕಾರಕ ಸ್ಫೋಟಕವಾಗಿ ಕಾಣುತ್ತದೆ. ಆದರೆ ಮಹಿಳಾ ಓದಿಗೆ ಪೌರಾಣಿಕ ಮಿಥ್‌ಗಳೊಳಗೆ ಸೇರಿಹೋದ ಹೆಣ್ಣಿನ ದಮನಿತ ಸಂವೇದನೆಯಾಗಿ ಕಾಣುತ್ತದೆ. ಈ ಕವಿತೆಯ ಒಳ ರಚನೆಯಲ್ಲಿ ಬರುವ ಪೂರ್ಣ ಮತ್ತು ಕಾಮ್ರೇಡ್ ಎಂಬ ಪಾತ್ರಗಳಿಗೂ ಗಂಗೆ ಮತ್ತು ಶಿವ ಎಂಬ ರೂಪಕಗಳಿಗೂ ಆಂತರಿಕ ಸಮನ್ವಯ ನಡೆಯುವುದಿಲ್ಲ. ಗಂಗೆಯ ಸ್ಥಗಿತತೆಗೂ ಪೂರ್ಣಳ ಚಲನಶೀಲತೆಗೂ ವ್ಯತ್ಯಾಸವಿದೆ.

*ಕಾಮ್ರೇಡ್, ಕಾಮ್ರೇಡ್ ಕ್ರಾಂತಿಯ ಗಡಿಗೆರೆಗಳು*
*ಸದಾ ವಿಸ್ತರಿಸುತ್ತಿರಬೇಕು ಈ ಕಡಲಂತೆ*
*ನೀಳಾಕಾಶದಂತೆ ನಿತ್ಯ ಜೀವಂತಿಕೆಯಲ್ಲಿ;*

ಎಂಬ ಅಪ್ಪಟ ಹೃದಯವಂತಿಕೆಯ ಕನಸಿನ ಈ ಮಾತುಗಳು ಕಾವ್ಯದ ಕಥನದೊಂದಿಗೆ ಜೋಡಿಸಿದಾಗ ಹಲವು ಗೊಂದಲಗಳನ್ನು ಹುಟ್ಟಿಸುತ್ತವೆ. ಈ ಕವಿತೆ ತನ್ನ ಚಿಂತನೆಯಲ್ಲಿ ಕಿಷನ್ ಪಟ್ನಾಯಕ್ ಅವರು ಹೇಳುವ "ಹೆಣ್ಣಿನ ನಿಜವಾದ ಸ್ವಾತಂತ್ರ್ಯವೆಂದರೆ ಲೈಂಗಿಕ ಸ್ವಾತಂತ್ರ್ಯ" ಎಂಬ ಅಭಿಪ್ರಾಯವನ್ನು ಒಳಗೊಂಡಿದೆ. ಎರಡೂ ಸಂಕಲನಗಳಲ್ಲಿ ಮತ್ತೆ ಮತ್ತೆ ಪ್ರಸ್ತಾಪಗೊಳ್ಳುವ ಹೆಣ್ಣು-ಗಂಡಿನ ಸಂಬಂಧದ ಮುಕ್ತತೆಯನ್ನೂ ಈ ಮೂಲಕ ಓದಿ ಕೊಳ್ಳಬೇಕಾಗುತ್ತದೆ, ಮರುಚಿಂತನೆಗೆ ಒಡ್ಡಬೇಕಾಗುತ್ತದೆ. ಹೆಣ್ಣಿನ ಸ್ವಾತಂತ್ರ್ಯ ಮತ್ತು ಸಮಾನತೆಯ ಪರಿಕಲ್ಪನೆಗಳು ಪುರುಷ ಗೃಹೀತಗಳಾದಾಗ ಎದುರಾದ ತೊಡಕು ಗಳಂತೆಯೂ ಇದನ್ನು ಗಮನಿಸಬೇಕು. ಸ್ತ್ರೀ ಚೈತನ್ಯವನ್ನು ಅಪಾರ ಕಾಳಜಿ ಮತ್ತು ವಿಶ್ವಾಸದಿಂದ ನೋಡುವ ಕವಿ ನಾಗವಾರರಿಗೂ ಗಂಡು-ಹೆಣ್ಣಿನ ದೈಹಿಕ ಸಾಮೀಪ್ಯ ಕ್ರಾಂತಿಕಾರಕ ಸಾಧ್ಯತೆಯಾಗಿ ಕಾಣುತ್ತದೆ. ಸ್ತ್ರೀ ಸ್ವಾತಂತ್ರ್ಯದ ಕನಸು-ಕಲ್ಪನೆಗಳು ಮೊಳೆತ ಆರಂಭದ ಕಾಲದಲ್ಲಿ ಅದರ ಮಾದರಿಗಳು ಪುರುಷ ಚಿಂತನೆಯ ಮೂಲಕವೇ ರೂಪಿಸಲ್ಪಟ್ಟ ದುರಂತವಿದು. ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಹೊರ ಸಂವೇದನೆಗೆ ತೆರೆದುಕೊಳ್ಳುತ್ತಿದ್ದ ಮಹಿಳೆಯನ್ನು 'ಹಿಂದೂ ಪುನರುತ್ಥಾನವಾದೀ ಚಳುವಳಿ' ಮತ್ತೆ ಹೊಸರೂಪದ ಚೌಕಟ್ಟಿಗೆ ಒಗ್ಗಿಸಿದಂತೆ ಆಧುನಿಕ ಪುರುಷ ಗೃಹೀತಗಳು ಸ್ತ್ರೀ ಸ್ವಾತಂತ್ರ್ಯವನ್ನು ನಿರ್ದೇಶಿಸಿದವು ಅಥವಾ ಇನ್ನೊಂದು ಬಗೆಯಲ್ಲಿ ಸ್ವಾತಂತ್ರ್ಯ-ಸಮಾನತೆಯ ಕುರಿತ ಪುರುಷ ಮಾದರಿಗಳು ಹೆಣ್ಣಿನ ಮೇಲೆ ಹೇರಲ್ಪಟ್ಟವು. ಹೆಣ್ಣಿನ ಬದುಕನ್ನು ನಿರ್ದೇಶಿಸುವ ಸೂತ್ರಗಳು ಪುರುಷ ಹಿತಾಸಕ್ತವಾಗಿದ್ದಂತೆ, ಹೆಣ್ಣಿನ ಸ್ವಾತಂತ್ರ್ಯ - ಸಮಾನತೆಯ ಸೂತ್ರಗಳೂ ಪುರುಷ ಗೃಹೀತಗಳಾದುದು ವಿಪರ್ಯಾಸ. ಹಾಗಾಗಿಯೇ ಗಾಂಧಿ, ಮಾರ್ಕ್ಸ್, ಬುದ್ಧ, ಬಸವ, ಲೋಹಿಯಾ, ಅಂಬೇಡ್ಕರ್... ಹೀಗೆ ಮಹಾನ್ ಚಿಂತಕ ರೆನ್ನಿಸಿಕೊಂಡವರ ಮಹಿಳಾಪರ ನಿಲುವುಗಳು ಉದಾರವಾದ, ಮಾನವತಾವಾದ, ವಿಕಾಸ ವಾದಗಳಾಗಿ ಕೇಳುತ್ತವೆಯೇ ಹೊರತು ಇಡಿಯಾಗಿ ಮಹಿಳಾ ಚಿಂತನೆಯಾಗಲ್ಲ. ಸಾಹಿತ್ಯಕವಾಗಿ ಒಂದು ಉದಾಹರಣೆಯನ್ನು ಗಮನಿಸು ವುದಾದರೆ – ಆಧುನಿಕ ಕನ್ನಡದ ಮೊದಲ ಕಾದಂಬರಿಗಳು ಮಹಿಳಾ ಕೇಂದ್ರವನ್ನು ಹೊಂದಿದ್ದು, ವಿಧವಾ ಸಮಸ್ಯೆಗೆ ಪುನರ್‌ವಿವಾಹವನ್ನು ಪರ್ಯಾಯವಾಗಿ ಕೊಡುತ್ತವೆ. ಅದೇ ಕಾಲದಲ್ಲಿ ಬರವಣಿಗೆಯಲ್ಲಿ ತೊಡಗಿಸಿಕೊಂಡ ತಿರುಮಲಾಂಬಾ, ಕಲ್ಯಾಣಮ್ಮನವರ ಕಾದಂಬರಿಗಳು ವಿಧವಾ ಸಮಸ್ಯೆಗೆ ಪುನರ್‌ವಿವಾಹವೊಂದೇ ಪರ್ಯಾಯ ವೆಂದು ತಿಳಿಯುವುದಿಲ್ಲ. ಬದಲು, ಸಾಮಾಜಿಕವಾಗಿ ಸಾಮಾನ್ಯ ಬದುಕಿನ ಹಕ್ಕೊತ್ತಾಯವನ್ನು ಮುಂದಿಡುತ್ತವೆ.




ನಾಗವಾರರ ಕಾವ್ಯಗಳ ಅನೂ, ಪೂರ್ಣ, ಹೂಬಳ್ಳಿ ಹೆಸರಿನ ಹುಡುಗಿಯಂಥವರು ಬದುಕನ್ನು ಎದುರಿಸುವ, ಬೆಳೆದು ನಿಲ್ಲುವ ಛಾತಿಯುಳ್ಳವರಲ್ಲ, ಪುರುಷಾಸಕ್ತ ಲೋಲುಪ ವ್ಯಕ್ತಿತ್ವದವರು. ವ್ಯವಸ್ಥೆಯ ಗಡಿ ರೇಖೆಗಳನ್ನು ಒತ್ತುವರಿ ಮಾಡಿಕೊಳ್ಳುವ ಒತ್ತಡ ಜೀವನ ವಿಕಾಸದ ಸಹಜ ಸ್ಥಿತಿಯೋ, ಜೀವನ ಒಡ್ಡುವ ಸಂಘರ್ಷದ ಮೂರ್ತ ರೂಪವೋ ಆಗಿಲ್ಲ. ಪುರುಷ ಚಿಂತನೆಯ ಮೂಲಕ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಸ್ವೀಕರಿಸಿದ ಮಾದರಿ ಗಳಾಗಿವೆ. ೭೦-೮೦ರ ದಶಕ ಸ್ತ್ರೀವಾದಿ ಚಿಂತನೆ ಕನ್ನಡದಲ್ಲಿ ಆರಂಭವಾದ ಕಾಲವಾಗಿದೆ. ತೀವ್ರಗಾಮಿ ಸ್ತ್ರೀವಾದದ ಪರಿಕಲ್ಪನೆಗಳ ಮೂಲಕ ಹೆಣ್ಣಿನ ಮೊದಲ ಸಂವೇದನೆ ಉಗ್ರ ಪುರುಷದ್ವೇಷವಾಗಿ ಹೊಮ್ಮಿತು. ಅದೇ ರೀತಿ ಹೆಣ್ಣನ್ನು ಕುರಿತ ಪುರುಷ ಸಂವೇದನೆ ಕನಿಕರ - ಕಾಳಜಿ, ಸ್ನೇಹ-ಪ್ರಣಯದ ಸವಲತ್ತುಗಳಾಗಿ ಹೊರಹೊಮ್ಮಿತು. ಇವು ಪುರುಷ ಹಿತಾಸಕ್ತವಾಗಿತ್ತೇ ವಿನಾ ಹೆಣ್ಣಿನ ಸಹಜ ವಿಕಾಸವನ್ನು ಉದ್ದೇಶಿತವಾಗಿಟ್ಟುಕೊಂಡಿಲ್ಲ.

ಇಲ್ಲಿಯ ಕಾವ್ಯಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ ಹೆಣ್ಣು-ಗಂಡಿನ ಸಂಬಂಧ ಪ್ರೇಮದ್ದಲ್ಲ, ಪ್ರಣಯದ್ದು. ಈ ಭಾವ ಬದುಕಿನ ಸಂಘಟನೆಗೆ ಪೂರಕವಾದದ್ದಲ್ಲ, ವಿಘಟನೆಗೆ ಕಾರಣವಾದ್ದು. ಹೆಣ್ಣಿನ ಬದುಕಿನ ಸಹಜ ವಿನ್ಯಾಸವನ್ನು ನಾಶಗೊಳಿಸುವಂಥದ್ದು. ಇಲ್ಲಿಯ ನಾಯಕಿಯರು ತೀರ್ಮಾನ ತೆಗೆದುಕೊಳ್ಳಬಲ್ಲವರು. ಆದರೆ ತೀರ್ಮಾನಗಳು ಅವರವಲ್ಲ. ಯಾವ ನೇರ ಒತ್ತಡ ವಿಲ್ಲದೆಯೂ ಅವರು 'ಇಚ್ಛೆಯನರಿತು ನಡೆವ ಸತಿತ್ವ' ವನ್ನು ರೂಢಿಸಿಕೊಂಡವರು. ಸತಿತ್ವ ಎಂಬುದು ಗೃಹಿಣಿ ಧರ್ಮ ಸಂಹಿತೆಯಷ್ಟೇ ಅಲ್ಲ ಹೆಣ್ಣಿನ ಬದುಕಿನ ಐಡೆಂಟಿಟಿ ಯಾಗಿದೆ. ಇಲ್ಲಿ ನಾಯಕಿಯರು ಕಾಣಿಸಿಕೊಳ್ಳುವುದು ಚೆಲುವು, ಆಪ್ತತೆ, ಆರ್ದ್ರತೆಗಳಲ್ಲಿ. ಅದನ್ನು ಹೊರತು ಪಡಿಸಿದ ಚಹರೆಗಳಿಲ್ಲ. ಹೆಣ್ಣಿನ ಸ್ವಭಾವಕ್ಕೆ ಸಂಬಂಧಿಸಿದ ಒಂದೇ ಒಂದು ಕವಿತೆ 'ಸಂಗೀತಗಾರನ ಮಗಳು ಕಿವುಡಿ' ಎನ್ನುವುದು, ಹೆಣ್ಣಿನ ಸ್ವಭಾವವೆಂದು ಆರೋಪಿಸಿಕೊಂಡು ಬಂದ ಗುಣಗಳ ವೈಭವೀಕರಣವಾಗಿದೆ. ೭೦-೮೦ರ ದಶಕದ ಕನ್ನಡ ಸಂವೇದನೆ ಸ್ತ್ರೀ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಕುರಿತು ಎದುರಿಸಿದ ಸವಾಲು - ಸಂಕಟಗಳ ಅಧ್ಯಯನವಾಗಿ ಕಾಳೇಗೌಡ ನಾಗವಾರರ ಕಾವ್ಯವನ್ನು ಗಮನಿಸಬೇಕಾಗುತ್ತದೆ. ದಮನಿತ ಸಂಸ್ಕೃತಿಯನ್ನು ಚಲನಶೀಲಗೊಳಿಸುವಾಗ ಇಂಥ ಬಿಕ್ಕಟ್ಟುಗಳು ಎದುರಾಗುತ್ತವೆ. ಪ್ರಧಾನ ಎಂದುಕೊಂಡ ಸಂಸ್ಕೃತಿ ಅಧೀನ ಎಂದುಕೊಂಡ ಸಂಸ್ಕೃತಿಯನ್ನು ಉನ್ನತೀಕರಿಸುವ ಸಂಭ್ರಮದಲ್ಲಿ ಘಟಿಸುವ ಆಭಾಸವಿದು. ಬಸವಣ್ಣ ಹೇಳುವ 'ಕನ್ನೆಯ ಸ್ನೇಹ'ವಿದು. ಕನ್ನೆಯ ಸ್ನೇಹ ಎಂಬುದು ಪುರುಷಹಿತವೇ ವಿನಾ ಕನ್ನೆಯ ಹಿತವಲ್ಲ ಅಥವಾ ತನ್ನ ಹಿತಾಹಿತಗಳ ಸ್ಪಷ್ಟತೆಯಿಲ್ಲದ ಕನ್ನೆಯಿವಳು. ಕನ್ನೆಯೆಂಬುದು ಹೆಣ್ಣಿಗೆ ಮಾತ್ರ ಮೀಸಲಾದ ಪದ. ಇದಕ್ಕೆ ಪುರುಷವಾಚಿ ರೂಪವೇ ಇಲ್ಲ. ಸಾಂಸ್ಕೃತಿಕ ಪಲ್ಲಟದ ಸಂದರ್ಭದಲ್ಲಿ ನಡೆಯುವ ಗೊಂದಲಗಳು ಕರಾವಳಿಯಲ್ಲಿ ಗಂಗಾಲಗ್ನ ಮತ್ತು ಕನ್ನೆಯ ಸ್ನೇಹ ಸಂಕಲನಗಳಲ್ಲಿ ವ್ಯಕ್ತವಾಗಿವೆ. ಜೊತೆಗೆ ನವ್ಯದ ಅಭಿವ್ಯಕ್ತಿ ವಿಧಾನ ಮತ್ತು ಬಂಡಾಯದ ಮನೋಧರ್ಮಗಳು ನಾಗವಾರರ ಕಾವ್ಯವನ್ನು ರೂಪಿಸಿವೆ. ಸ್ತ್ರೀ ಸಮಾನತೆ ಮತ್ತು ಸ್ವಾತಂತ್ರ್ಯದ ಪರಿಕಲ್ಪನೆಗಳು ಇಂದಿಗೂ ಇಡಿಯಾಗಿ ದಕ್ಕದ ಸಾಮಾಜಿಕ ವಾಸ್ತವದಲ್ಲಿ ಇಂಥ ತೊಡಕುಗಳನ್ನು ಎದುರಿಸಬೇಕಾದದ್ದು ಸಹಜ ಮತ್ತು ಅನಿವಾರ್ಯವಾಗಿತ್ತು.

ಡಾ|| ವಿನಯಾ
'ನೆಮ್ಮದಿ', ಸಂಖ್ಯೆ ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ
ಧಾರವಾಡ - ೫೮೦೦೦೩

**ರತ್ನಾಂಕುರ** (ಕಥಾಮಾಲಿಕೆ)
ಶ್ರೀಮತಿ ಎಸ್. ಎನ್. ರತ್ನಮ್ಮ
ಪುಟ : ೯೮ ಬೆಲೆ : ನಮೂದಿಸಿಲ್ಲ
ವಸಂತ ಸಾಹಿತ್ಯ ಗ್ರಂಥಮಾಲಾ, ೪೪೨, ೫ನೇ ವಿಭಾಗ, ಜಯನಗರ, ಬೆಂಗಳೂರು - ೫೬೦ ೦೪೧

ಇಲ್ಲಿನ ಬಹುಪಾಲು ಕತೆಗಳು ಸರಳವಾಗಿದ್ದು, ಬದುಕಿನ ನೈಜ ಮುಖವನ್ನು ಅದರ ಒಳ್ಳೆಯತನದಲ್ಲಿ ಹಿಡಿಯಲು ಪ್ರಯತ್ನಿಸಿವೆ. ಚಿಕ್ಕ ಚಿಕ್ಕ ಸಂಗತಿಗಳೂ ಕತೆ ರೂಪ ತಾಳಿವೆ. 'ಮರಳಿ ಬಂದ ಒಡವೆ' ಕತೆಯು ವಿಧಿಯಾಟವನ್ನು, ಆಕಸ್ಮಿಕಗಳನ್ನು ಸ್ವೀಕರಿಸುವ ಮನೋಭಾವವನ್ನು ಚಿತ್ರಿಸಿದರೆ, 'ಮಮತಾಮಯಿ' ಕತೆಯಲ್ಲಿ ತ್ಯಾಗಮಯಿ ತಾಯಿಯ ಕತೆಯಿದೆ. 'ಆ ಮನೆಯಲ್ಲಿ ಸತಿ ನಿಂತಿತು' ಎಂಬುದರಲ್ಲಿ 'ಸತಿ'ಪದ್ಧತಿ ನಿಲ್ಲಲೂ ದೈವ ಕಾಣಿಸಿ ಕೊಳ್ಳುತ್ತದೆ. ಹೀಗೆ ಸ್ವಾರಸ್ಯಕರವಾಗಿದೆ, ಎಲ್ಲಿಯೂ ತಡೆಯಿಲ್ಲದಂತೆ ಕತೆ ಓದಿಸಿಕೊಂಡು ಹೋಗುತ್ತದೆ. 'ನಾಮದ ಬಲವೊಂದಿದ್ದರೆ' ಕತೆಯು ಜಾತಿಯಂಥ ಸೂಕ್ಷ್ಮ ವಿಷಯವನ್ನು ಹಾಸ್ಯಪ್ರಸಂಗದಲ್ಲಿ ಮುಳುಗಿಸಿಬಿಟ್ಟಿದೆ. ಇಲ್ಲಿನ ಕತೆಗಳ ಹಿಂದೆ ಮೃದು ಮನಸ್ಸಿನ, ತುಂಬು ಹೃದಯದ ಸಹಜ, ಸರಳ ವ್ಯಕ್ತಿತ್ವವಿದ್ದು, ಒಳಿತನ್ನು ಕಾಣುವ ಕುಶಲತೆಯಿದೆ.

**ಧನ್ಯವಾದ** (ನೂರ ಹದಿನೆಂಟು ಲಹರಿಗಳು)
ತೆಲುಗು ಮೂಲ: ಡಾ॥ ರಾವೂರಿ ಭರದ್ವಾಜ
ಕನ್ನಡ ಅನುವಾದ : ಡಾ॥ ಎಚ್. ಎಸ್. ಸುಜಾತಾ
ಪುಟ : xx + ೮೪ ಬೆಲೆ : ರೂ. ೧೦೦
**ಸುಹಾಸ ಪ್ರಕಟಣೆಗಳು**, ೫೩, ೪ನೇ ಮುಖ್ಯರಸ್ತೆ, ಮಾರುತಿ ದೇವಸ್ಥಾನದ ಬೀದಿ, ಕುವೆಂಪು ನಗರ, ಮೈಸೂರು - ೯

ತೆಲುಗು ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ತೊಡಗಿಕೊಂಡ ನಿತ್ಯಕರ್ಮಯೋಗಿ ಡಾ॥ ರಾವೂರಿ ಭರದ್ವಾಜರ ಲಹರಿಗಳನ್ನು ಕನ್ನಡದಲ್ಲಿ ಕೊಡಲಾಗಿದೆ. ಸಣ್ಣ ಸಣ್ಣ ಸಂಗತಿಗಳ ಮೂಲಕ ಆಧ್ಯಾತ್ಮವಾದಿ ಸ್ಪರ್ಶದ ಸಮಾಜಮುಖಿ ವಿಚಾರಗಳನ್ನು ಈ ಲಹರಿಗಳಲ್ಲಿ ಕಾಣಬಹುದು. ಹಲವಾರು ಮಾಂತ್ರಿಕ ಜಾಲಗಳಿಂದ ಬದುಕಿನ ದಿಕ್ಕು ತಪ್ಪಿಸುತ್ತಿರುವ ಇಂದಿನ ಸ್ಥಿತಿಯಲ್ಲಿ ಇಂತಹ ಕೃತಿಯ ಅಗತ್ಯ ಅಪಾರವಾಗಿದೆ. ವಿನಯ, ಸದ್ಬುದ್ಧಿ, ಒಳ್ಳೆಯತನ, ನೆರವಾಗುವುದು, ದಯೆ, ಸಾಮಾಜಿಕ ಕಳಕಳಿ, ಸಮಾಜಸೇವೆ, ಪ್ರಕೃತಿಯಲ್ಲಿ ಎಲ್ಲಾ ಜೀವ ಸಂಕುಲವೂ ಸಮಾನ ಎಂಬ ಭಾವ, ದೀನ ದಲಿತರ ಪರವಾದ ನಿಲುವು – ಹೀಗೆ ಇಲ್ಲಿನ ಪ್ರತಿಯೊಂದು ಪುಟವೂ ಆಲೋಚನೆಗೆ ಹಚ್ಚಿ, ತಿಳಿವು ನೀಡುತ್ತದೆ.

**ಜಯಪ್ರಕಾಶ್ ನಾರಾಯಣ** : ಒಂದು ಅಪೂರ್ಣ ಕ್ರಾಂತಿಯ ಕಥೆ
ಡಿ. ಎಸ್. ನಾಗಭೂಷಣ
ಪುಟ : ೨೦೦ ಬೆಲೆ : ರೂ. ೧೨೦
**ಅಭಿರುಚಿ ಪ್ರಕಾಶನ**, ನಂ. ೩೮೬, ೧೪ನೆಯ ಮುಖ್ಯರಸ್ತೆ, ೩ನೆಯ ಅಡ್ಡರಸ್ತೆ, ಸರಸ್ವತೀಪುರ, ಮೈಸೂರು - ೯

ಸಮತೆ, ಸಮಾಜವಾದ ಚಳುವಳಿಗಳಲ್ಲೇ ಬದುಕನ್ನು ಕಳೆದ, ತನ್ನ ಬದುಕನ್ನೇ ಒಂದು ಕ್ರಾಂತಿಯ ಪ್ರಯೋಗಶಾಲೆಯನ್ನಾಗಿ ಮಾಡಿಕೊಂಡ, ಜೆ. ಪಿ. ಎಂದೇ ಹೆಸರಾದ ಜಯಪ್ರಕಾಶ ನಾರಾಯಣರ ಸಂಕ್ಷಿಪ್ತ ಜೀವನ-ಚಿತ್ರ ಇಲ್ಲಿದೆ. ರಾಷ್ಟ್ರದ ಭ್ರಷ್ಟ ರಾಜಕೀಯದ ವಿರುದ್ಧ ಜನಶಕ್ತಿಯನ್ನು ಸಂಘಟಿಸುತ್ತಾ, ಸತತವಾಗಿ ಹೋರಾಡಿದ ಧೀಮಂತನಾಯಕ ಜೆ. ಪಿ.ಯವರ ಜೀವನ ಚಿತ್ರದ ಭಾಗ ವಾಗಿಯೇ ಇಲ್ಲಿ ಸ್ವಾತಂತ್ರ್ಯ ಹೋರಾಟದ ಚರಿತ್ರೆ, ಸಮಾಜವಾದಿ ಚಳುವಳಿಯ ಚರಿತ್ರೆ ಹಾಗೂ ಸ್ವಾತಂತ್ರ್ಯೋತ್ತರ ಭಾರತದ ಮೊದಲ ಮೂರು ದಶಕಗಳ ರಾಜಕೀಯ ಚರಿತ್ರೆ ಆನುಷಂಗಿಕವಾಗಿ ಮೂಡಿಬಂದಿವೆ. ಲೇಖಕರು ವಿವಿಧ ಮೂಲಗಳಿಂದ ವಿಪುಲ ಮಾಹಿತಿಯನ್ನು ಕಲೆಹಾಕಿ, ಕೃತಿಯನ್ನು ಅಚ್ಚುಕಟ್ಟಾಗಿ ರಚಿಸಿದ್ದಾರೆ.

**ತೇಜಸ್ವಿ ಲೋಕ**
(ಕೆ. ಪೂರ್ಣಚಂದ್ರ ತೇಜಸ್ವಿ ಅವರ ಸಾಹಿತ್ಯ ಕುರಿತ ಬರಹಗಳು)
ಸಂ. : ಡಿ. ವಿ. ಪ್ರಹ್ಲಾದ್
ಪುಟ : ೧೬೦ ಬೆಲೆ : ರೂ. ೮೫
**ಸಂಚಯ**, ನಂ. ೧೦೦, ೨ನೇ ಮುಖ್ಯರಸ್ತೆ, ೬ನೇ ಬ್ಲಾಕ್, ೩ನೇ ಸ್ಟೇಜ್, ೫ನೇ ಫೇಸ್, ಬನಶಂಕರಿ, ಬೆಂಗಳೂರು - ೮೫

ಖ್ಯಾತ ಲೇಖಕರಾದ ತೇಜಸ್ವಿಯವರ ಸಾಹಿತ್ಯ ಕುರಿತು ವಿವಿಧ ಲೇಖಕರು ಚಿತ್ರಿಸಿರುವ ಬಹುಮುಖೀ ಲೇಖನಗಳ ಸಂಗ್ರಹವಿದು. ತೇಜಸ್ವಿಯವರ ಸಾಹಿತ್ಯಕ್ಕೆ ಸ್ಪಂದಿಸುತ್ತಲೇ ವಿಮರ್ಶಾತ್ಮಕವಾಗಿ, ವೈಚಾರಿಕವಾಗಿ ನೋಡಿದ ಲೇಖನಗಳಿವು. ಈ ಲೇಖನಗಳಲ್ಲಿ ತೇಜಸ್ವಿಯವರ ಸಾಹಿತ್ಯ, ಅವರ ವ್ಯಕ್ತಿತ್ವ, ವಿಚಾರ, ಜೀವನದೃಷ್ಟಿ, ಅವರ ಅನೇಕ ಹವ್ಯಾಸ, ಪರಿಸರದೊಂದಿಗಿನ ತೇಜಸ್ವಿಯವರ ಒಡನಾಟ, ಪರಿಸರದ ಬಗೆಗಿನ ಅವರ ನಿಲುವು, ಸಾಹಿತ್ಯ ಕುರಿತ ತಾತ್ವಿಕತೆ, ಅಲ್ಲದೆ ತೇಜಸ್ವಿಯೊಂದಿಗಿನ ಸಂವಾದ, ತಮ್ಮ ಕೃತಿ ವಿಮರ್ಶೆಗೆ ತೇಜಸ್ವಿ ತೋರಿದ ಪ್ರತಿಕ್ರಿಯೆ – ಹೀಗೆ ಹಲವಾರು ಸಂಗತಿಗಳ ಮೂಲಕ ತೇಜಸ್ವಿ ಲೋಕ ತೆರೆದುಕೊಂಡಿದೆ.

**ವನ ಸಂಜೀವನ** (ಶಿಕ್ಷಕರಿಗಾಗಿ ಪರಿಸರ ಕೈಪಿಡಿ)
ಸುಜಾತಾ ಪದ್ಮನಾಭನ್, ಸುನಿತಾ ರಾವ್, ಯಶೋಧರಾ ಕುಂಡಾಜಿ; ಕನ್ನಡಕ್ಕೆ : ನಾಗೇಶ ಹೆಗಡೆ
ಪುಟ : ೨೨೪ ಬೆಲೆ : ರೂ. ೨೭೫
**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ನವಕರ್ನಾಟಕ ಪ್ರಕಟಿಸಿರುವ ಶಿಕ್ಷಣ ಕುರಿತ ಮಹತ್ವದ ಕೃತಿ. ಬದುಕನ್ನು ಪರಿಸರದ ಭಾಗವಾಗಿ ನೋಡುವ, ಪರಿಸರ ಶಿಕ್ಷಣ ಪಠ್ಯದಂತೆ ರೂಪಿತವಾಗಿರುವ ಈ ಕೃತಿಯು ಪರಿಸರ ಅಧ್ಯಯನ ವಿಧಾನವನ್ನು ರಚನಾತ್ಮಕ ನೆಲೆಯಲ್ಲಿ ತೋರಿಸಿಕೊಟ್ಟಿದೆ. ಬಿಳಿಗಿರಿರಂಗನ ಬೆಟ್ಟದ ಸೋಲಿಗ ಸಮುದಾಯದ ಬದುಕು ಮತ್ತು ಪರಿಸರವನ್ನು ಒಂದರೊಳಗೊಂದು ಹೆಣೆದುಕೊಂಡಂತೆ, 'ಬದುಕಿನ ಕಲಿಕೆಗೆ ನಿಸರ್ಗವೇ ಗುರು' ಯೋಜನೆಯಲ್ಲಿ ಮನಸ್ಸು ಮತ್ತು ಕೈಗಳ ಮೂಲಕ ವಿದ್ಯೆಯ ಆವಾಹನೆ ಹೇಗೆ ಎಂಬುದನ್ನು ಈ ಕೃತಿ ತಿಳಿಸುತ್ತದೆ. ಇಲ್ಲಿನ ವಿವರಗಳು ಸೋಲಿಗ ಸಮುದಾಯಕ್ಕಷ್ಟೇ ಸೀಮಿತವಾಗದೆ, ಕೆಲವಾರು ಅಧ್ಯಾಯಗಳನ್ನು ಬದಲಾವಣೆ ಮಾಡಿಕೊಂಡು, ಪ್ರತಿಯೊಂದು ಶಾಲೆ-ಹೈಸ್ಕೂಲ್‌ಗಳಲ್ಲೂ ಪರಿಸರದ ವಿಭಿನ್ನ ಅಧ್ಯಯನ ಸಾಧ್ಯವಾಗುವಂತೆ ಮಾಡುವಲ್ಲಿ ಈ ಕೃತಿ ನೆರವಾಗುತ್ತದೆ. ಆ ಮೂಲಕ ತಮ್ಮ ಸುತ್ತಲಿನ ಪರಿಸರದ ಬಗ್ಗೆ ಮಕ್ಕಳು ಪ್ರಾಯೋಗಿಕ ಚಟುವಟಿಕೆಗಳ ಮೂಲಕ ಸುಲಭವಾಗಿ, ಅರ್ಥಪೂರ್ಣವಾಗಿ ತಿಳಿಯಲು ಸಾಧ್ಯವಾಗುತ್ತದೆ. ಪರಿಸರ ಅಧ್ಯಯನ, ಕಲಿಕೆಗೆ ಸಂಬಂಧಿಸಿದಂತೆ ಸಚಿತ್ರವಾಗಿಯೂ, ಮಾಹಿತಿಪೂರ್ಣವಾಗಿಯೂ, ಪ್ರಾಯೋಗಿಕವಾಗಿಯೂ ಇರುವ ಇಂತಹ ಕೃತಿ ಪ್ರತಿಯೊಂದು ಶಾಲೆ ಹಾಗೂ ಶಿಕ್ಷಕರಿಗೆ ಉಪಯುಕ್ತವಾದುದು.

**ಕಲಿಕೆಯಲ್ಲಿ ಕಲೆ** (ಶಿಕ್ಷಕರಿಗಾಗಿ ಸಂಪನ್ಮೂಲ ಪುಸ್ತಕ)
ಜೇನ್ ಸಾಹಿ ಮತ್ತು ರೋಷನ್ ಸಾಹಿ
ಅನುವಾದ : ದಿವ್ಯ ಜ್ಯೋತಿ
ಪುಟ : VIII + ೧೫೮ ಬೆಲೆ : ರೂ. ೨೨೫
**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

'ಪುಸ್ತಕದ ಮೂಲಕ ಮನುಕುಲದ ಸೇವೆ' ಧ್ಯೇಯ ಹೊಂದಿರುವ ನವಕರ್ನಾಟಕ ಪ್ರಕಾಶನದ ಮಹತ್ವದ ಕೃತಿ ಇದಾಗಿದೆ. 'ಕಲಿಕೆ' ಎಂಬುದು ಶಿಕ್ಷೆಯಾಗದಂತೆ, ಬೋರ್ ಆಗದಂತೆ ಕ್ರಿಯಾಶೀಲವಾಗಿರಬೇಕೆಂಬ ಹಿನ್ನೆಲೆಯಲ್ಲಿ ಈ ಕೃತಿ ಮೂಡಿದೆ. ಓದು-ಬರಹಕ್ಕಷ್ಟೇ ಪ್ರಾಮುಖ್ಯತೆ ನೀಡುತ್ತಿರುವ ಇಂದಿನ ಶಿಕ್ಷಣ ಕ್ರಮದಲ್ಲಾಗಬೇಕಾದ ಬದಲಾವಣೆಗಳನ್ನು ಈ ಕೃತಿ ಸೂಚಿಸುತ್ತದೆ. ಮಕ್ಕಳು ಸಂಪೂರ್ಣವಾಗಿ ತೊಡಗಿಕೊಳ್ಳಬೇಕಾದ, ಅದಕ್ಕೆ ಪೂರಕವಾದ, ಕಲಿಕೆಯನ್ನು ರೂಪಿಸಬೇಕಾದ ನಿಟ್ಟಿನಲ್ಲಿ ಈ ಕೃತಿ ಕಲೆಯ ಮೂಲಕ ಕಲಿಯುವುದನ್ನು ತೋರಿಸಿಕೊಟ್ಟಿದೆ. ಇದರಲ್ಲಿ ಮುಖ್ಯವಾಗಿ ಜ್ಞಾನೇಂದ್ರಿಯಗಳು, ರೇಖೆ ಮತ್ತು ಬಣ್ಣ, ಕಲೆ ಮತ್ತು ಪರಿಸರ, ಕಲೆ ಮತ್ತು ಗಣಿತ, ಕಲೆ ಮತ್ತು ಭಾಷೆ – ಎಂಬ ವಿಭಾಗಗಳಿದ್ದು, ಕಲೆಯ ಮೂಲಕ ವಿವಿಧ ಜ್ಞಾನಶಾಖೆಗಳನ್ನು ರಚನಾತ್ಮಕವಾಗಿ ಕಲಿಸಲು ಸಾಧ್ಯವಾಗುವುದನ್ನು ಸಚಿತ್ರವಾಗಿ ತೋರಿಸಿಕೊಡಲಾಗಿದೆ. ಶಿಕ್ಷಕರಿಗೆ ಸಂಪನ್ಮೂಲ ಕೃತಿಯಾಗಿರುವ ಇಂತಹ ಕೃತಿ ಕನ್ನಡದಲ್ಲಿ ಅಪರೂಪವಾದದ್ದು.

– ಡಾ॥ ಸುಜಾತ ಲಕ್ಷ್ಮೀಪುರ
ನಂ. ೩೨೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೧೯




# ಒಂದು ವಿನೂತನ ಪ್ರಯೋಗ

**ಪ್ರೊ||** ಕೆ. ರಾಮದಾಸ್ ಅವರ ನೆನಪಿನಲ್ಲಿ ಮಂಡ್ಯ ರಮೇಶ್ ಅವರ 'ನಟನ' ತಂಡವು ಮರಾಠಿ ನಾಟಕಕಾರರಾದ ಪ್ರೇಮಾನಂದ ಗಜ್ವಿ ರಚಿಸಿರುವ ಹಾಗೂ ಡಿ. ಎಸ್. ಚೌಗಲೆ ಕನ್ನಡೀಕರಿಸಿರುವ 'ಗಾಂಧಿ-ಅಂಬೇಡ್ಕರ್' ನಾಟಕವನ್ನು ಬೆಂಗಳೂರಿನ ರಂಗಶಂಕರದಲ್ಲಿ ಪ್ರದರ್ಶಿಸಲಾಗಿತ್ತು. ನಿರ್ದೇಶಕರಾದ ಸಿ. ಬಸವಲಿಂಗಯ್ಯನವರು ಸಮಾನತೆಗಾಗಿ ತುಡಿದ ಇಬ್ಬರು ಸಾಧಕರನ್ನು ರಂಗದ ಮೇಲೆ ತುಂಬ ಮಹತ್ವಪೂರ್ಣವಾಗಿ, ವಿಶಿಷ್ಟವಾಗಿ ತಂದಿದ್ದಾರೆ.

ಗಾಂಧಿ-ಅಂಬೇಡ್ಕರ್ ಇಬ್ಬರನ್ನು ಅಧ್ಯಯನ ಮಾಡಿರುವ ಬಹುತೇಕ ಮಂದಿ ಇವರಿಬ್ಬರನ್ನು ವಿರುದ್ಧ ದಿಕ್ಕಿನಲ್ಲಿಟ್ಟು ನೋಡಿದ್ದಾರೆ. ಆದರೆ ಈಗ ಈ ಮಹನೀಯರನ್ನು ಒಟ್ಟುಗೂಡಿಸಿ ನೋಡುವ ಅನಿವಾರ್ಯತೆ ಇದೆ. ಇಬ್ಬರ ಚಿಂತನೆಗಳಲ್ಲಿ, ವಾಗ್ವಾದಗಳಲ್ಲಿ ವಿಸ್ಮಯವಾಗುವಷ್ಟು ಹೊಂದಾಣಿಕೆ, ಪರಸ್ಪರರ ಪ್ರಭಾವ ನಾಟಕದುದ್ದಕ್ಕೂ ಎದ್ದುಕಾಣುತ್ತದೆ. ದೇಶವು ರಾಜಕೀಯವಾಗಿ, ಸಾಂಸ್ಕೃತಿಕವಾಗಿ ದಿವಾಳಿಯ ಅಂಚಿನಲ್ಲಿರುವ ಈ ಸಂದರ್ಭದಲ್ಲಿ ಗಾಂಧಿ ಮತ್ತು ಅಂಬೇಡ್ಕರ್ ಮತ್ತೆ ಮತ್ತೆ ಪ್ರಸ್ತುತರಾಗುತ್ತಾರೆ.

''ಯಾವ ದೇವರೂ, ಧರ್ಮಗುರುವೂ ನಿಮ್ಮ ದಾಸ್ಯವನ್ನು ಕೊನೆಗಾಣಿಸಲಾರರು. ನಿಮ್ಮ ದಾಸ್ಯವನ್ನು ನೀವೇ ಕೊನೆಗಾಣಿಸಿಕೊಳ್ಳಬೇಕು''. ಈ ನೆಲದ ನಾಡಿ ಹಿಡಿದು ಬಾಬಾಸಾಹೇಬರು ಆಡಿದ ಮಾತುಗಳಿವು. ಗಾಂಧಿಗೆ ಸ್ವಾತಂತ್ರ್ಯ ಪಡೆಯುವುದು ಮುಖ್ಯವಾದರೆ, ಅಂಬೇಡ್ಕರ್‌ಗೆ ಅದರ ಜೊತೆಗೆ ಅದಕ್ಕಿಂತಲೂ ಮುಖ್ಯವಾಗಿ ಶೋಷಿತರ ಬಿಡುಗಡೆಯೇ ಮುಖ್ಯವಾಗುತ್ತದೆ. ಆ ಕಾರಣಕ್ಕಾಗಿಯೇ ಗಾಂಧಿ ''ಮೊದಲು ಬ್ರಿಟಿಷರಿಂದ ಸ್ವಾತಂತ್ರ್ಯ ಬರಲಿ. ನಂತರ ಅಸ್ಪೃಶ್ಯರ ಬಗ್ಗೆ ಚಿಂತಿಸೋಣ'' ಎಂದಾಗ, ಬಾಬಾ ಸಾಹೇಬರು ''ದೇಶಕ್ಕೆ ಸ್ವಾತಂತ್ರ್ಯ ಬರಲಿ. ಅದರಲ್ಲಿ ನನ್ನದೇನು ತಕರಾರಿಲ್ಲ. ಆದರೆ ಮೊದಲು ದಲಿತರಿಗೆ ಸಿಗಲಿ, ಏಕೆಂದರೆ ಸ್ವಾತಂತ್ರ್ಯದ ನಂತರ ಪರಿಹರಿಸೋಣವೆಂದರೆ ಈಗಿರುವ ಬ್ರಿಟಿಷರ ಜಾಗದಲ್ಲಿ ಸವರ್ಣೀಯರು ಕೂರುತ್ತಾರೆ. ದಲಿತರು ಯತಾಸ್ಥಿತಿಯಲ್ಲಿಯೇ ಇರಬೇಕಾಗುತ್ತದೆ. ಈಗಿರುವ ಸ್ಥಿತಿಯಲ್ಲಾದರೂ ದಲಿತರು ಮತ್ತು ಸವರ್ಣೀಯರು ಬ್ರಿಟಿಷರ ದೃಷ್ಟಿಯಲ್ಲಿ ಸಮವಾಗಿದ್ದೇವೆ'' ಎನ್ನುವ ಅಂಬೇಡ್ಕರ್‌ರ ಕಾಲಜ್ಞಾನಿಯಂತಹ ಮಾತು ಇಂದಿಗೂ ಸತ್ಯವಾಗಿ ನಮ್ಮೆದುರಿಗಿರುವುದನ್ನು ಮರೆಮಾಚಲಾಗದು. ಹೀಗೆ ಅಸ್ಪೃಶ್ಯತೆ. ಧಾರ್ಮಿಕತೆ, ದೇಶವಿಭಜನೆ, ಸಾಂಸ್ಕೃತಿಕ ಅಸ್ತಿತ್ವ ಮುಂತಾದ ತಮ್ಮದೇ ಆದ ವಾಗ್ವಾದಗಳಿಂದ ಗಾಂಧಿ-ಅಂಬೇಡ್ಕರ್ ಎದುರಾಗುವುದು ರೋಚಕವಾಗಿದೆ.

ಪಾಶ್ಚಾತ್ಯ ವಿದ್ಯಾಭ್ಯಾಸ ಬಾಬಾಸಾಹೇಬರಿಗೆ ಸಮಾನತೆಯ ಸೌಂದರ್ಯವನ್ನು ಮನಗಾಣಿಸಿತು. ಫ್ರೆಂಚ್ ಕ್ರಾಂತಿಯ ಮೂಲ ಮಂತ್ರವಾಗಿದ್ದ ಸಮಾನತೆ, ಸ್ವಾತಂತ್ರ್ಯ ಮತ್ತು ಸೋದರತೆಗಳು ಅಂಬೇಡ್ಕರ್ ಅವರ ಚಿಂತನೆಯನ್ನು ಬಹುವಾಗಿ ಪ್ರಭಾವಿಸಿದವು. ಇಡೀ ನಾಟಕದುದ್ದಕ್ಕೂ ಗಾಂಧೀಜಿ ಜೊತೆಗಿನ ವಾಗ್ವಾದ, ಸಂವಾದಗಳು ಇವುಗಳನ್ನು ಕೇಂದ್ರೀಕೃತವಾಗಿರಿಸಿಕೊಂಡೇ ನಡೆಯುವುದು ಗಮನಾರ್ಹ.

**ರವಿಕುಮಾರ್ ಬಾಗಿ**

ಹಿಂದೂ ಧರ್ಮದಲ್ಲಿ ವರ್ಣಾಶ್ರಮ ಪದ್ಧತಿ ಇರಲಿ ಎನ್ನುವ ಗಾಂಧಿಯನ್ನು ಕುರಿತು ಅಂಬೇಡ್ಕರ್ ''ನೀವು ಎಲ್ಲಿಯವರೆಗೆ ಬ್ರಾಹ್ಮಣ ಪರವಿರುತ್ತೀರೋ ಅಲ್ಲಿಯವರೆಗೂ ಕ್ಷೇಮವಾಗಿರುತ್ತೀರಿ. ಯಾವತ್ತು ನೀವು ಬ್ರಾಹ್ಮಣರ ವಿರುದ್ಧ ಮಾತನಾಡುತ್ತೀರೋ ಅಂದೇ ನಿಮ್ಮ ನಾಶವಾಗುತ್ತದೆ'' ಎನ್ನುತ್ತಾರೆ. ಗಾಂಧಿ ಒಬ್ಬ ಹಿಂದೂ ಆರ್.ಎಸ್.ಎಸ್. ಕಾರ್ಯಕರ್ತನೆನ್ನಲಾದವನಿಂದ ಕೊಲೆಯಾದ ದಿನ ಅಂಬೇಡ್ಕರ್ ಅಂತಿಮ ದರ್ಶನ ಪಡೆಯಲು ಬಂದಾಗ ಶವದ ಮುಂದೆ ನಿಂತು ಈ ಮಾತುಗಳನ್ನು ಪುನರುಚ್ಚರಿಸುವುದರ ಮೂಲಕ ಪ್ರೇಕ್ಷಕನ ಎದೆಯಲ್ಲಿ ಗಟ್ಟಿಯಾಗಿ ನಿಲ್ಲುತ್ತಾರೆ. ಜೊತೆಗೆ ಈ ದೃಶ್ಯ ಇಂದಿನ ಕುತಂತ್ರ ರಾಜಕಾರಣವನ್ನು ನಮ್ಮ ಕಣ್ಮುಂದೆ ಕಟ್ಟಿಕೊಡುತ್ತದೆ.

ಆದರೆ ವಿದೂಷಕ ಯಾರ ಪರವೂ ವಕಾಲತ್ತು ವಹಿಸದೆ ಇಬ್ಬರನ್ನೂ ವಿಮರ್ಶಿಸುವ ಇಕ್ಕಟ್ಟಿಗೆ ಸಿಲುಕಿಸಿ ಅವರಿಬ್ಬರಲ್ಲೂ ಇರುವ ನ್ಯೂನತೆಗಳನ್ನು ಹೊರತೆಗೆಯುತ್ತಾನೆ. ಇದು ನಾಟಕದ ಬಹುಮುಖ್ಯ ಅಂಶ. ಗಾಂಧೀಜಿ ರಾಜಕೀಯದಿಂದ ಸಾಮಾಜಿಕದತ್ತ ಇಳಿದುಬಂದರೆ ಅಂಬೇಡ್ಕರ್ ಸಾಮಾಜಿಕ ಕಾರ್ಯದಿಂದ ರಾಜಕೀಯ ಕಣಕ್ಕೆ ಏರಿದ ರೀತಿ ವಿಶಿಷ್ಟವಾಗಿದೆ.

ಅಂಬೇಡ್ಕರ್, ಗಾಂಧೀಜಿಯವರೊಂದಿಗೆ ಮಾತುಕತೆ ಮುಗಿಸಿಕೊಂಡು ಹೊರಟನಂತರ ಬ್ರಾಹ್ಮಣನೊಬ್ಬ 'ಜಲಪ್ರೋಕ್ಷಣೆ' ಮಾಡುವುದು ಹಾಸ್ಯಾಸ್ಪದವಾಗಿ ಕಂಡರೂ ವಾಸ್ತವದಲ್ಲಿ ಗಾಂಧಿಯ ಸುತ್ತ ಅಂತಹ ವ್ಯಕ್ತಿತ್ವಗಳಿದ್ದುದನ್ನು ಅಲ್ಲಗಳೆಯಲಾಗದು. ಮತಾಂತರದ ವಿಚಾರದಲ್ಲಿ ''ಅಸ್ಪೃಶ್ಯರು ಹಿಂದೂಧರ್ಮದ ಅವಿಭಾಜ್ಯ ಅಂಗ, ಅವರನ್ನು ಹಿಂದೂಧರ್ಮದಿಂದ ಬೇರ್ಪಡಿಸುವುದನ್ನು ನಾನೆಂದೂ ಒಪ್ಪುವುದಿಲ್ಲ'' ಎನ್ನುವ ಗಾಂಧೀಜೀಗೆ ''ಅಸ್ಪೃಶ್ಯರು ಹಿಂದೂ ಧರ್ಮದ ಅವಿಭಾಜ್ಯ ಅಂಗ ಎನ್ನುವುದಾದರೆ ಹಿಂದೂ ಧರ್ಮದ ಬೆನ್ನೆಲುಬಾದ ಜಾತಿಪದ್ಧತಿಯನ್ನು ಅಳಿಸಿ, ಆ ಮೂಲಕ ಏಕವರ್ಣ ಸಮಾಜ ನಿರ್ಮಿಸುವಂತಾಗಬೇಕು. ಎಲ್ಲೆಡೆ ಸಮಾನತೆ ಕಾಣುವ ಹಂಬಲ ನನ್ನದು'' ಎನ್ನುತ್ತಾರೆ ಅಂಬೇಡ್ಕರ್. ಆದರೆ ಗಾಂಧೀಜಿ ಮತ್ತು ಅಂಬೇಡ್ಕರ್ ಇಬ್ಬರೂ ಒಬ್ಬರನ್ನೊಬ್ಬರು ಟೀಕಿಸುತ್ತಿದ್ದರೂ ಒಬ್ಬರ ಸಾಮರ್ಥ್ಯ ಇನ್ನೊಬ್ಬರಿಗೆ ಗೊತ್ತಿತ್ತು. ಆ ಕಾರಣಕ್ಕಾಗಿಯೇ ಸ್ವತಂತ್ರ ಭಾರತದ ಸಂವಿಧಾನವನ್ನು ಬೇರೆ ದೇಶದ ತಜ್ಞರಿಂದ ಬರೆಸಬೇಕೆಂಬ ಬೇಡಿಕೆ ಇಟ್ಟಾಗ ಗಾಂಧೀಜಿ ''ಈ ದೇಶದ ನರನಾಡಿಗಳನ್ನು ಬಲ್ಲಂಥ ಡಾ|| ಅಂಬೇಡ್ಕರ್ ನಮ್ಮಲ್ಲೇ ಇರುವಾಗ ಬೇರೆ ತಜ್ಞರ ಅವಶ್ಯಕತೆ ಇಲ್ಲ. ಹಾಗೊಂದು ವೇಳೆ ಆದರೆ ಅದು ಗುಲಾಮಗಿರಿಯಾಗುತ್ತದೆ'' ಎನ್ನುವ ಮೂಲಕ ಬಾಬಾಸಾಹೇಬರ ಬದ್ಧತೆಯನ್ನು ಮೆರೆಯುತ್ತಾರೆ.

ಮಾತೇ ಪ್ರಧಾನವಾಗಿರುವ ಈ ನಾಟಕದಲ್ಲಿ ನಟನು ಆಡುವ ಒಂದೊಂದು ಮಾತೂ ಸಂಭಾಷಣೆಯೂ ಬೆಂಕಿಯ ಉಂಡೆಯಾಗಿ ಸಿಡಿಯುತ್ತದೆ. ಪ್ರೇಕ್ಷಕ ಇಡೀ ನಾಟಕದುದ್ದಕ್ಕೂ ಉಸಿರು ಬಿಗಿಹಿಡಿದುಕೊಂಡು ನೋಡುವ ವಾತಾವರಣ ನಿರ್ಮಾಣವಾಗುತ್ತದೆ. ನಾವು ಮೊದಲೇ



ಸಿದ್ಧಮಾಡಿಕೊಂಡಿರುವ ಆದರ್ಶ ವ್ಯಕ್ತಿತ್ವಗಳು ನಮ್ಮೆದುರು ಬೆತ್ತಲಾಗುವ ಪರಿ ದಂಗುಬಡಿಸುತ್ತದೆ. ''ಯಾವ ಮನುಷ್ಯ ಗಾಂಧೀವಾದದಲ್ಲಿ ವಿಶ್ವಾಸವಿಡಬೇಡಿರೆಂದು ಗರ್ಜಿಸುತ್ತಿದ್ದನೋ ಅವನ ಸೋಲಿನಿಂದ ಸಂತೋಷ ಆಗಬಾರದೇನು ?'' ಎನ್ನುವ ಗಾಂಧಿಗೆ ಅಂಬೇಡ್ಕರರ ತಳಮಳವಾಗಲಿ, ಅನುಭವಿಸಿದ ನೋವಾಗಲಿ ಏಕೆ ಅರ್ಥವಾಗಲಿಲ್ಲ ಎನಿಸುತ್ತದೆ. ಅಂತೆಯೇ ''ಪ್ರತ್ಯೇಕತೆಯ ಹೆಸರಿನಲ್ಲಿ ಎಲ್ಲ ಜಾತಿಗಳು ಪರಸ್ಪರ ವೈರತ್ವದಿಂದ ಕುದಿಯುತ್ತಿವೆ. ಹಿಂದೂಸ್ಥಾನ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತದೆ. ಭಾರತ ಒಂದು ಹಿಡಿಯಾಗಿರಬೇಕು'' ಎನ್ನುವ ಗಾಂಧಿಯ ಆತಂಕ ಕೂಡ ಗೋಚರಿಸುತ್ತದೆ.

''ಸ್ವರಾಜ್ಯ ಎನ್ನುವುದು ಒಬ್ಬ ಬ್ರಾಹ್ಮಣನ ಹಕ್ಕು ಹೇಗೋ ಹಾಗೆಯೇ ಒಬ್ಬ ಅಸ್ಪೃಶ್ಯನ ಹಕ್ಕೂ ಹೌದು. ಅಸ್ಪೃಶ್ಯ ಏಳ್ಗೆಯಾಗದಿದ್ದರೆ ಸ್ವರಾಜ್ಯವೆಂಬುದು ಕೇವಲ ಒಂದು ಕನಸು'' ಎಂದು ಹೇಳುವ ಅಂಬೇಡ್ಕರ್, ಹಾಗೆಯೇ ''ಅಸ್ಪೃಶ್ಯತೆಯನ್ನು ಹೋಗಲಾಡಿಸಿ ಎಲ್ಲರೂ ಸಮಾನರಾಗಿ ಬದುಕುವ ಪರಿಸ್ಥಿತಿ ನಿರ್ಮಾಣವಾಗದಿದ್ದರೆ ಸ್ವರಾಜ್ಯ ಅರ್ಥಹೀನ'' ಎಂದು ಹೇಳುವ ಗಾಂಧಿ ಇಬ್ಬರೂ ತಲುಪಲು ಹೊರಟಿರುವ ದಾರಿ ಒಂದೇ ಎನ್ನುವುದನ್ನು ನಿರ್ದೇಶಕರು ಸಮರ್ಥವಾಗಿ ತಂದಿದ್ದಾರೆ.

ಇಂದು ಗಾಂಧಿಯನ್ನು ದಲಿತ ವಿರೋಧಿ ಎನ್ನುವ ದಲಿತರು ಹಾಗೂ ಇತರರು, ಹಾಗೆಯೇ ಅಂಬೇಡ್ಕರರನ್ನು ಕೇವಲ ದಲಿತರ ನಾಯಕ ಎನ್ನುವ ಮೂಲಭೂತವಾದಿಗಳಿಗೂ ಈ ನಾಟಕ ಒಂದಷ್ಟು ಸತ್ಯಗಳನ್ನು ಪರಿಚಯಿಸುತ್ತದೆ. ಅಂಬೇಡ್ಕರರೇ ಹೇಳುವಂತೆ ''ಗಾಂಧಿ ಸತ್ತ ಸುದ್ದಿ ಕೇಳಿ ನನ್ನ ಹೃದಯ ಚೂರು ಚೂರಾಯಿತು'' ಎನ್ನುವ ಮಾತುಗಳೇ, ಇವರಿಬ್ಬರ ವ್ಯಕ್ತಿತ್ವಗಳನ್ನು ಅರಿಯಲು ಸಾಕೆನಿಸುತ್ತದೆ.

ಒಟ್ಟಾರೆ, ನಾಟಕದ ಮುಖ್ಯ ಪಾತ್ರಗಳಾದ ಗಾಂಧಿ-ಅಂಬೇಡ್ಕರರನ್ನು ಮುಖಾಮುಖಿಯಾಗಿಸಿ ಇವರಿಬ್ಬರ ವ್ಯಕ್ತಿತ್ವಗಳನ್ನು ತಲಸ್ಪರ್ಶಿಯಾಗಿ ಅವರ ಆಂತರಂಗ ಬಹಿರಂಗಗಳನ್ನು ನಿರ್ದೇಶಕರು ವಿಮರ್ಶೆಗೊಳಪಡಿಸಿರುವ ಪ್ರಯತ್ನ ಸಾರ್ಥಕವೆನಿಸುತ್ತದೆ. ನಾಟಕದಲ್ಲಿ ಪಾತ್ರಗಳು ಮೂರೇ ಇದ್ದರೂ (ಗಾಂಧಿ, ಅಂಬೇಡ್ಕರ್, ವಿದೂಷಕ) ನಿರ್ದೇಶಕರು ವಿದೂಷಕನ ಪಾತ್ರವನ್ನು ಐದು ಪಾತ್ರಗಳಾಗಿ ವಿಂಗಡಿಸಿ ನಾಟಕದ ರಂಗು ಹೆಚ್ಚಿಸಿದ್ದಾರೆ. ವಿದೂಷಕರು : ಲೋಕೇಶ್ ಬಸವಟ್ಟಿ, ಪ್ರಶಾಂತ್, ವಿಕಾಸ್, ರಜನೀಕಾಂತ್, ಮತ್ತು ರಾಮು ಇಡೀ ನಾಟಕದುದ್ದಕ್ಕೂ ಅದ್ಭುತ ನಟನೆ ಮತ್ತು ಚತುರ ಸಂಭಾಷಣೆಗಳಿಂದ ಪ್ರೇಕ್ಷಕರಲ್ಲಿ ಗುನುಗುತ್ತಿರುತ್ತಾರೆ. ಅಂಬೇಡ್ಕರ್ ಪಾತ್ರದಲ್ಲಿ ಹೇಮರಾಜ್ (ಗೌತಮ್) ಗಾಂಧಿಯ ಪಾತ್ರದಲ್ಲಿ ಚ. ನಾರಾಯಣಸ್ವಾಮಿ ತಮ್ಮ ಪಾತ್ರಕ್ಕೆ ಯಾವುದೇ ಕುಂದುಂಟಾಗದಂತೆ ಎಚ್ಚರವಹಿಸಿ ನಟಿಸಿದ್ದಾರೆ. ಇವರ ಶ್ರಮ ಮೆಚ್ಚುವಂಥದ್ದು. ಎಚ್. ಕೆ. ರಂಗನಾಥ್ ಅವರ ರಂಗ ವಿನ್ಯಾಸ ಅರ್ಥವತ್ತಾಗಿದೆ. ಸಂಗೀತ ಅಷ್ಟಾಗಿ ಗಮನ ಸೆಳೆಯದಿದ್ದರೂ ನಾಟಕಕ್ಕೆ ಅದು ಪೂರಕವಾಗಿದೆ. ಅಚ್ಚುಕಟ್ಟಾದ ಬೆಳಕಿನ ವಿನ್ಯಾಸ. ಹಾಗೆಯೇ ವಿದೂಷಕನ ಪಾತ್ರವಹಿಸಿದ ಹಾಸನ್ ರಘು ಅವರ ಶ್ರಮ ನಾಟಕದುದ್ದಕ್ಕೂ ನೋಡುಗರಿಗೆ ವೇದ್ಯವಾಗುತ್ತದೆ.

ಒಟ್ಟಾರೆ, ಗಾಂಧಿ-ಅಂಬೇಡ್ಕರ್‌ರಂತಹ ಭಿನ್ನ ವ್ಯಕ್ತಿತ್ವಗಳನ್ನು ರಂಗದ ಮೇಲೆ ತರುವುದು ಸುಲಭದ ಮಾತಲ್ಲ. ಒಬ್ಬ ಸೃಜನಶೀಲ ನಿರ್ದೇಶಕರಾಗಿ ಸಿ. ಬಸವಲಿಂಗಯ್ಯನವರು ಅಂತಹ ಸಾಹಸಕ್ಕೆ ಕೈ ಹಾಕಿ ಎಲ್ಲೂ ಆಯತಪ್ಪದ ಹಾಗೆ ಯಶಸ್ವಿಯಾಗಿದ್ದಾರೆ ಎನ್ನಬಹುದು.

**ರವಿಕುಮಾರ್ ಬಾಗಿ**
ಸಂಶೋಧನಾ ವಿದ್ಯಾರ್ಥಿ, ಬೆಂಗಳೂರು ವಿಶ್ವವಿದ್ಯಾಲಯ

## ಸಾದರ ಸ್ವೀಕಾರ

**ಶ್ರೀ ನಾರಾಯಣ ಗುರು ವಿಜಯ ದರ್ಶನ**
ಬಾಬು ಶಿವ ಪೂಜಾರಿ
**ಪುಟ : ೪೩೫** **ಬೆಲೆ : ರೂ. ೩೦೦**
ಬಿಲ್ಲವ ಜಾಗೃತಿ ಬಳಗ, ಅಭಾಜೋ ಹೌಸ್, ಪ್ಲಾಟ್ ಸಂ. ೩, ೨೨/೨೨ಎ, ರುಸ್ತುಮ್ ಸಿಧ್ವ ಮಾರ್ಗ್, ಕೋಟೆ, ಮುಂಬಯಿ - ೪೦೦ ೦೦೧

**ಸ್ಮರಣೀಯ ಚೇತನ ಸಮಾಜಮುಖಿ ಪಿ. ಆರ್. ಜಯಲಕ್ಷಮ್ಮ**
ಸಂ. : ಎಂ. ವಿ. ವೆಂಕಮ್ಮ
**ಪುಟ : ೧೬೪** **ಬೆಲೆ : ನಮೂದಿಸಿಲ್ಲ**
ಪಿ. ಆರ್. ಜಯಲಕ್ಷಮ್ಮ ಮತ್ತು ಪಿ. ಆರ್. ರಾಮಯ್ಯನವರ ಕುಟುಂಬವರ್ಗ, ೧೨/೯, ಕಾಳಪ್ಪ ಬ್ಲಾಕ್, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಹಣತೆಗಳು** (ಕಾದಂಬರಿ) ಎಂ. ವಿ. ಭಟ್
**ಪುಟ : ೧೫೦** **ಬೆಲೆ : ರೂ. ೭೦**
ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ - ೫೭೪ ೧೫೦ (ದ.ಕ.)

**ನಿವೃತ್ತಿಯ ನಂತರ...** (ಪತ್ರ ಸಂಗ್ರಹ)
ಸಂ. : ನಾರಾಯಣ ಯಾಜಿ ಶಿರಾಲಿ
**ಪುಟ : ೮೬** **ಬೆಲೆ : ರೂ. ೪೫**
ಸೀತಾಕೃಷ್ಣ ಪ್ರಕಾಶನ, ೫೮, ಎಂಐಜಿ, ೨, ೩ನೇ ಹಂತ, ಹೌಸಿಂಗ್ ಬೋರ್ಡ್, ಜ್ಯೋತಿ ನಗರ ಅಂಚೆ, ಚಿಕ್ಕಮಗಳೂರು - ೫೭೭ ೧೦೨

**ಸಾಹಿತಿಗಳಿಗೆ ಒಂದು ಗತಿ ಕಾಣಿಸುವುದು** (ಲಲಿತ ಪ್ರಬಂಧಗಳು)
ಎಂ. ಡಿ. ಗೋಗೇರಿ
**ಪುಟ : ೧೩೨** **ಬೆಲೆ : ರೂ. ೬೦**
ಸಾಹಿತ್ಯ ಸೌಧ ಪ್ರಕಾಶನ, ನವ ಅಯೋಧ್ಯಾ ನಗರ, ಹಳೇ ಹುಬ್ಬಳ್ಳಿ, ಹುಬ್ಬಳ್ಳಿ - ೨೪

**ಲಿಂಗತ್ವ ಸಮನ್ಯಾಯದೆಡೆಗೆ** ಡಾ|| ಸಬಿಹಾ ಭೂಮಿಗೌಡ
**ಪುಟ : ೧೪೦** **ಬೆಲೆ : ರೂ. ೭೦**
ಕರ್ನಾಟಕ ಸಂಘ (ರಿ), ಮಂಡ್ಯ, ಗುರುಭವನದ ಹಿಂಭಾಗ, ಆರ್.ಪಿ. ರಸ್ತೆ, ಮಂಡ್ಯ - ೫೭೧ ೪೦೧

**ಪ್ರೊ|| ಬಿ. ಕೃಷ್ಣಪ್ಪ ದಲಿತ ಕಥನ** ಉಮಾದೇವಿ ಎಂ. ಪಾಟೀಲ
**ಪುಟ : ೭೨** **ಬೆಲೆ : ರೂ. ೪೦**
ಪಲ್ಲವ ಪ್ರಕಾಶನ, ಚನ್ನಪಟ್ಟಣ ಅಂಚೆ, ಎಮ್ಮಿಗನೂರು ಮಾರ್ಗ, ಬಳ್ಳಾರಿ - ೫೮೩ ೧೧೩

**ನವೋದಯ ಪಾಥೇಯ** (ಪ್ರಬಂಧಗಳು) ಸಿ.ಪಿ.ಕೆ.
**ಪುಟ : ೧೦೪** **ಬೆಲೆ : ರೂ. ೭೫**
ಕ್ರೈಸ್ಟ್ ಕಾಲೇಜು ಕನ್ನಡ ಸಂಘ, ಹೊಸೂರು ರಸ್ತೆ, ಬೆಂಗಳೂರು - ೫೬೦ ೦೨೯

**'ಶ್ರೀ ಪುತ್ರಾಯ'ರ ಲಲಿತ ಪ್ರಬಂಧಗಳು 'ಎರಡಾಣೆ'**
ಸಂ. : ಕು. ಗೋ.
**ಪುಟ : ೭೨** **ಬೆಲೆ : ರೂ. ೪೦**

**ಆಯ್ದ ಕಥೆಗಳು** ಕು. ಗೋ.
**ಪುಟ : ೧೨೦** **ಬೆಲೆ : ರೂ. ೫೦**

**ಪಟ ಪಟ ಪಟಾಕಿ** (ವಿನೋದ ವ್ಯಂಗ್ಯ ಬರಹಗಳು) ಕು. ಗೋ.
**ಪುಟ : ೮೨** **ಬೆಲೆ : ರೂ. ೩೦**

**ಆಯ್ದ ಲಲಿತ ಪ್ರಬಂಧಗಳು** ಕು. ಗೋ.
**ಪುಟ : ೧೨೦** **ಬೆಲೆ : ರೂ. ೫೦**

**ಆಯ್ದ ನಗೆಬರಹಗಳು** ಕು. ಗೋ.
**ಪುಟ : ೧೨೫** **ಬೆಲೆ : ರೂ. ೫೦**
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಸುಹಾಸಂ,** ವಾಗ್ದೇವಿ, ಹಯಗ್ರೀವನಗರ, ಉಡುಪಿ - ೫೭೬ ೧೦೨

**ಕನ್ನಡಿಯೊಳಗಿನ ಪ್ರತಿಬಿಂಬ** (ಕವನ ಸಂಕಲನ)
ಡಾ|| ಮಾಗವಿ .ಸ್. ಭಂಡಾರಿ
**ಪುಟ : ೭೨** **.ಲೆ : ರೂ. ೨೪**
ಪುಸ್ತಕನಿಧಿ, ಗಾವಳಿ ಶಾಲೆ ಹತ್ತಿರ, ಹಳ್ಳಾಡಿ - ಹರ್ಕಾಡಿ ಅಂಚೆ, ಕುಂದಾಪುರ - ೫೭೬ ೨೧೦

**ಜೀವಂತ ಜನ** (ಸಾಮಾಜಿಕ ನಾಟಕ) ಫ. ಶಿ. ಭಾಂಡಗೆ
**ಪುಟ : ೧೩೮** **ಬೆಲೆ : ರೂ. ೬೦**

**ದೇವ ದರ್ಶನ** (ಸಾಮಾಜಿಕ ನಾಟಕ) ಫ. ಶಿ. ಭಾಂಡಗೆ
**ಪುಟ : ೧೫೬** **ಬೆಲೆ : ರೂ. ೬೦**

**ಹೊಸ ಕಾನೂನು** (ಸಾಮಾಜಿಕ ನಾಟಕ) ಫ. ಶಿ. ಭಾಂಡಗೆ
**ಪುಟ : ೧೬೮** **ಬೆಲೆ : ರೂ. ೬೦**
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ವಿವೇಕ ಪ್ರಕಾಶನ,** ಕಾಗದಗೇರಿ ಓಣಿ, ಗದಗ - ೫೮೨ ೧೦೧

**ಒಲಿಂಪಿಕ್ಸ್ ಎಂಬ ಕೆಂಪು ದೀಪ** ಡಾ|| ಲೀಲಾ ಸಂಪಿಗೆ
**ಪುಟ : ೨೪** **ಬೆಲೆ : ರೂ. ೧೫**
**ಪ್ಯಾಪಿರಸ್,** ೧, ಯಮುನಾಬಾಯಿ ರಸ್ತೆ, ಯೂನಿಟ್-೫, ಮೊದಲನೇ ಮಹಡಿ, ಮಾಧವನಗರ - ಬೆಂಗಳೂರು - ೧



ತಾತ್ವಿಕವಾಗಿ ಬದುಕಿನ ಅನಿರ್ದಿಷ್ಟತೆ, ಮನುಷ್ಯನ (ಓದುಗ) ಮಾನಸಿಕ ಅನಿರ್ದಿಷ್ಟತೆಯನ್ನು ಅಷ್ಟಾಗಿ ಗುರುತಿಸಲಾರದ ಡೆರಿಡಾ ಸಾಹಿತ್ಯಕ್ಕಿರ ಬಹುದಾದ ಭಾಷಾ ಅನಿರ್ದಿಷ್ಟತೆ ಅಥವಾ ಅನನ್ಯತೆಯನ್ನಷ್ಟೇ ಗಮನಿಸುವಂತೆ ಕಾಣುತ್ತಾನೆ. ಒಂದು ಚೌಕಟ್ಟಿನೊಳಗೆ ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳಲೆತ್ನಿಸುವ ಎಲ್ಲ ಸಿದ್ಧಾಂತಗಳೂ ತಮ್ಮ ಎದುರಾಳಿಯ ಬಗೆಗೆ ಹೆಚ್ಚು ಸಂಕೀರ್ಣವಾಗುತ್ತಲೇ ಒಂದು ರೀತಿಯ ದ್ವಂದ್ವವನ್ನೂ ತಮ್ಮೊಂದಿಗೆ ಬೆಸೆದುಕೊಂಡಿರುತ್ತವೆ. 'ಮಾನವೀಯತೆ' ಎಂಬ ಅಮೂರ್ತ ಸಿದ್ಧಾಂತದಾಚೆಗೆ ಬೇರೆಲ್ಲವೂ ಪ್ರವಾಸಿ ಗುಣ ಹೊಂದಿರುವುದನ್ನು ಸಾಹಿತ್ಯಲೋಕ ಕಂಡಿದೆ (ದಯವಿಲ್ಲದ ಧರ್ಮ ಅದಾವುದಯ್ಯಾ ಎಂಬ ರೀತಿಯಲ್ಲಿ). ಸಾಹಿತ್ಯವೇ ಅನಿರ್ದಿಷ್ಟವೆಂದಮೇಲೆ ಅದರ ಒಡಲಲ್ಲಿ ಮೂಡುವ ವಿಮರ್ಶೆ, ಸಿದ್ಧಾಂತಗಳ ಬಗೆಗೇನು ಹೇಳುವುದು ?

# ಡೆರಿಡಾ ಮತ್ತು ಕನ್ನಡ ಸಾಹಿತ್ಯ




ಲೇಖಕರು
**ಕೇಶವ ಶರ್ಮ ಕೆ.**

ಪ್ರಕಾಶಕರು
**ಅಭಿನವ ಪ್ರಕಾಶನ**
ನಂ. ೧೭/೧೮-೨
೧ನೇ ಮುಖ್ಯರಸ್ತೆ
ಮಾರೇನಹಳ್ಳಿ
ವಿಜಯನಗರ
ಬೆಂಗಳೂರು - ೫೬೦ ೦೪೦

**ಬೆಲೆ : ರೂ. ೮೦**

ರಚನಾವಾದದ ನಿಲುವನ್ನು ಪ್ರಬಲವಾಗಿ ಖಂಡಿಸುವ ಫ್ರೆಂಚ್ ತಜ್ಞ ಜೆಕೋಸ್ ಡೆರಿಡಾನ 'ನಿರಚನೆ' ಸಿದ್ಧಾಂತ ಇಡೀ ಸಾಹಿತ್ಯ ಚಿಂತನೆಯ ಹಲವು ಅತಾರ್ಕಿಕತೆಯನ್ನು ಬಯಲುಗೊಳಿಸುವ ಮೂಲಕ ತನ್ನ ಅಸ್ತಿತ್ವ ಕಂಡು ಕೊಂಡಿದೆಯೇ ? ಅಥವಾ ನಿರಚನವು ಭಾಷಾ ಬಹುತ್ವ ಸಾರುವ ಮೂಲಕ ಸಾಹಿತ್ಯ ವಿರೋಧಿಸುತ್ತದೆಯೇ ? ಒಟ್ಟಾರೆ ಸಾಹಿತ್ಯ ಸಂದರ್ಭಕ್ಕೆ ಪ್ರಸ್ತುತವೆ- ಅಪ್ರಸ್ತುತವೆ ಅಥವಾ ಅತೀರೇಕದ್ದೇ ?

ಸ್ತ್ರೀವಾದ ಚಿಂತಕರೂ, ವಿಮರ್ಶಕರೂ ಆದ ಡಾ|| ಕೆ. ಕೇಶವ ಶರ್ಮ ರವರಿಂದ ಹೊರಬಂದಿರುವ 'ರಚನೆ-ನಿರಚನೆ' ಕೃತಿ ಓದಿದನಂತರ 'ನಿರಚನ ಸಿದ್ಧಾಂತ' ಹಾಗೂ ಡೆರಿಡಾ ಕುರಿತು ಅಭ್ಯಾಸಿಗರಲ್ಲಿ ಕೆಲವು ಪ್ರಶ್ನೆಗಳೇಳುವುದು ಸಹಜವಾಗಿದೆ.

ಡೆರಿಡಾನ ವಾದವೇನೆ ಇರಲಿ, ಆತನ ಸಿದ್ಧಾಂತವನ್ನು ಒಟ್ಟು ಗ್ರಹಿಕೆಯೊಂದಿಗೆ ಕನ್ನಡ ಸಾಹಿತ್ಯ ಸನ್ನಿವೇಶಕ್ಕೆ ಪರಿಚಯಿಸುತ್ತಿರುವ ಶರ್ಮ ಅವರು ಸಮರ್ಥ ನಿರೂಪಣೆಯ ಮೂಲಕ ಗಂಭೀರ ಚರ್ಚೆಯ ಕೃತಿಯೊಂದನ್ನು ಸಾಹಿತ್ಯಾಸಕ್ತರ ಮುಂದಿಟ್ಟಿದ್ದಾರೆ. ''ಸಾಮಾಜಿಕ ಸತ್ಯವನ್ನು ಅನುಮಾನಿಸುವ ನಿರಚನ ಸಿದ್ಧಾಂತ ವ್ಯಕ್ತಿ ಕೇಂದ್ರಿತ ನಿಲುವನ್ನಷ್ಟೆ ಎತ್ತಿಹಿಡಿಯುತ್ತದೆ. ಬಂಡವಾಳಶಾಹಿ ವ್ಯವಸ್ಥೆಯು ವ್ಯಕ್ತಿಯನ್ನು ತನ್ನಿಂದ ಬೇರ್ಪಡಿಸಿ ನೋಡುವಂತೆ ಡೆರಿಡಾವಾದ ನೋಡುತ್ತದೆ'' ಎಂದು ತಮ್ಮ ಅಭಿಪ್ರಾಯ ಸೂಚಿಸುವ ಲೇಖಕರು ತಮ್ಮ ನಂಬಿಕೆಗಳ ಜೊತೆಗೆ ನಿರಚನದ ಧೋರಣೆಯನ್ನು ವಸ್ತುಬದ್ಧವಾಗಿ ಪ್ರತಿಪಾದಿಸಿದ್ದಾರೆ.

ರಚನಾವಾದವು ಒಂದಿಲ್ಲೊಂದು ರೀತಿ ಚರ್ಚೆಯಾಗುತ್ತಲೇ ಬಂದಿರುವುದರಿಂದ ಇಲ್ಲಿ ನಿರಚನಾವಾದದ ಬಗೆಗಷ್ಟೇ ನೋಡಬಹುದು. ತನ್ನ ಸಿದ್ಧಾಂತ ಕುರಿತು ಡೆರಿಡಾ ನಿಲುವಿಷ್ಟು: ''ಯಾವುದೇ ಕೃತಿಗೆ ಒಂದು ಕೇಂದ್ರವಿರುವುದಿಲ್ಲ; ಹಲವಿರುತ್ತವೆ. ನಿರಚನ, ಓದುಗ ಕೇಂದ್ರಿತವಾದದ್ದು. ಲೇಖಕನಿಗೆ ಕೃತಿಪೂರ್ವದಲ್ಲಿ ನಿಖರ ಆಲೋಚನೆ ಇರುವುದಿಲ್ಲ. ಹಾಗೇ ಅಂಥ ಕೃತಿ ಕುರಿತ ವಿಮರ್ಶೆಯೂ ಖಚಿತವಲ್ಲ, ಬರಹದಾಚೆಗೂ ಆಲೋಚನೆ ಸಾಧ್ಯ. ಹಾಗೂ ಕಾವ್ಯಭಾಷೆಯೊಳಗಿನ ಪದಗಳಿಗೆ ವಿರುದ್ಧವೂ ಪರ್ಯಾಯವೂ ಆದ ಪದ ಪ್ರಯೋಗ ಮಾಡಿ ನೋಡಬೇಕು'' ಮುಂತಾಗಿ ಡೆರಿಡಾ ಪ್ರತಿಪಾದಿಸುತ್ತಾನೆ. ಈ ನಿಟ್ಟಿನಲ್ಲಿ ಭಾಷೆಯ ಆಲೋಚನೆ ಮತ್ತು ಅರ್ಥ ವೈವಿಧ್ಯವು ಕಲೆ-ಸಾಹಿತ್ಯದ ಅರ್ಥ ವೈವಿಧ್ಯಕ್ಕಿಂತ ಶ್ರೇಷ್ಠವೆಂದು ಭಾವಿಸುವ ಡೆರಿಡಾನ ಧೋ.ರಣೆ ಕುರಿತು ಮತ್ತಷ್ಟು ಯೋಚಿಸುವುದು ಸಾಧ್ಯವಾಗಬೇಕಿದೆ.

ತಾತ್ವಿಕ.ಾಗಿಯೂ ಬದುಕಿನ ಅನಿರ್ದಿಷ್ಟತೆ, ಮನುಷ್ಯನ (ಓದುಗ) ಮಾನಸಿಕ ಅನಿರ್ದಿಷ್ಟತೆಯನ್ನು ಅಷ್ಟಾಗಿ ಗುರುತಿಸಲಾರದ ಡೆರಿಡಾ ಸಾಹಿತ್ಯಕ್ಕಿರಬಹುದಾದ ಭಾಷಾ ಅನಿರ್ದಿಷ್ಟತೆ ಅಥವಾ ಅನನ್ಯತೆಯನ್ನಷ್ಟೇ ಗಮನಿಸುವಂತೆ ಕಾಣುತ್ತಾನೆ. ಒಂದು ಚೌಕಟ್ಟಿನೊಳಗೆ ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳಲೆತ್ನಿಸುವ ಎಲ್ಲ ಸಿದ್ಧಾಂತಗಳೂ ತಮ್ಮ ಎದುರಾಳಿಯ ಬಗೆಗೆ ಹೆಚ್ಚು ಸಂಕೀರ್ಣವಾಗುತ್ತಲೇ ಒಂದು ರೀತಿಯ ದ್ವಂದ್ವವನ್ನೂ ತಮ್ಮೊಂದಿಗೆ ಬೆಸೆದುಕೊಂಡಿರುತ್ತವೆ. 'ಮಾನವೀಯತೆ' ಎಂಬ ಅಮೂರ್ತ ಸಿದ್ಧಾಂತದಾಚೆಗೆ ಬೇರೆಲ್ಲವೂ ಪ್ರವಾಸಿ ಗುಣ ಹೊಂದಿರುವುದನ್ನು ಸಾಹಿತ್ಯ ಲೋಕ ಕಂಡಿದೆ (ದಯವಿಲ್ಲದ ಧರ್ಮ ಅದಾವುದಯ್ಯಾ ಎಂಬ ರೀತಿಯಲ್ಲಿ). ಸಾಹಿತ್ಯವೇ ಅನಿರ್ದಿಷ್ಟವೆಂದಮೇಲೆ ಅದರ ಒಡಲಲ್ಲಿ ಮೂಡುವ ವಿಮರ್ಶೆ, ಸಿದ್ಧಾಂತಗಳ ಬಗೆಗೇನು ಹೇಳುವುದು ?

ಕಾವ್ಯ ಭಿನ್ನತೆಗಾಗಿ ಪರ್ಯಾಯ ಶಬ್ದ ಸಾಧ್ಯತೆ ಮತ್ತು ಅದರಿಂದ ಕಾವ್ಯದ ಹೊಸ ಹೊಳಹು ಅಥವಾ ಅನಿರ್ದಿಷ್ಟತೆಯ ಬಗೆಗೆ ಹೇಳುವ ಡೆರಿಡಾನ ವಾದವನ್ನು ಅದೇ ಫ್ರೆಂಚ್ ರೂಪಕ ಕವಿಗಳಲ್ಲಿ ಅತಿ ಮುಖ್ಯನಾದ ಪಾಲ್ ವೆಲರಿಯ ನಿಲುವಿನೊಂದಿಗಿಟ್ಟು ನೋಡಬಹುದು. ವೆಲರಿಯ ನಿಲುವು ಸರಳ : ''ಬರಿ ವೈಚಾರಿಕ ಭಾವನೆಗಳಿಂದ ಕಾವ್ಯವಾಗುವುದಿಲ್ಲ : ಪರಿಣಾಮಕಾರಿಯಾಗಿ ಶಬ್ದ ಜೋಡಣೆ ಬೇಕು. ಪ್ರತಿ ಶಬ್ದಕ್ಕೂ ತನ್ನದೇ ಆದ

ಶ್ರೀಪ್ರಕಾಶ್‌ಚಂದ್ರ ಹೆಚ್. ಆರ್.

ಜೀವಗ್ರಂಥಿ, ಅಂತಸ್ರಾವವಿರುತ್ತದೆ. ಅಂತಹ ಪದ ಜೋಡಣೆಯಿಂದ ನಿಶ್ಚಿತ ಪರಿಣಾಮ ಮೂಡುತ್ತದೆ'' ಎನ್ನುವ ವೆಲರಿ ಶಬ್ದಗಳನ್ನು ಅದಲು ಬದಲು ಮಾಡುತ್ತ, ವೈರುಧ್ಯದಲ್ಲಿ ನೋಡುತ್ತಾ ಹೋಗುತ್ತಾನೆ. ಭಾಷೆಯ ಜೀವಂತಿಕೆಯನ್ನು ಕಾವ್ಯದ ಮೂಲಕ ಶೋಧಿಸುವ ವೆಲರಿ ಮತ್ತು ಡೆರಿಡಾ ಅನೇಕ ರೀತಿಯಲ್ಲಿ ಭಿನ್ನ ಎನಿಸಿದರೂ ಅನೇಕ ರೀತಿಯಲ್ಲಿ ಒಂದೇ ಆಗುತ್ತಾರೆ.

ಜಾಗತಿಕ ಭಾಷಾ ವ್ಯಾಪಕತೆ ಹೊಂದಿರುವ ಪಶ್ಚಿಮ ಅಥವಾ ಯೂರೋಪಿಯನ್ ಸಿದ್ಧಾಂತಗಳಿಗೆ ಕನ್ನಡದಂಥ ಪ್ರಾದೇಶಿಕ ಭಾಷೆಯೊಂದಕ್ಕೆ ಮೋಸಗೊಳಿಸುವುದು ಹೆಚ್ಚು ಸುಲಭ. 'ಫ್ರೆಂಚ್ ಭಾಷೆ ಜಡಗೊಂಡು ಖ್ಯಾತಿಗಾಗಿ ನುಣ್ಣನೆಯ ಪದ ಬಳಸುವುದು ಕವಿಗಳಿಗೆ ಅನಿವಾರ್ಯವಾಯಿತು' ಎನ್ನುತ್ತಾನೆ ವೆಲರಿ. ಇದೇ ಮಾತು ಇಂದಿನ ಕನ್ನಡ ಸಾಹಿತ್ಯ ಸಂದರ್ಭಕ್ಕೆ ಹೆಚ್ಚು ಹತ್ತಿರವೆನ್ನಿಸುತ್ತಿರುವುದರಿಂದ ವಿದೇಶಿ ಸಾಹಿತ್ಯ-ಸಿದ್ಧಾಂತಗಳ ಬೂಟಾಟಿಕೆಯನ್ನು ಕೂಡ ಗ್ರಹಿಸಬೇಕಿದೆ.

ರಚನಾ ವಾದವನ್ನು ಪ್ರಬಲವಾಗಿ ನಿರಾಕರಿಸುವ ನಿರಚನ ಸಿದ್ಧಾಂತ ತನ್ನ ವಿರೋಧಿ ಅಂಶಗಳನ್ನು ಕಂಡುಕೊಂಡದ್ದು ಕೂಡ ರಚನಾವಾದದಿಂದಲೇ ? ಡೆರಿಡಾ ನಿರಚನವನ್ನು ವಿವರಿಸುವಾಗ ಫ್ರೆಂಚ್ ಸಾಹಿತ್ಯದ ದ್ವಂದ್ವ ಮತ್ತು ಜಡತ್ವ ಕುರಿತು ಹೇಳುತ್ತಾನೆಯೇ ? ಅಥವಾ ವಿಶ್ವ ಸಾಹಿತ್ಯವನ್ನು ಗಮನದಲ್ಲಿಟ್ಟುಕೊಂಡು ಹೇಳುತ್ತಾನೆಯೇ ? ಹಾಗೂ ಫ್ರೆಂಚ್, ರಷ್ಯನ್, ಇಂಗ್ಲಿಷ್ ಭಾಷಾತಜ್ಞರು ಡೆರಿಡಾಗೆ ಯಾವ ರೀತಿ ಪ್ರತಿಕ್ರಿಯಿಸಿದರು ? ಈ ಕುರಿತು ರಚನೆ-ನಿರಚನೆ ತಿಳಿಸುವುದಿಲ್ಲ. ಹಾಗೆ ಡೆರಿಡಾ ವಾದಕ್ಕೆ ಮೂಲ ಸ್ಫೂರ್ತಿಯಾದ ನೀಶೆ, ತತ್ವಜ್ಞಾನ ಕುರಿತು - ''ಪಶ್ಚಿಮದ ತಂತ್ರಜ್ಞಾನವು ಪೂರ್ವನಿಯೋಜನೆಗೆ ಒಳಪಟ್ಟಿದೆ'' ಎಂದು ಹೇಳುತ್ತಾನೆ. ಇಂತಹ ಅನೇಕ ದ್ವಂದ್ವಗಳು ವಿದೇಶಿ ಸಾಹಿತ್ಯ ಸಿದ್ಧಾಂತಗಳಲ್ಲಿವೆ.

'ರಚನೆ' ಎಂದರೆ ಯಾವುದು – ಎಂಬ ಪ್ರಶ್ನೆಯನ್ನು ಸ್ಥಾಯಿಗೊಳಿಸುತ್ತಲೇ ರಚನೆಗೆ ಒಂದೇ ಕೇಂದ್ರವಿರುವುದಿಲ್ಲ: ಹಲವಾರು ಇರುತ್ತವೆ ಎಂಬ ನಿರಚನದ ನಿಲುವು ಹೆಚ್ಚು ಚರ್ಚಾರ್ಹವಾಗಿದೆ. ಕಟ್ಟಡವೊಂದರ ರಚನೆಗೆ ಸಂಬಂಧಿಸಿದಂತೆ ಸಾಹಿತ್ಯ ಕೃತಿಗೂ ಒಂದು ಕೇಂದ್ರವಿರುತ್ತದೆ ಎಂದು ರಚನಾವಾದಿಗಳು ಅಭಿಪ್ರಾಯಪಡುತ್ತಾರೆ. ಮನುಷ್ಯ ಆಕೃತಿಯನ್ನು ಒಂದು ರಚನೆ ಎಂದುಕೊಂಡರೆ ಅಲ್ಲಿ ಕೇಂದ್ರ ಯಾವುದು ? ಹೃದಯ ? ಆತ್ಮ ? ಮೆದುಳು ? ನರಮಂಡಲ ಅಥವಾ ಸಪ್ತಧಾತುಗಳೆ ? ವೈಜ್ಞಾನಿಕ ಪರಿಶ್ರಮ ಕೂಡ ಈ ಕುರಿತು ಸತ್ಯವನ್ನು ಹೇಳಲಾರದು. ಕೃತಿಗೆ ಒಂದೇ ಕೇಂದ್ರವಿರುತ್ತದೆ ಎನ್ನುವ ರಚನಾವಾದ ಹಲವು ಕೇಂದ್ರಗಳ ಸಮಸ್ಯೆ ತಲೆದೋರಿದಾಗೆಲ್ಲ 'ಶಿಥಿಲತೆ' ಎಂಬ ಪರಿಭಾಷೆಯನ್ನು ಮುಂದಿಡುತ್ತದೆ. (ಉದಾಹರಣೆಗೆ, ಮಲೆಗಳಲ್ಲಿ ಮದುಮಗಳು, ಅಡಿಗರ ಭೂಮಿಗೀತ ಇತ್ಯಾದಿ )

ಡೆರಿಡಾನ ಮತ್ತೊಂದು ಮುಖ್ಯ ಸಮಸ್ಯೆ ಕೃತಿಪೂರ್ವದ ಆಲೋಚನಾ ಕ್ರಮ ಮತ್ತು ಕೃತಿಯ ಅನಿರ್ದಿಷ್ಟತೆ ಅಥವಾ ಅಪರಿಪೂರ್ಣತೆಯ ಕುರಿತಾಗಿದೆ. ''ಕೃತಿ ಪೂರ್ವದಲ್ಲಿ ಕೃತಿಕಾರನಿಗೆ ನಿಖರ ಹಾಗೂ ಅಂತಿಮವೆನ್ನಬಹುದಾದ ಆಲೋಚನಾ ಕ್ರಮ ಇರುವುದಿಲ್ಲ. ಕೃತಿ-ವಿಮರ್ಶೆಯಾಚೆಗೂ ಆಲೋಚನೆ ಸಾಧ್ಯವಿದೆ; ಓದುಗ ಅದನ್ನು ಕಂಡುಕೊಳ್ಳುತ್ತಾನೆ'' ಎನ್ನುವ ಡೆರಿಡಾ ಮನುಕುಲ, ಅವನ ಭಾಷೆ, ಸಂಸ್ಕೃತಿಯ ಅನಿರ್ದಿಷ್ಟತೆಯನ್ನು ಮರೆತಂತೆ ಗೋಚರಿಸುತ್ತಾನೆ. ''ಕೃತಿ ಪೂರ್ಣವೆಂಬುದೇ ಅಸಂಗತ. ಸಾಹಿತಿ ಕೃತಿಯನ್ನು ಅರ್ಧದಲ್ಲಿಯೇ ತೊರೆದು ಹೋಗುತ್ತಾನೆ'' ಎಂದು ಪಾಲ್ ವೆಲರಿ ಹೇಳಿದರೆ, 'ಪ್ರತಿಯೊಬ್ಬ ಸಾಹಿತಿಯೂ ತನ್ನ ಜೀವಿತದಲ್ಲಿ ಅತ್ಯುತ್ತಮವಾದ ಒಂದು ಕೃತಿ ಮಾತ್ರ ರಚಿಸಬಲ್ಲ. ಉಳಿದವು ಮುಖ್ಯ ಕೃತಿಯ ಹಿಂದು ಮುಂದಿನ ಆವೃತ್ತಿಗಳಂತಿರುತ್ತವೆ' ಎಂದು ಮಾರ್ಕ್ವೇಜ್ ಹೇಳುತ್ತಾನೆ. ಉದಾಹರಣೆಯಾಗಿ ಹೋಮರ್, ವಾಲ್ಮೀಕಿ, ವ್ಯಾಸ, ಪಂಪ, ಅನಂತಮೂರ್ತಿ (ಸಂಸ್ಕಾರ) ಇತ್ಯಾದಿ ನೋಡಬಹುದು. ಅಂದರೆ ತನಗೆ ಗೊತ್ತಿರುವ, ತಾನು ನಂಬಿರುವ ಹಲವು ಸತ್ಯಗಳನ್ನು ಒಂದುಗೂಡಿಸಿ ಅನುಭಾವಕ ಸ್ಥಿತಿಯಲ್ಲಿ ಅಖಂಡ ಸತ್ಯವಾಗಿಸಲು ಯತ್ನಿಸುವ ಸಾಹಿತಿ, ತನ್ನ ಆಲೋಚನೆಗಳನ್ನು ಪಾತ್ರ - ಸನ್ನಿವೇಶಗಳಲ್ಲಿ ಕಾಣಲು ಬಯಸುತ್ತಾನೆ. ಅವನ ಕನಸು ಕಲ್ಪನೆಯೋ, ಭ್ರಮೆಯೋ ಆಗಬಹುದು. ಕೆಲವು ಸಲ ಭಾಷೆ ದಕ್ಕದೆ ಹೋಗಿಬಿಡಬಹುದು. ಹೀಗಾಗಿ ವೆಲರಿ ಹೇಳುವಂತೆ, ಒಂದು ಕೃತಿ ಯಾವತ್ತೂ ಅಪರಿಪೂರ್ಣವಿರಲಿಕ್ಕಿದೆ. ಡೆರಿಡಾ ನಿಲುವು ಕೂಡ ಇದೇ ಆಗಿದೆ.

ಮನುಷ್ಯನೊಳಗಿನ ಅತೃಪ್ತಿಯನ್ನು ತಣಿಸಲೆತ್ನಿಸುವ ವಿವೇಕವು ಹೊಸ ಸಾಧ್ಯತೆಗಳನ್ನು ತೋರುತ್ತದೆ. ಹೊಸತು ಪಾರಂಪರಿಕವೂ ಆಗಿರಬಹುದು. ಹೋಮರ್ ಬರೆದದ್ದನ್ನೇ ಗ್ರೀಕ್ ರತ್ನತ್ರಯರೂ ಬರೆಯುತ್ತಾರೆ. ವ್ಯಾಸ ಬರೆದದ್ದನ್ನೇ ಪಂಪ ಬರೆಯುತ್ತಾನೆ. ವಾಲ್ಮೀಕಿ ಬರೆದದ್ದನ್ನೇ ಕುವೆಂಪು ಬರೆಯುತ್ತಾರೆ. ಈಗಾಗಲೇ ಅಸ್ತಿತ್ವದಲ್ಲಿರುವ ಸಂಗತಿಗಳನ್ನು ಮತ್ತೊಂದು ರೀತಿಯಲ್ಲಿ ಹೇಳುವ ಸಾಹಿತಿ ಚಾರಿತ್ರಿಕ ದೃಷ್ಟಿಯಿಂದ ಅಷ್ಟು ಮುಖ್ಯನೆನ್ನಿಸದಿರಬಹುದು, ಕಲೆಯ ಇತರ ದೃಷ್ಟಿಯಿಂದ ಮುಖ್ಯರಾಗಬಹುದು.

ಬದುಕಿನ ಸಾಮಾನ್ಯ ಸಂಗತಿಯಂತೆಯೇ ಸತ್ಯ-ಶಿವ-ಸೌಂದರ್ಯ ಶೋಧಿಸಲೆತ್ನಿಸುವ ಸಾಹಿತ್ಯದ ಗುರಿಯೂ ಸುಖದ ಹುಡುಕಾಟವೇ ಆಗಿದೆ. ಜಗತ್ತಿನ ಎಲ್ಲ ಕಲೆ, ಸಾಹಿತ್ಯ ಹಾಗೂ ಭಾಷೆಗಳೂ ಅನಿರ್ದಿಷ್ಟತೆಯಿಂದಲೇ ಆರಂಭವಾಗಿ ಅನಿರ್ದಿಷ್ಟತೆಯಿಂದಲೇ ಮುಕ್ತಾಯ ಕಾಣಬಹುದು. ಆದರೆ ಇದರ ಸ್ಥಿತಿ ಮತ್ತು ಅಭಿವ್ಯಕ್ತಿಯ ನಡುವೆ ಸಾವಯವ ಸಂಬಂಧವೇರ್ಪಟ್ಟರೂ ಭಿನ್ನತೆ ಇದ್ದೇ ಇರುತ್ತದೆ. ಸತ್ಯದ ಹುಡುಕಾಟದಲ್ಲಿಯೇ ಸಾಹಿತ್ಯ ಅಂತ್ಯ ಕಾಣುತ್ತದೆ; ಅಥವಾ ಅಂತಿಮ ಸತ್ಯ ಸಾಧ್ಯವೆ ? ಸಾವಿಗೆ ಎದುರಾಳಿಯಾಗಿ ಹೋರಾಡುವ ಕಲೆ-ಸಾಹಿತ್ಯ ಭ್ರಮೆ ಮತ್ತು ಈಡೇರದ ಕನಸುಗಳನ್ನು ಕಳೆದುಕೊಳ್ಳುತ್ತ ಸಾಗುವ ಸಾಹಿತಿ ಶುದ್ಧ ವಾಸ್ತವದ ಗುರಿ ತಲುಪಲಷ್ಟೇ ಯಶಸ್ವಿಯಾಗುತ್ತಾನೆ. ಭ್ರಮೆ, ಕನಸು, ವಾಸ್ತವತೆಗಳೆಲ್ಲ ಸತ್ಯದ ಎದುರು ಸಂಘರ್ಷಕ್ಕಿಳಿಯುತ್ತವೆ. ಡೆರಿಡಾನ ನಿರಚನಾವಾದವನ್ನು ಜೊತೆಯಲ್ಲಿ ಇಟ್ಟುಕೊಂಡೇ ಅಖಂಡ ಚಿಂತನೆ ಸಾಧ್ಯವಾದಾಗ ಮಾತ್ರವೇ ಅಪರಿಪೂರ್ಣತೆ ಮತ್ತು ಅನಿರ್ದಿಷ್ಟತೆಯ ಅರ್ಥ ಅರಿವಾಗುತ್ತಾ ಹೋಗುತ್ತದೆ; ಭವ ಮತ್ತು ಸಾಹಿತ್ಯದ ಸಂಕೀರ್ಣತೆ ತೆರೆದುಕೊಳ್ಳುತ್ತದೆ.

ಕಲೆ ಮತ್ತು ಸಾಹಿತ್ಯ ಅನುಕರಣಶೀಲವಾದುವು ಎಂದು ಪ್ಲೇಟೋ ನಂಬುತ್ತಾನೆ; ಪೂರ್ಣ ಅನುಕರಣವಲ್ಲವೆಂದು ಅರಿಸ್ಟಾಟಲ್ ಹೇಳುವ ಮೂಲಕ ಅನುಕರಣೆಗಿರಬಹುದಾದ ತೊಡಕುಗಳನ್ನು ಕಾಣಿಸುತ್ತಾನೆ. ಈ ನಡುವೆ ಕಲೆ ಹಾಗೂ ಸಾಹಿತ್ಯದ ನಡುವಿನ ಸೂಕ್ಷ್ಮ ವ್ಯತ್ಯಾಸಗಳನ್ನು ಪ್ಲೇಟೋ ತೀವ್ರವಾಗಿ ಪರಿಗಣಿಸುವುದಿಲ್ಲ. ಚಿತ್ರಕಲೆಯಲ್ಲಿನ ತೀವ್ರ ಅನುಕರಣಾಶೀಲತೆ ಸಾಹಿತ್ಯದಲ್ಲಿ ಸಾಧ್ಯವಾಗುವುದಿಲ್ಲ. ಇಲ್ಲಿ ಸಂವಹನದ ತೊಡಕುಗಳು ಅಧಿಕ.

ಸಾಹಿತ್ಯದಲ್ಲಿ ತತ್ವಜ್ಞಾನದ ಅನುಭಾವಿಕ ಜಿಜ್ಞಾಸೆಯ ನಂತರ ಮುಂದೆ ಆಧುನಿಕತೆಯ ಜಿಜ್ಞಾಸೆ ಆರಂಭವಾಯಿತು. ಧರ್ಮದೃಷ್ಟಿಯ ತತ್ವಜ್ಞಾನ ಬದಿಗೆ ಸರಿದು ಪರ್ಯಾಯವಾಗಿ ಆಧುನಿಕ ದೃಷ್ಟಿ ಸಾಧ್ಯವಾಯಿತು. ಜೆ. ಕೃಷ್ಣಮೂರ್ತಿಯವರಂಥ ಹೊಸ ಅರ್ಥಜ್ಞರು ಬಂದರು. ಸಾಹಿತಿಯ ಸುತ್ತಲಿನ ಬದುಕು ಹೆಚ್ಚು ಸಂಕೀರ್ಣವೂ ಜಟಿಲವೂ ಆಗುತ್ತಾ ಸಾಗಿದಂತೆ ಕಾವ್ಯ ಮೀಮಾಂಸೆ ಕೂಡ ಪರ್ಯಾಯ ಅರ್ಥ ಕಂಡುಕೊಳ್ಳುತ್ತಾ ಸಾಗಿತು. ''ಈ ಜಗತ್ತಿನಲ್ಲಿ ದೇವರು ದುಃಖ ಇಟ್ಟಿರುವುದೇ ಒಂದು ಹಾಡು ಕಟ್ಟಲಿ ಎಂದು'' ಎಂದು ಹೇಳುವ ಹೋಮರ್‌ನ ಅತಿ ಪ್ರಾಚೀನ ಅಭಿಮತಕ್ಕೆ ಪೂರಕವಾಗಿಯೇ.

ಜಗತ್ತು ಯಾಕಿದೆಯೆಂದರೆ ''ನಾವೆಲ್ಲ ಒಂದು ಪುಸ್ತಕ ಸೃಷ್ಟಿಸಲಿ'' ಎಂದು ಆಧುನಿಕವಾದ ಮಲಾರ್ಮೆ ಹೇಳಿದ. ''ಕಲ್ಪನೆ ಮನುಷ್ಯ ದೈವಿಕ ಶಕ್ತಿ'' ಎಂದು ಬ್ಲೇಕ್ ನಂಬಿದರೆ ''ತಾನಿರುವ ಕಾಲವೇ ಕಾವ್ಯವನ್ನು ಕೊಲ್ಲುತ್ತಿರುವ ಕಾಲದಲ್ಲಿ '' ಎಂದು ವರ್ಡ್ಸ್‌ವರ್ತ್ ಆತಂಕ ವ್ಯಕ್ತಪಡಿಸಿದ. ಬದುಕು, ಸಾಹಿತ್ಯ , ಸಂದರ್ಭಗಳನ್ನು ಕುರಿತು ತಮ್ಮದೇ ಆದ ನುಡಿಗಟ್ಟುಗಳನ್ನು ಸೃಷ್ಟಿಸಿದ ಇಂಥವರು ''ಮೀಮಾಂಸೆ ಸಾಹಿತ್ಯ ಸೃಷ್ಟಿಸಲಾರದು ; ಯುಗಪ್ರವರ್ತಕ ಸಾಹಿತಿ ಮೀಮಾಂಸೆ ಸೃಷ್ಟಿಸಬಲ್ಲ'', ಎಂಬುದಕ್ಕೆ ಸಾಕ್ಷಿಯಾದರು. ಪರ್ಯಾಯ ಪದ ಬಳಕೆ ಕುರಿತು ಹೇಳುವಾಗ ನಿಘಂಟು ಶಾಸ್ತ್ರವನ್ನು ಆಶ್ರಯಿಸಿದಂತೆ ಕಾಣುವ ಡೆರಿಡಾನ ನಿಲುವನ್ನು ಅನುಮಾನಿಸುವಂತೆಯೇ ಭಾಷೆ,

ಭಾವ, ಸಾಹಿತ್ಯಗಳಿಗಿರುವ ಕ್ಲಿಷ್ಟಕರ ಒಪ್ಪಂದಗಳನ್ನು ಮನಗಾಣಬೇಕಾಗುತ್ತದೆ.

''ಧರ್ಮವನ್ನಾಗಲಿ ಒಂದು ಕೃತಿಯನ್ನಾಗಲಿ ಓದುಗ ಸಮೂಹ ಒಂದು ಪೂರ್ವ ನಿಯೋಜಿತ ಪ್ರಜ್ಞೆಯೊಳಗೆ ಅರ್ಥೈಸಿಕೊಳ್ಳುವುದು ಸಾಧ್ಯವಾಗುತ್ತಿರುವ ಈ ಸಂದರ್ಭದಲ್ಲಿ ಡೆರಿಡಾ ನಿಲುವು ಓದುಗ ಕೇಂದ್ರಿತವಾಗಿದೆ. ರಚನಾವಾದದಂತೆ ಕಮ್ಯುನಿಸಂಅನ್ನು ಕೂಡ ವಿರೋಧಿಸುವ ಡೆರಿಡಾ ಬಂಡವಾಳಶಾಹಿ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ಪ್ರತಿಪಾದಿಸುವ ಮೂಲಕ ಸಾಹಿತ್ಯವಾದವನ್ನು ಕೂಡ ಅದೇ ಕಣ್ಣಿಂದ ನೋಡುವ ಮೂಲಕ ನಿರಚನ ಪ್ರತಿಪಾದಿಸಲ್ಪಟ್ಟಿದೆ'' ಎಂದು ಶರ್ಮಾ ಅಭಿಪ್ರಾಯ ಪಡುತ್ತಾರೆ. ''ನಿರಚನವು ನವ್ಯ ವಿಮರ್ಶೆಯ ಮುಂದುವರಿದ ಭಾಗದಂತಿದೆ; ಅನಿಶ್ಚಿತವಾಗಿದೆ ; ಪಠ್ಯವನ್ನು ಅಚಾರಿತ್ರಿಕ ವಿಧಾನದಲ್ಲಿ ಓದಬಯಸುತ್ತದೆ. ಈ ಇಡೀ ವಾದ ಬುದ್ಧಿವಂತಿಕೆಯ ಆಟದಂತಿದೆ. ಅಧಿಕಾರಶಾಹಿ ಬಗೆಗೆ ಕುರುಡಾಗಿದೆ.'' ಇಂತಹ ಆರೋಪಗಳನ್ನು ಶರ್ಮಾ ಮಾಡುತ್ತಾರೆ.

ಆಧ್ಯಾತ್ಮವಾಗಲಿ, ಧಾರ್ಮಿಕತೆಯಾಗಲಿ ಅರಾಜಕ, ಆಧುನಿಕ ಸ್ಥಿತಿ ತಲುಪಿರುವ ಸಂದರ್ಭವೊಂದರಲ್ಲಿ ಬೌದ್ಧಿಕ ನಿಲುವುಗಳು ಅದರ ನೆರಳಾಗಿರುವುದು ಸಾಧ್ಯವಿದೆ. ಎಲ್ಲ ರೀತಿಯ ವಿರೋಧಾಭಾಸಗಳ ಅಂತಿಮ ಕಲಾಕೃತಿಯಂತಿರುವ ಈ ಶತಮಾನದಲ್ಲಿ ನಿರಚನವನ್ನು ಅದರ ಸಮಸ್ಯೆ ಮತ್ತು ಗುಣಗಳ ಮೂಲಕ ಚರ್ಚಿಸುವುದು ಅಗತ್ಯವಾಗಿದೆ. ಸಾಹಿತ್ಯ ಎಷ್ಟೇ ಪರಿಶುದ್ಧ, ಅವಧೂತ ಸ್ಥಿತಿಯಲ್ಲಿದ್ದುಕೊಂಡು ಕೊನೆಯ ಸತ್ಯವನ್ನು ದಾಖಲಿಸುತ್ತದೆ ಎಂದರೂ ಅದರೊಳಗೊಂದು ಅಮೂರ್ತವಾದ ಅತೃಪ್ತಿ, ನಿರಾಶೆಯ ಛಾಯೆ ಇದ್ದೇ ಇರುತ್ತದೆ. ವ್ಯಾಸ, ವಾಲ್ಮೀಕಿ, ಹೋಮರ್, ಟಾಲ್‌ಸ್ಟಾಯ್ ತರಹದವರು ಬಂದುಹೋದರು. ಇಂದು ಕೂಡ ಜನ ಸಾಹಿತ್ಯ ಬರೆಯುತ್ತಾರೆ. ಸಾಹಿತ್ಯದ ಬಗೆಗೆ ಮಾತನಾಡುವುದೆಂದರೆ ಯಾರ - ಎಂಥ ಸಾಹಿತ್ಯ ಎಂಬ ಜಿಜ್ಞಾಸೆ ಇದ್ದೇ ಇರುತ್ತದೆ. ಸಾಹಿತ್ಯ ಹೊಸ ವೈರುಧ್ಯಗಳನ್ನು ಎದುರಿಸುವಾಗ ಡೆರಿಡಾ ವಾದವನ್ನು ತಳ್ಳಿಹಾಕುವುದು ಹೇಗೆ ?

ಶ್ರೀಪ್ರಕಾಶ್‌ಚಂದ್ರ ಹೆಚ್. ಆರ್.
ಕನ್ನಡ ಉಪನ್ಯಾಸಕರು, ಚಿನ್ಮೂಲಾದ್ರಿ ಪದವಿ ಪೂರ್ವ ಕಾಲೇಜು
ಚಿತ್ರದುರ್ಗ

# ಅಮ್ಮ



ಬೆಳ್ಳಿ ಮೂಡುವ ಮೊದಲೇ ಮುಂಬಾಗಿಲ ಬಳಿ ಬಂದು ನಿಲ್ಲುವಳು
ಚಿಲಿಪಿಲಿಯ ಗುಬ್ಬಚ್ಚಿ, ಮೈನಾ,
ಬೆನ್ನ ಮೇಲಿನ ಗೆರೆಯ ಅಳಿಲಣ್ಣ, ಕಾಗಕ್ಕಂದಿರು
ಬೆಳಗಿನ ಉಪಾಹಾರಕ್ಕೆ ಸಾಲುಗಟ್ಟಿ ಕಾಯುವರು.
ದಾರಿಹೋಕ ದನಕರುಗಳು
ಹಸಿವು ಹಿಂಗಿಸಿಕೊಳ್ಳಲು
ಏದುಸಿರು ಬಿಡುತ್ತ ಓಡೋಡಿ ಬಂದು –
ಹಿತ್ತಲಲ್ಲಿ ಚೆಂಡು ಪಿಳ್ಳೆಗಳು
ತಲೆಯ ಮೇಲೆ ಬಿದ್ದು ತುಂಟಾಟವಾಡಲು
ತೆಂಗಿನ ಗರಿಗಳು ಎದೆಗೆ ಹೊಡೆಯಲು
ಕಾಯಿನೀರು ಸಿಗುವುದೆಂದು
ಬಾಯಿಬಿಟ್ಟು ನಿಲ್ಲುವವು.
ಕೆರೆಯ ಬುಡದಲ್ಲಿ ನೆನೆಸಿಟ್ಟ
ಅಡಿಹಿಡಿದ ಅನ್ನದ ಮಡಕೆಯ
ತಳದಲ್ಲಿ ಅಂಟಿಕೊಂಡಿದ್ದ ಅನ್ನದಗುಳಿಗಾಗಿ
ಆಸೆ ಪಟ್ಟ ಕೆರೆಮೀನು
ಕೇಳುತ್ತಿದೆ 'ಅಮ್ಮ ಎಲ್ಲಿ ?'
ಕಡು ದುಃಖದ ಕಹಿ ನುಂಗಿ
ಸವಿ ಜೇನ ತಿನ್ನಿಸಿದವಳು
ಬುದ್ಧಿ ಬೆಳೆಯಲೆಂಬ ಮಹದಾಸೆಯಿಂದ
ಬಂಗಾರ ಲೇಪ ಬಾಯೊಳಗಿಟ್ಟು
ಹರಸಿದವಳು.
ನಡೆನಡೆದು ಬಳಲಿ ನಾನು
ಮನೆ ತಲುಪುತಿರುವಂತೆ
ನೀಲಾಕಾಶದ ಕಣ್ಣು ಕೆಂಪು ಉಂಡೆಯಾಗಿ
ಮಂಕಾಗಿ ಮರೆಯಾದಾಗ
ಆ ನೇತ್ರದ್ವಯಗಳ ಕಾಂತಿ ನನಗೆ ದಾರಿದೀಪ.
ದುಃಖ ಸಾಗರವ ಒಳಗಿಟ್ಟುಕೊಂಡು
ಮುಂಬಾಗಿಲು ಮರಗುತ್ತ ತೆರೆದುಕೊಳ್ಳಲು
ಎರಡೂ ತೋಳುಗಳ ಚಾಚಿ ನನ್ನ
ಬಾಚಿ ತಬ್ಬಿ ಹಿಡಿದುಕೊಂಡು
ಕರುಳು ಚುರುಗುಟ್ಟಿಸುವ
ಅಮ್ಮನ ಪ್ರಶ್ನೆ
ಬಂದೆಯಾ ಕಂದಾ ?
ಏಕಿಷ್ಟು ತಡ ?
ನನ್ನ ಅಮ್ಮ...
ಏರದಿರುವ ಗುಡ್ಡದ ಎತ್ತರವ ತಿಳಿದವಳು
ಕಾಣದ ಕಡಲಿನ ಆಳವನ್ನು ಅರಿತವಳು.
ಉರಿಯುತ್ತಿದೆ ನನ್ನೊಡಲಾಳದ ಬೇಗುದಿ
ಸ್ಮಶಾನದ ಆರದ ಬೆಂಕಿಯಾಗಿದೆ
ಸಾವಿರ ಜನ್ಮವೆತ್ತಿದರೂ ತೀರಿಸಲಾಗದ ಸಾಲ.
ಕೈ ಮುಗಿದು ಬೇಡುವುದೊಂದೇ
ಹರಸಿ ವರವ ನೀಡು – ನನ್ನಮ್ಮ
ನವಿರಾದ ಮಣ್ಣಾಗಿ, ಕಡುನೀಲ ಬಾನಾಗಿ
ಅಲೆಅಲೆಯ ಕಡಲಾಗಿ, ತಣ್ಣಗಿನ ಗಾಳಿಯಾಗಿ
ಹೊಳೆಹೊಳೆವ ಬೆಳಕಾಗಿ,
ನನ್ನೊಳಗೆ ಮೊಳೆಯಲಿ
ಉಸಿರಲ್ಲಿ ಬೆರೆಯಲಿ.

ಮಲಯಾಳಂ : ರಾಧಾಮಣಿ ಅಯಂಗಲತ್ತ್
ಕನ್ನಡಕ್ಕೆ : ಪಾರ್ವತಿ ಜಿ. ಐತಾಳ್
ಸುರಗಂಗಾ, ಬಸ್ರೂರು ಕ್ರಾಸ್ ರಸ್ತೆ, ಕುಂದಾಪುರ - ೫೭೬೨೦೧

# ರೋಣದ ಶಾಸನ ರಾಷ್ಟ್ರಕೂಟರ ಮೇಲೆ ಹೊಸ ಬೆಳಕು

ರೋಣದ ಜನರ ಬಗ್ಗೆ ಕ್ರಿ.ಶ.೧೦೨೨ರ ಶಾಸನವೊಂದರಲ್ಲಿ ಅಲ್ಲಿದ್ದ ಮಾಚಿಮಯ್ಯ ಎಂಬುವನ ಸಜ್ಜನಿಕೆ, ಭಕ್ತಿ ಬಗ್ಗೆ, ಅವನ ದಾನಗುಣದ ಬಗ್ಗೆ "ಭೂಮಿಯೊಳ್ ಸಚ್ಚಾರಿತ್ರವಂತ" ಎಂದು ಹೊಗಳುತ್ತದೆ. ಹೀಗೆ ಒಂದೆಡೆ ಪ್ರತಿಭಟನೆಯ ಮನೋಭಾವದ ಧೀಮಂತರಿದ್ದರೆ, ಮತ್ತೊಂದೆಡೆಯಲ್ಲಿ ಚರಿತ್ರಾರ್ಹರಾದ ವ್ಯಕ್ತಿಗಳು ರೋಣದಲ್ಲಿದ್ದರೆಂದು ಈ ಎಲ್ಲ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಆದರೆ ಇಲ್ಲಿರುವ ಅನೇಕ ಶಾಸನಗಳು ದುಃಸ್ಥಿತಿಯಲ್ಲಿವೆ. ಇವುಗಳ ಚಾರಿತ್ರಿಕ ಮಹತ್ವವನ್ನು ಜನರು ಅರಿತು ಅವುಗಳ ಸಂರಕ್ಷಣೆಗೆ ಎಂದಿಗಿಂತ ಇಂದು ಮುಂದಾಗುವುದು ಅವಶ್ಯಕವಾಗಿದೆ.

**ಡಾ॥ ಮಲ್ಲಿಕಾರ್ಜುನ ಕುಂಬಾರ**

ಅಂದಿನ ಧಾರವಾಡ ಜಿಲ್ಲೆಯು ಉತ್ತರ ಕರ್ನಾಟಕದ ಪ್ರತಿಷ್ಠಿತ ಭಾಗವಾಗಿ ಬೆಳ್ವೊಲ-೩೦೦ರನ್ನು ತನ್ನ ಒಡಲಿನಲ್ಲಿಟ್ಟುಕೊಂಡ ಇಂದಿನ ಗದಗ ಜಿಲ್ಲೆಯ ರೋಣ ನಗರವು ಐತಿಹಾಸಿಕ ಮಹತ್ವ ಪಡೆದಿದೆ. ಅಗ್ರಹಾರ ಸಂಸ್ಕೃತಿಯ ಪರಂಪರೆ ಇರುವ ಈ ನಗರವು ಅನೇಕ ಅರಸರಿಂದ ಆಳಿಸಿಕೊಂಡಿದೆ. ಇಲ್ಲಿ ಒಟ್ಟು ೧೫ ಶಾಸನಗಳು ದೊರೆತಿವೆ. ಇವುಗಳಲ್ಲಿ ೫ ರಾಷ್ಟ್ರಕೂಟ ಅರಸರಿಗೆ, ೮ ಕಲ್ಯಾಣ ಚಾಲುಕ್ಯರಿಗೆ ಉಳಿದ ೨ ಶಾಸನಗಳು ವಿಜಯನಗರ ಅರಸರ ಕಾಲಕ್ಕೆ ಸೇರಿವೆ. ಈ ನಗರಕ್ಕೆ ರೋಣ ಎಂಬ ಹೆಸರು ಬರಲು ಕಾರಣಗಳನ್ನು ವಿದ್ವಾಂಸರು ಹಲವಾರು ರೀತಿಯಲ್ಲಿ ಚರ್ಚಿಸಿದ್ದಾರೆ. ಕೆಲವರು ಮಹಾಭಾರತದ ದ್ರೋಣಾಚಾರ್ಯರಿಂದ ಈ ಹೆಸರು ಬಂದಿದೆ ಎಂದು ಹೇಳಿ, ಅದಕ್ಕೆ ಆಧಾರವಾಗಿ ಇಲ್ಲಿರುವ ಮೂರ್ತಿಯೊಂದು ದ್ರೋಣಾಚಾರ್ಯರದೆಂದು ಹೇಳುತ್ತಾರೆ. ಕೆಲವರು ಇದು ದ್ರೋಣಾಚಾರ್ಯರ ಮೂರ್ತಿ ಅಲ್ಲ, ಅದು ಯೋಗೀಶ್ವರನ ಮೂರ್ತಿ ಎನ್ನುತ್ತಾರೆ. ಈ ಪ್ರದೇಶದ ಭೂ ಗರ್ಭವು ರೋಣಗಲ್ಲುಗಳಿಂದ ಕೂಡಿದ್ದರಿಂದ ರೋಣ ಎಂದು ಹೆಸರು ಬಂತೆಂದು ಇತಿಹಾಸಕಾರರಾದ ದಿ। ಡಾ॥ ಎಚ್. ಆರ್. ರಘುನಾಥ ಭಟ್ಟರ ಅಭಿಪ್ರಾಯ. ಅಗ್ರಹಾರ ಸಂಸ್ಕೃತಿಯನ್ನು ತುಳಿಯಲು ಯತ್ನಿಸಿದಾಗ ಇಲ್ಲಿನ ಜನರು ಸಿಡಿದೇಳುತ್ತಿದ್ದರು. ಸಾಧುಗೆ ಸಾಧು, ಮಾಧುರ್ಯಂಗೆ ಮಾಧುರ್ಯಂ ಎಂಬ ರೀತಿಯಲ್ಲಿ ಇಲ್ಲಿನ ಜನರು ಹೂವಿನಂತೆ ಮೃದುವಾಗಿದ್ದರೂ ಕೆಲವು ಸಲ ವಜ್ರದಂತೆ ಕಠಿಣರಾಗುತ್ತಿದ್ದರು.

ಸುಮಾರು ೭ನೇ ಶತಮಾನದ ಬಾದಾಮಿ ಶಾಸನದಲ್ಲಿ ಇಲ್ಲೊಂದು ಶಿವದೇವಾಲಯವಿದ್ದ ಉಲ್ಲೇಖವಿದೆ. ಮುಂದೆ ಬರುವ ರಾಷ್ಟ್ರಕೂಟ ಅರಸರ ಕಾಲಕ್ಕೆ ರೋಣದ ಮಹಾಜನರು ಅಗ್ರಹಾರ ಸಂಸ್ಕೃತಿಯನ್ನು ಅಭಿವೃದ್ಧಿ ಪಡಿಸುತ್ತಾ ಪ್ರಭಾವಶಾಲಿಗಳಾದರು. ಈ ಅಗ್ರಹಾರದಲ್ಲಿ ಕ್ರಿ.ಶ. ೭೭೧ರಲ್ಲಿ ೮೪ ಮಹಾಜನರಿದ್ದ ಅಗ್ರಹಾರವು ಕ್ರಿ.ಶ. ೯೭೬ರಲ್ಲಿ ೧೦೪



ರಾಚುಗಿ ವರ್ಮನ ವೀರಗಲ್ಲು

ಮಹಾಜನರನ್ನು ಹೊಂದಿತ್ತು. ಕ್ರಿ.ಶ. ೧೧೧೧ರ ಹೊತ್ತಿಗೆ ಇದು ತರ್ಕ ಶಾಸ್ತ್ರ ಪರಿಣತರಿಂದ ಖ್ಯಾತಿಪಡೆದರೆ ಹೈಂಗಕುಲದ ನಾಗವಿಷ್ಣುಮಯ್ಯನು ರೋಣದಲ್ಲಿ ವ್ಯಾಖ್ಯಾನ ಶಾಲೆ ಕಟ್ಟಿಸಿ ಅದಕ್ಕೆ ಭೂದಾನ ನೀಡಿದ್ದು ಉಲ್ಲೇಖಾರ್ಹವಾಗಿದೆ.

ಇಲ್ಲಿನ ಶಾಸನವೊಂದರಲ್ಲಿ ಕ್ರಿ.ಶ. ೯೪೨ರ ರಾಷ್ಟ್ರಕೂಟರ ಅರಸ ಮುಮ್ಮಡಿ ಕೃಷ್ಣನ ಭಾವ ಗಂಗ ಬೂತುಗನು ರೋಣ ಅಗ್ರಹಾರದ ಮೇಲೆ ದಾಳಿಮಾಡುತ್ತಾನೆ. ಆದರೆ ರೋಣದ ಕೌಂಡಿನ್ಯ ಗೋತ್ರದ ಜೈನ ಬ್ರಾಹ್ಮಣನಾದ ಪಂಪಯ್ಯ ಎಂಬುವನು "ನಾನೊಂದು ಅಕ್ಷತೆಯನಪ್ಪಂದ ಮೀಯೆನೆಂದು" ನಿರ್ಧರಿಸಿ ಹೋರಾಡಿ ವೀರ ಮರಣವನ್ನುಪ್ಪುತ್ತಾನೆ. (ಈ ಬಗೆಗಿನ ಶಾಸನವುಳ್ಳ ವೀರಗಲ್ಲು ರೋಣದ ತಹಶೀಲ್ದಾರರ ಕಛೇರಿ ಎದುರಿಗಿದೆ.) ರೋಣದ ಪ್ರಾಚೀನರಲ್ಲಿ ರೊಚ್ಚು ತುಂಬಿತ್ತು. ಅವರು ತಾವು ಅಳಿದರೂ ಅಗ್ರಹಾರವನ್ನು ಉಳಿಸಲು ಬಹಳಷ್ಟು ಪ್ರಯತ್ನಿಸುತ್ತಿದ್ದರು. ಅದಕ್ಕಾಗಿ ರಕ್ತ ಹರಿಸಿದರು. ಪಂಪಯ್ಯ ಮಡಿದ ನಂತರ ಈ ಪ್ರತಿಭಟನೆ ಅಷ್ಟಕ್ಕೆ ನಿಲ್ಲದೇ ಅದು ಫೀನಿಕ್ಸ್ ಹಕ್ಕಿಯಂತೆ ಪುನರ್ಜನ್ಮ ತಾಳುತ್ತದೆ. ಪಂಪಯ್ಯನಂತೆ ಮತ್ತೊಬ್ಬ ವೀರನು ಅದೇ ಹಾದಿ ತುಳಿದು ವೀರಮರಣ ಹೊಂದುತ್ತಾನೆ. ಈ ಬಗೆಗಿನ ಅಪೂರ್ವ ಶಾಸನ ಶಿಲ್ಪವೊಂದು ರೋಣದ ಹಾಲಣ್ಣವರ ಮನೆ ಹತ್ತಿರದ ಶಿವದೇವಾಲಯವೊಂದರ ಎದುರು ಇದ್ದು (ಅದು ಪಕ್ಕದ ಮನೆಯವರು ಅಡಿಪಾಯ ತೋಡುವಾಗ ದೊರೆತ ಅಮೂಲ್ಯ ಶಾಸನ ಶಿಲ್ಪವಾಗಿದೆ) ಕರಿಕಲ್ಲಿನಲ್ಲಿ ಕೆತ್ತಿದ ತುಂಬಾ ಕಲಾತ್ಮಕವಾದ ಈ ಶಿಲ್ಪ ಮೂರು ಹಂತದಲ್ಲಿದ್ದು ಈ ವೀರಗಲ್ಲಿನ ತಳಭಾಗ ನಾಶವಾಗಿಹೋಗಿದೆ. ವೀರನ ಮರಣ ಸ್ಪಷ್ಟವಾಗಿದ್ದು ಕೆತ್ತನೆ ತುಂಬಾ ಕುಸುರಿನಿಂದ ಕೂಡಿದೆ. ೬೨ ಸಾಲಿನ ಈ ಶಾಸನವು ಬಹಳಷ್ಟು ತ್ರುಟಿತವಾಗಿದೆ. ಇದು ರೋಣದ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ.

ಪಂಪಯ್ಯನು ವೀರಮರಣವನ್ನಪ್ಪಿದ ೩೪ ವರ್ಷಗಳ ನಂತರ ರಾಚುಗಿ ವರ್ಮಯ್ಯನೆಂಬವನು ಕೂಡ ಅದೇ ದಾರಿಯಲ್ಲಿ ಅರಸನೊಂದಿಗೆ ಹೋರಾಡಿ ವೀರಮರಣವನ್ನುಪ್ಪುತ್ತಾನೆ. ಇದು ವೀರಶಿಲ್ಪದಲ್ಲಿನ ಶಾಸನದ ಸಾರ. ಆದರೆ ಈ ಶಾಸನಕ್ಕೆ ಇತರ ಶಾಸನಕ್ಕಿಂತ ಬಹಳಷ್ಟು ಐತಿಹಾಸಿಕ ಮಹತ್ವವಿದೆ. ಪಂಪಯ್ಯ ಸೋಮಯಾಜಿಯ ಮಗನಾದ ರಾಚುಗಿ ವರ್ಮಯ್ಯನೆಂಬುವನು ರಾಷ್ಟ್ರಕೂಟ ಅರಸರ ಡಂಬಾಚಾರದ ವರ್ತನೆಯಿಂದ ಬೇಸತ್ತು ಅವರೊಂದಿಗೆ ಅಗ್ರಹಾರದ ಉಳಿವಿಗಾಗಿ ಹೋರಾಡಿ ಮಡಿಯುತ್ತಾನೆ. ಈ ಶಾಸನವು ಶೈವ ಪರವಾದ ಶಾಸನವಾಗಿದ್ದು ಈ ಅಗ್ರಹಾರದಲ್ಲಿದ್ದ ೧೪೦ ಜನ ಶೈವ ಬ್ರಾಹ್ಮಣರಿಗೆ ರಾಷ್ಟ್ರಕೂಟ ಅರಸ ಖೊಟ್ಟಿಗನ ಮಗನಾದ ಕನ್ನರನು ಕರೆದು ಸಹಾಯ ಮಾಡುತ್ತಾನೆ, ಬುದ್ಧಿ ಹೇಳುತ್ತಾನೆ. ಆಗ ರೋಣದ ಕಾಶ್ಯಪ ಗೋತ್ರದ ಬಳಗವಟ್ಟ ವಂಶದ ಪಂಪಯ್ಯ ಸೋಮಯಾಜಿಯ

ಮಗನಾದ ರಾಚುಗಿ ವರ್ಮಯ್ಯನು ದೇವಾಲಯ, ಕೆರೆ ನಿರ್ಮಾಣದಲ್ಲಿ ದಾನ ದತ್ತಿಗಳನ್ನು ನೀಡುವಲ್ಲಿ ನಿರತನಾದ ಧರ್ಮವಂತನಾಗಿದ್ದನು. ಇವನಿಗೆ ಕನ್ನರ ದೇವನ ವರ್ತನೆಯು ಮೋಸದ್ದು ಮತ್ತು ಡಂಬಾಚಾರದ್ದೆಂದು, ಈ ಅಗ್ರಹಾರದ ಮೇಲೆ ಅಪ್ರತ್ಯಕ್ಷವಾದ ದಾಳಿ ಎಂದು ತಿಳಿದು ಅರಸನನ್ನು ಪ್ರತಿಭಟಿಸಿ ಮಡಿಯುತ್ತಾನೆ. ಇದು ನಡೆದದ್ದು ಕ್ರಿ.ಶ.೯೭೭ರ ಈಶ್ವರ ನಾಮ ಸಂವತ್ಸರದ ಭಾದ್ರಪದ ಶುದ್ಧ ನವಮಿಯ ಆದಿತ್ಯವಾರದ ದಿನ ಎಂದು ಶಾಸನದಲ್ಲಿ ಉಲ್ಲೇಖಿತವಾಗಿದೆ. ಬಹಳಷ್ಟು ತ್ರುಟಿತವಾದ ಈ ಶಾಸನದ ಕೊನೆಯಲ್ಲಿ ''ಸಸಿನ (ಚನ್ನಾಗಿ) ಬರದಪಂ'' ಎಂದು ಇರುವುದರಿಂದ ಈ ಶಾಸನವನ್ನು ಯಾರೋ ಬರೆದಿರಬೇಕು. ಈ ಶಾಸನ ಶೋಧಿಸಿದ ವಿದ್ವಾಂಸರಾದ ದಿ| ಡಾ|| ಎಚ್. ಆರ್. ರಘುನಾಥ ಭಟ್ಟರು ಕ್ರಿ.ಶ. ೯೪೨ರಲ್ಲಿನ ಮಡಿದ ಪಂಪಯ್ಯನೇ ಈಗಿನ ಈ ಶಾಸನೋಕ್ತನಾದ ಪಂಪಯ್ಯನ ಮಗ ರಾಚುಗಿ ವರ್ಮಯ್ಯ ಎಂದು ಅಭಿಪ್ರಾಯಪಡುತ್ತಾರೆ. ಆದರೆ ಕ್ರಿ.ಶ. ೯೪೨ರ ಶಾಸನೋಕ್ತ ಪಂಪಯ್ಯನು ಕೌಂಡಿನ್ಯ ಗೋತ್ರದ ವಾಜಿಕುಲದ ಜೈನ ಬ್ರಾಹ್ಮಣನಾಗಿದ್ದಾನೆ. ಆದರೆ ಈಗ ದೊರೆತ ಶಾಸನೋಕ್ತ (ಕ್ರಿ.ಶ. ೯೭೭)ನಾದ ಪಂಪಯ್ಯ ಸೋಮಯಾಜಿಯು ಕಾಶ್ಯಪ ಗೋತ್ರದಲ್ಲಿ ಪ್ರಸಿದ್ಧನಾದ 'ಬಳಗವಟ್ಟ' ವಂಶದವನು; ಅಲ್ಲದೆ ಈತನು ಶೈವ ಬ್ರಾಹ್ಮಣನಾಗಿದ್ದಾನೆ. ಇದರಿಂದ ಇಲ್ಲಿನ ಪಂಪಯ್ಯ ಮತ್ತು ಈ ಶಾಸನದಲ್ಲಿರುವ ಪಂಪಯ್ಯ ಸೋಮಯಾಜಿ ಭಿನ್ನರಾಗಿದ್ದಾರೆ. ಈ ಇಬ್ಬರೂ ಒಬ್ಬರೇ ಆಗಿದ್ದರೆ ಕ್ರಿ.ಶ. ೯೭೭ರ ಶಾಸನದಲ್ಲಿ ಅಂದು ಮಡಿದ ಪಂಪಯ್ಯನ ಬಗ್ಗೆ ಶಾಸನಕಾರರು ಉಲ್ಲೇಖಿಸದೇ ಇರುತ್ತಿರಲಿಲ್ಲ. ಆ ಪಂಪಯ್ಯನ ಬಗ್ಗೆ ಈ ಶಾಸನದಲ್ಲಿ ಸ್ವಲ್ಪವಾದರೂ ಸುಳಿವು ಸಿಗುತ್ತಿಲ್ಲ. ಹೀಗಾಗಿ ಈ ಇಬ್ಬರೂ ಬೇರೆ ಬೇರೆ ಆಗಿದ್ದಾರೆ. ರಾಷ್ಟ್ರಕೂಟ ಅರಸರ ಹಾಗೂ ಅವರ ಅಧಿಕಾರಿಗಳ ದೌರ್ಜನ್ಯವನ್ನು ಸಾಮಾನ್ಯರಾದ ಅಗ್ರಹಾರದವರು ಪ್ರತಿಭಟಿಸಿ ಸಿಡಿದ ನಿದರ್ಶನಗಳು ಇತಿಹಾಸದ ತುಂಬಾ ವಿರಳವಾದರೂ ರೋಣದ ಜನರ ಈ ರೊಚ್ಚು ಮಾತ್ರ ನಮ್ಮ ಗಮನ ಸೆಳೆಯುತ್ತದೆ.

ರಾಷ್ಟ್ರಕೂಟ ಅರಸರ ಖೊಟ್ಟಿಗನ ಮಗನಾದ ಕನ್ನರನ ಬಗ್ಗೆ ಹೇಳುವ ಶಾಸನಗಳು ಬಹಳ ವಿರಳ. ಆದ್ದರಿಂದ ಈ ಶಾಸನವು ಬಹಳಷ್ಟು ಐತಿಹಾಸಿಕ ಮಹತ್ವವನ್ನು ಪಡೆದಿದೆ. ರಾಷ್ಟ್ರಕೂಟರು ಸೋತು ಇಮ್ಮಡಿ ತೈಲನು ಬಂಕಾಪೂರಕ್ಕೆ ಬಂದಾಗ ಅಲ್ಲಿದ್ದ ಅಜಿತ ಸೇನಮುನಿಗಳು ಶ್ರವಣ ಬೆಳಗೊಳಕ್ಕೆ ಹೋಗು, ಅಲ್ಲಿ ಇನ್ನೂ ಜೈನ ಧರ್ಮಾವಲಂಬಿಗಳಾದ ಗಂಗರಿದ್ದಾರೆ ಎಂದು ಹೇಳಿ ಕಳಿಸಿದರು. ಈ ಹಿನ್ನೆಲೆಯಲ್ಲಿ ರಾಷ್ಟ್ರಕೂಟರ ಆಳ್ವಿಕೆ ಕ್ರಿ.ಶ. ೯೭೨-೭೪ರಲ್ಲಿ ಮುಕ್ತಾಯವಾಗುತ್ತದೆ. ಆದರೆ ಈ ಶಾಸನವು ಕನ್ನರ ದೇವನು ಕ್ರಿ.ಶ. ೯೭೭ರಲ್ಲಿದ್ದ ಬಗ್ಗೆ ಹೇಳುವುದರಿಂದ ರಾಷ್ಟ್ರಕೂಟರ ಆಳ್ವಿಕೆ ಕ್ರಿ.ಶ. ೯೭೪ಕ್ಕೇ ಮುಗಿಯಲಿಲ್ಲ, ಅದು ಮುಂದುವರೆದು ಅವರು ಕ್ರಿ.ಶ. ೯೭೭ರವರೆಗೆ ಇದ್ದ ಬಗ್ಗೆ ಈ ಶಾಸನವು ಬೆಳಕು ಚೆಲ್ಲುತ್ತದೆ. ಇದರಿಂದ ಇದು ಬಹಳಷ್ಟು ಮಹತ್ವಪೂರ್ಣವಾಗಿದೆ; ಅಲ್ಲದೆ ರಾಷ್ಟ್ರಕೂಟ ಅರಸರ ಆಳ್ವಿಕೆಯ ಮೇಲೆ ಬೆಳಕನ್ನು ಚೆಲ್ಲುತ್ತದೆ.

ಇನ್ನೊಂದೆಡೆ ರೋಣದ ಜನರ ಬಗ್ಗೆ ಕ್ರಿ.ಶ. ೧೦೨೨ರ ಶಾಸನವೊಂದರಲ್ಲಿ ಅಲ್ಲಿದ್ದ ಮಾಚಿಮಯ್ಯ ಎಂಬುವನ ಸಜ್ಜನಿಕೆ, ಭಕ್ತಿ ಬಗ್ಗೆ, ಅವನ ದಾನಗುಣದ ಬಗ್ಗೆ ''ಭೂಮಿಯೊಳ್ ಸಚ್ಚಾರಿತ್ರವಂತ'' ಎಂದು ಹೊಗಳುತ್ತದೆ. ಹೀಗೆ ಒಂದೆಡೆ ಪ್ರತಿಭಟನೆಯ ಮನೋಭಾವದ ಧೀಮಂತರಿದ್ದರೆ, ಮತ್ತೊಂದೆಡೆಯಲ್ಲಿ ಚರಿತ್ರಾರ್ಹರಾದ ವ್ಯಕ್ತಿಗಳು ರೋಣದಲ್ಲಿದ್ದರೆಂದು ಈ ಎಲ್ಲ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಆದರೆ ಇಲ್ಲಿರುವ ಅನೇಕ ಶಾಸನಗಳು ದುಃಸ್ಥಿತಿಯಲ್ಲಿವೆ. ಇವುಗಳ ಚಾರಿತ್ರಿಕ ಮಹತ್ವವನ್ನು ಜನರು ಅರಿತು ಅವುಗಳ ಸಂರಕ್ಷಣೆಗೆ ಎಂದಿಗಿಂತ ಇಂದು ಮುಂದಾಗುವುದು ಅವಶ್ಯಕವಾಗಿದೆ.

ಡಾ|| ಮಲ್ಲಿಕಾರ್ಜುನ ಕುಂಬಾರ
'ವಚನ', ರಾಜೂರ - ೫೮೨ ೨೩೦, ರೋಣ ತಾಲ್ಲೂಕು, ಗದಗ ಜಿಲ್ಲೆ

# ಭೂಮಿ ತಿರುಗುತ್ತಿದೆ ಮತ್ತೆ ಎಂದಿನಂತೆ...



ಉಳ್ಳವರು ಆಲಯವ ಕಟ್ಟಿ ಬೇರು ಬಿಟ್ಟೆವೆನ್ನುವರು !
ಇಲ್ಲದವನು ನಾನೇನ ಕಟ್ಟಲಿ ? ಅನಿಕೇತನಾ !!
ತಲೆ ಮೇಲಿನ ಸೂರು ! ಕೆಳಗೆ ಹರಿಯುವ ನೀರು !
ತಂಪುಗಾಳಿಗೆ ಮೈಯೊಡ್ಡಿ ಹಾಯೆನಬೇಕಿದೆ ! ನೆಲದೆದೆಯ ಗುಡಿಸಲು ಸಾಕೆನಿಸಿದೆ
ಕಾಯ್ದ ಭೂಮ್ತಾಯಿ ಮಂಚ - ಕಂಗೆಟ್ಟ ಪರ್ಪಂಚ !!
ಸತ್ತ ರೆಂಬೆಗೆ ಜೋತುಬಿದ್ದ ಬೆಚ್ಚನೆಯ ಗೂಡಿನ ಮರಿಗಳು
ಹೆಚ್ಚು ನೆಚ್ಚಲಾರವು ರೆಕ್ಕೆ ಬಿಚ್ಚುತ್ತಲೆ ಗಗನಗಾಮಿ !!

ಕಿತ್ತಿಡಲಾಗದ ಕಾಲ ಕಂಬಗಳು; ಮರಗಟ್ಟಿದ ಮರಗಳು !
ಗುಡ್ಡಗಳ ಸವರಿ ಓಡುತ್ತಿರುವ ಡಾಂಬರು ಹಾವುಗಳು !
ಹೊಳೆಯುವ ಕಣ್ಣಮುಂದಿನ ಮರೀಚಿಕೆಗಳು !
ಹಗಲಿರುಳಿನ ಹೊದಿಕೆಯೊಳಗೆ ಗುದ್ದಾಡುವ ದೇಹಗಳು !
ಸಿಕ್ಕ ಗೇಣುದ್ದ ಜಾಗದಲ್ಲೇ ಗೇಣಿ ಮಾಡಲು ಚಡಪಡಿಸಿ
ನೂರೆಂಟು ಸೋಗಿನ ವೇಷಗಳ ಕಂಡು ನೆತ್ತಿ ಮೇಲಣ ನೇಸರ ಕಿಲಕಿಲಿಸುವನು !!

ಆಕಾಶ ತಾರೆಗಳ ನಡುವೆ ಸ್ವಂತಿಕೆಯಿಲ್ಲದ ಭೂಗೋಳದ
ಸುತ್ತ ತಿರುಗುವ ಚಂದಿರಗಳ ಸಾಂತ್ವನಕೆ ತಲೆಯ ನೀಡಿ
ಕಣ್ಣುಗಳ ಮಿನುಗಿಸುತ್ತ ನೆಲದೆದೆಯ ದೇಸಿ ಬೀಜಗಳು ಮೊಳಕೆಯೊಡೆಯಲು
ಹಪಹಪಿಸಿ ಪರದೇಸಿಗಳಾಗಿ ಎರಡೂ ಕೈಗಳನೆತ್ತಿ ಕರೆವಾಗ !!
ಮತ್ತೆ ಜಟಾಧಾರಿಗಳ ದಂಡು ಹೊಸ್ತಿಲ ಬಳಿ ದೌಡಾಯಿಸಿ
ಬಯಲಿಗೆ ಬರಸೆಳೆಯುತ್ತಿವೆ; ಭೂಮಿ ತಿರುಗುತ್ತಿದೆ ಎಂದಿನಂತೆ !!

ಒಲಿದರೆ ಬರಡು ಹಯನುತ್ತದೆ; ಕೊರಡು ಕೊನರುತ್ತದೆ !
ಚಿಲಿಪಿಲಿಯೆಂದಾಡುವ ಗಿಳಿಗಳಿಗೆ ಕಾಣಿಸುತ್ತದೆ...!
ಮತ್ತೆ ಜಗದ ಹಸಿರು ಮುಡಿಯ ಶ್ರೀಶೈಲ !!
ಬರ್ತಿರೇನ್ರಿ ನೀವು ಮತ್ತೊಮ್ಮೆ ಅಲ್ಲಿ ಕೇರಿಗೆ ! ಮೆಲ್ಲಲು ತುಂಬು ಹೋಳಿಗೆ !
ಅಕ್ಕ-ಅಣ್ಣ ಮುಂದೆ ಮುಂದೆ ಜೊತೆಗೆ ಹೊತ್ತ ತುಂಬಿದ ಹೆಡಿಗೆ !
ಬೆಂಬತ್ತಿ ಸಾಲು ಹಿಡಿಯೋಣ ನಾವು-ನೀವು ಇರುವೆ ಹಾಗೆ !
ಬರಿದು ಜೋಳಿಗೆ ಮತ್ತೆ ಮತ್ತೆ ತುಂಬೋ ಹಾಗೆ !!

ವಿಜಯ ಧಾರವಾಡ
ಕೆ.ಎಲ್.ಇ. ಸಂಸ್ಥೆಯ ಜಿ. ಐ. ಬಾಗೇವಾಡಿ ಮಹಾವಿದ್ಯಾಲಯ, ನಿಪ್ಪಾಣಿ, ಬೆಳಗಾವಿ ಜಿಲ್ಲೆ

# ಜಿ.ಎಸ್.ಎಸ್. ಕಾವ್ಯದಲ್ಲಿ ಶ್ರೀಸಾಮಾನ್ಯಪರ ಧೋರಣೆ

ಕನ್ನಡ ಸಾರಸ್ವತ ಲೋಕದಲ್ಲಿ ಜಿ. ಎಸ್. ಶಿವರುದ್ರಪ್ಪ ಅವರದು ಒಂದು ಪ್ರಮುಖ ಹೆಸರು. 'ಸಾಮಗಾನ', 'ಚೆಲವು-ಒಲವು', 'ದೇವಶಿಲ್ಪ', 'ದೀಪದ ಹೆಜ್ಜೆ', 'ಕಾರ್ತೀಕ', 'ಅನಾವರಣ', 'ತೆರೆದ ದಾರಿ', 'ಗೋಡೆ', 'ಕಾಡಿನ ಕತ್ತಲಲ್ಲಿ', 'ಪ್ರೀತಿ ಇಲ್ಲದ ಮೇಲೆ', 'ಚಕ್ರಗತಿ', – ಇವು ಇವರ ಪ್ರಮುಖ ಕವನ ಸಂಕಲನಗಳು. ''ಜಿ.ಎಸ್.ಎಸ್. ಅವರ ಹಲವು ಜನ ಮೆಚ್ಚಿದ ಕವಿತೆಗಳಲ್ಲಿ ಎದ್ದು ಕಾಣುವುದು ಪ್ರಸಾದ ಗುಣ'' (ಕೆ. ವಿ. ನಾರಾಯಣ, ಜಿ.ಎಸ್.ಎಸ್. ಸಮಗ್ರ ಕಾವ್ಯ-ಪ್ರಸ್ತಾವನೆ, ಜಿ. ಎಸ್. ಶಿವರುದ್ರಪ್ಪ, ೧೯೯೭). ಜಿ.ಎಸ್.ಎಸ್. ಕಾವ್ಯ ಬಹುಗುಣ ಸಂಪತ್ತಿನಿಂದ ಕೂಡಿದೆ. 'ಸಾಮಗಾನ'ಕವಿತೆಗಳಿಂದ 'ದೀಪದ ಹೆಜ್ಜೆ'ಯ ಕವಿತೆಗಳವರೆಗೆ ಬರುವ ಹೊತ್ತಿಗೆ ಕವಿ ಎರಡು ಜಗತ್ತುಗಳಿಗೆ ಸ್ಪಂದಿಸುವ ಹೊಣೆಹೊರಲು ಸಿದ್ಧರಾಗುವುದು ಕಂಡುಬರುತ್ತದೆ. ಒಂದು ಜೀವ ಸಮೃದ್ಧ ಪ್ರಕೃತಿ; ಇನ್ನೊಂದು ಮಾನವ ಕೇಂದ್ರಿತ ಸಮಾಜ (ಕೆ. ವಿ. ನಾರಾಯಣ). ಈ ಹಿನ್ನೆಲೆಯಲ್ಲಿ ಜಿ.ಎಸ್.ಎಸ್. ಅವರ ಕಾವ್ಯ ರಚನೆ ಸಮೃದ್ಧವಾಗಿ ನಡೆದಿದೆ. ಅವರ ಸಾಮಾಜಿಕಪರ ಕವಿತೆಗಳು ಹಲವು ನೆಲೆಯಲ್ಲಿ ಮುಖ್ಯವಾಗುತ್ತವೆ.

ಕಿರಿಯದರಲ್ಲಿ ಹಿರಿದನ್ನು ಹಿಡಿದಿಡುವ ಶಕ್ತಿ ಜಿ.ಎಸ್.ಎಸ್. ಅವರದು. ಅವರ 'ಪ್ರತಿಮೆಗಳು' ಕವಿತೆ ಇದಕ್ಕೆ ಉತ್ತಮ ನಿದರ್ಶನ.

ಕಣ್ಣೀರಲಿ ನೆನೆದ  
ಹಸಿದ ಹೊಟ್ಟೆಯೊಳಗುರಿವ ಸಿಟ್ಟಿನಲ್ಲಿ  
ನಾಳಿನ ಕ್ರಾಂತಿಯ ಜ್ವಾಲಾಮುಖಿಗಳು  
ಹೊಗೆಯಾಡುತ್ತಿವೆ,  
ಹಸಿದ ಹೊಟ್ಟೆಯೊಳಗುರಿವ ಸಿಟ್ಟಿನಲ್ಲಿ

ಹಸಿದ ಹೊಟ್ಟೆಯೊಳಗಿನ ಆಕ್ರೋಶದ ಮಾತು ಇಲ್ಲಿ ಸ್ಫುಟ. ಹೀಗೆ ನೊಂದ ಜನ ವರ್ಗ ಉಳ್ಳವರ ವಿರುದ್ಧ ಕ್ರಾಂತಿಯ ಮಾಡುವುದು ಬದಲಾವಣೆಯೆಡೆಗಿನ ತುಡಿತವೇ ಆಗಿದೆ.

'ಸ್ವಾತಂತ್ರ್ಯೋತ್ಸವ-೧೯೮೮' ಕವನವು ಸ್ವಾತಂತ್ರ್ಯಾನಂತರದ ದೇಶದ ಪರಿಸ್ಥಿತಿಗೆ ಪ್ರತಿಬಿಂಬ. ಸ್ವಾತಂತ್ರ್ಯ ಕಾಲದಲ್ಲಿದ್ದ ಭರವಸೆಗಳಿಲ್ಲ, ಅನಂತರದಲ್ಲಿ ಭ್ರಮನಿರಸನಕ್ಕೊಳಗಾಗುವುದು ಎದ್ದುಕಾಣುವ ಅಂಶ.

ಎಷ್ಟು ದುಡಿದರೂ ಏನು ಪಡೆದರೂ  
ಬೆನ್ನಿಗಂಟಿರುವ ಹೊಟ್ಟೆಗಳು  
ಭಾರಿ ಮಹಲುಗಳ ಚರಂಡಿಯಂಚಿಗೆ  
ತತ್ತರಿಸುವ ಕೊಳೆಗೇರಿಗಳು

ಕತ್ತಲಲ್ಲಿ ಕನವರಿಸುವ ಜನರ ನಡುವೆ ಜಿ.ಎಸ್.ಎಸ್. ಹಣತೆ ಹಿಡಿದು ಪ್ರತ್ಯಕ್ಷರಾಗುತ್ತಾರೆ. ಕವಿಗೆ ನೊಂದವರ ಒಳಗೆ ಒಂದಾಗುವುದರಲ್ಲಿ ಎಂದೂ ಆಸಕ್ತಿ. 'ಶೂದ್ರನಿಗೊಂದು ಪತ್ರ' ಕವಿತೆ ತನ್ನ ಸಾಮಾಜಿಕ ತುಡಿತದಿಂದ ಬಹುಮುಖಿ



> ಸಾಮಾಜಿಕತೆಗೆ ತೀವ್ರವಾಗಿ, ನೈಜವಾಗಿ ಸ್ಪಂದಿಸಿದ ಕಾವ್ಯ ಹೆಚ್ಚು ಜೀವಂತವಾಗಿ ಬಹುಕಾಲ ಬಾಳುತ್ತದೆ. ಕವಿ ಇಲ್ಲದಿದ್ದರೂ ಅವನ ಕಾವ್ಯ ಜೀವಂತವಾಗಿ ಬದುಕುವುದು ಇದರಿಂದ ಸಾಧ್ಯ. ಜಿ.ಎಸ್.ಎಸ್. ಕಾವ್ಯದಲ್ಲಿ ಇಂಥ ಸಾಮಾಜಿಕ ಕಾಳಜಿ, ಕಳಕಳಿಗೆ ಹಲವು ನಿದರ್ಶನಗಳಿವೆ. ಎಚ್. ತಿಪ್ಪೇರುದ್ರಸ್ವಾಮಿ ಅವರ ಈ ಮಾತು ಜಿ.ಎಸ್.ಎಸ್. ಕಾವ್ಯಕ್ಕೆ ಬಹುವಾಗಿ ಒಪ್ಪುತ್ತದೆ: ''ಸಾಮಾಜಿಕವಾಗಿ ಒಂದು ತತ್ತ್ವಕ್ಕೆ ಬದ್ಧನಾದ ಸಾಹಿತಿ ಆ ಕಟ್ಟುಪಾಡಿಗೆ ಒಳಗಾಗಿ ಸನ್ನಿವೇಶಗಳನ್ನು ಸೃಷ್ಟಿಸುತ್ತಾನೆ. ಅದು ಬಂಡವಾಳಶಾಹಿ ಆಧುನಿಕತೆ ಆಗಬಹುದು; ಸಮಾಜವಾದಿಯ ವಾಸ್ತವಿಕತೆ ಆಗಬಹುದು, ತಾತ್ವಿಕ ಆದರ್ಶ ಆಗಬಹುದು ಅಥವಾ ಇನ್ನಾವುದೇ ಆಗಬಹುದು. ಇವುಗಳಲ್ಲಿ ಯಾವುದೇ ಒಂದು ತತ್ತ್ವಕ್ಕೆ ಅಂಟಿಕೊಂಡರೆ ಲೇಖಕ ಅದರ ಪ್ರಚಾರಕನಾಗಿಬಿಡುವ ಸಂಭವ ಹೆಚ್ಚು.''

**ರಾಜಪುತ್ರ**

ವಾಗುತ್ತದೆ. ಹಣವಂತರ, ಮೇಲ್‌ಸ್ತರದ ಜನರ ಸುಲಿಗೆಯ ಯಾಗಗಳ ಬಹುಮುಖಿ ಡಾಂಭಿಕತನ ಇಲ್ಲಿ ಬಯಲುಗೊಳ್ಳುತ್ತದೆ. ಕವಿಯ ಆತಂಕದ, ನೊಂದ ಎದೆಯ ಮಾತು ಪ್ರಕಟಗೊಳ್ಳುವುದು ಹೀಗೆ:

ಅಯ್ಯಾ ಶೂದ್ರ  
ಯಾರಿಗೆ ಹೇಳಿಕೊಳ್ಳೋಣ ನಾವು  
ನಮಗೋ ನಿಂತ ನೆಲವೆ ಅಭದ್ರ  
ಕಾಲಕೆಳಗೆ ಸದಾ ಪಟ್ಟಭದ್ರ  
ಹಿತಾಸಕ್ತಿಗಳ ಛಿದ್ರ

ಬಡವರ ಬದುಕಿನ ನೋವಿನೆಡೆಗೆ ಈ ಸಾಲುಗಳು ಬೆರಳುಮಾಡಿ ತೋರುತ್ತವೆ. ಹಸಿದವರ, ಅಸ್ಪೃಶ್ಯರ, ದೀನ-ದಲಿತರ, ಬಡವರ ಶೋಚನೀಯ ಬದುಕು ಎಂಥವರ ಎದೆಗೂ ನಾಟುತ್ತದೆ. ಕವಿಯನ್ನು ಕಾಡುವ ಇಂಡಿಯಾದ ಸಾಮಾಜಿಕ ಪರಿಸ್ಥಿತಿಯ ದಟ್ಟನೋಟ ಇಲ್ಲಿದೆ. ಇಂಥ ವಿಷಮ ವಾತಾವರಣದ ಅರಿವಿದ್ದೂ ಜನರ ಮುಂದೆ ಹಾಡು ಕಟ್ಟಲಾಗುವುದೇ? ವಿವೇಕಾನಂದರಂಥ ಚೇತನ ಅದಕ್ಕೇ ಹೇಳುವುದು, ಹಸಿದವರ ಹೊಟ್ಟೆ ತುಂಬ ಅನ್ನ ನೀಡುವ ಕಾರ್ಯ ಮೊದಲಾಗಬೇಕು ಎಂದು.

ಬರಿಯ ಮಾತಿನ ಜಾಲದಲ್ಲಿ  
ಶೋಷಣೆಗಳ ಶೂಲದಲ್ಲಿ  
ವಂಚನೆಗಳ ಸಂಚಿನಲ್ಲಿ  
ಹಸಿದ ಹೊಟ್ಟೆ ನರಳುವಲ್ಲಿ  
ಯಾವ ಹಾಡ ಹಾಡಲಿ

(ಯಾವ ಹಾಡ ಹಾಡಲಿ)

ಜಿ.ಎಸ್.ಎಸ್. ಸಮಾಜದ ಬಗೆಗೆ ಆಳವಾಗಿ ಚಿಂತಿಸಿದುದರಿಂದ ಮೂಡಿದ ಕವಿತೆ 'ಯಾವ ಹಾಡ ಹಾಡಲಿ'. ಕವಿಗೆ ಬಡವರ ಬದುಕು ಕಾಡಿರುವುದಿಲ್ಲಿ ವ್ಯಕ್ತವಾಗಿದೆ. ''ರಾಜಕೀಯ-ಸಾಮಾಜಿಕ-ಸಾಹಿತ್ಯಿಕ ಕ್ಷೇತ್ರಗಳ ಇಂತಹ 'ದಯನೀಯ ಪರಿಸ್ಥಿತಿ'ಯನ್ನು ಇವರ ವಿಡಂಬನಾತ್ಮಕ ಕವನಗಳು ಬಯಲು ಮಾಡುತ್ತವೆ. ಆದರೆ, ಇಲ್ಲಿ ನಾವು ಮರೆಯ ಬಾರದ ಒಂದು ಅಂಶವೆಂದರೆ, ಸಾಧಾರಣವಾಗಿ ವಿಡಂಬನಕಾರ ತಾನು ವಿಡಂಬಿಸುವ ಸಮಾಜದಿಂದ/ಸಮುದಾಯದಿಂದ ಹೊರಗೆ ತನ್ನನ್ನು ಗುರುತಿಸಿ ಕೊಳ್ಳುತ್ತಾನೆ. ಆದರೆ ಜಿ.ಎಸ್.ಎಸ್. ಅವರಿಗೆ ತಾವೂ ಅಂತಹ ಸಮಾಜದ/ಸಮುದಾಯದ ಒಂದು ಭಾಗವೇ ಎಂಬ ಅರಿವು ಸರ್ವದಾ ಜಾಗೃತವಾಗಿರುತ್ತದೆ'' (ಸಿ. ಎನ್. ರಾಮಚಂದ್ರರ) ಜಿ.ಎಸ್.ಎಸ್. ಅವರ ಆತ್ಮವಿಮರ್ಶೆ ಗಮನ ಸೆಳೆಯುತ್ತದೆ.

ಪ್ರಗತಿ ಕವನ ಅಭಿವೃದ್ಧಿ ಹೆಸರಿನಲ್ಲಿ ಇಲ್ಲದವರ ಬದುಕನ್ನು ಹಿಂಡಿಬಿಡುವ ಪ್ರಕ್ರಿಯೆಯ ಅನಾವರಣ ಮಾಡಿಬಿಡುತ್ತದೆ. ಭಾರತ ಭವ್ಯ ಇತಿಹಾಸ ಹೊಂದಿದೆ ಎಂದು ಹಾಡಿ ಹೊಗಳುವ ಜನರಿಗೆ ಕವಿ ವಾಸ್ತವದ ಬಿಸಿ ಮುಟ್ಟಿಸುತ್ತಾರೆ.

ಸಾಲು ಸಾಲು ಹಸಿದ ಹೊಟ್ಟೆ
ನಿರಕ್ಷರದ ನಾಲಗೆ,
ಸಮೃದ್ಧಿಯ ಹೆಗಲ ಮೇಲೆ
ಭಿಕ್ಷಾನ್ನದ ಜೋಳಿಗೆ,
ಇದೇ ನಮ್ಮ ಪ್ರಗತಿಯೆಂದು
ಭ್ರಮಿಸಬಹುದೆ ತಣ್ಣಗೆ ?

ದೇಶ ಅಭಿವೃದ್ಧಿಯಾಗಿದೆ ಎನ್ನುವವರಿಗೆ ಇಂಥ ಬಡಜನರ ಪರಿಸ್ಥಿತಿ ಏಕೆ ಇದೆ ಎಂಬುದು ಕವಿಯ ಪ್ರಶ್ನೆ. ಉಳ್ಳವರು ಚಾಣಾಕ್ಷರು. ಮತಮೌಢ್ಯದ ಬೀಜ ಬಿತ್ತಿ ಉತ್ತಮ ಫಸಲನ್ನು ತೆಗೆಯುವ ಕುಶಲಮತಿಗಳು. ಇದರಿಂದ ಬಡವರು ಬಡವರಾಗೇ ಉಳಿಯುತ್ತಾರೆ. ಆದುದರಿಂದ ಇದು ಪ್ರಗತಿಯಲ್ಲ, ಸಾಮಾನ್ಯನನ್ನೂ ಒಳಗೊಂಡಂತೆ ಸರ್ವರ ಅಭಿವೃದ್ಧಿಯಾಗುವುದೇ ನಿಜವಾದ ಪ್ರಗತಿ ಎಂಬುದು ಕವಿಯ ನಂಬಿಕೆ.

'ದೇಶಾದ್ಯಂತ ಅಣೆಕಟ್ಟುಗಳ ಕಟ್ಟಿ ನಾವು ಬೆಳೆದದ್ದೇನು, ಬರಿ ಹಸಿವೆ ?' (ಸಾಕು ನಿಲ್ಲಿಸು ನಿನ್ನ ಸಾಮಗಾನ), 'ತೆನೆ ತುಂಬಿ ನಿಂತ ಹೊಲಗದ್ದೆ ಬದಿಗೆ ಹಸಿವಿನಿಂದ ಸತ್ತ ಜನವೇ' (ಇನ್ನೆಂದು ಬೆಳಗು): ಜಿ.ಎಸ್.ಎಸ್. ಅವರ ಈ ಬಗೆಯ ಚಿಂತನಾಕ್ರಮ ಹೆಚ್ಚು ಮೆಚ್ಚುಗೆಯಾಗುತ್ತದೆ.

ಜಿ.ಎಸ್.ಎಸ್. ಅವರು ಕಾವ್ಯದಲ್ಲಿ ಸಾಮಾಜಿಕ ಪ್ರಜ್ಞೆ ತುಂಬಿರಬೇಕೆಂದು ನಂಬಿದ್ದವರು. ''ಸಾಹಿತ್ಯವು ಒಂದು ಕಾಲದ ಸಾಮಾಜಿಕ ಸಂದರ್ಭದಲ್ಲಿ ಸಂಭವಿಸುತ್ತದೆ. ಸಾಹಿತಿಯೂ ಆ ಸಮಾಜದ ಒಂದು ಅನಿವಾರ್ಯವಾದ ಅಂಗವಾಗಿರುವುದರಿಂದ, ಮತ್ತು ತನ್ನ ಸಾಮಾಜಿಕ ಸಂಪರ್ಕ ಮಾಧ್ಯಮವಾದ ಭಾಷೆಯ ಮೂಲಕವೇ ತನ್ನ ಸಮಾಜದೊಂದಿಗೆ ಕೃತಿಮುಖೇನ ವ್ಯವಹರಿಸುವುದರಿಂದ, ಸಾಹಿತಿಯಾದವನು ತನ್ನ ಸಮಕಾಲೀನ ಸಮಾಜದ ಬಗ್ಗೆ, ಮತ್ತು ಸಾಮಾಜಿಕ ಮಾಧ್ಯಮವಾದ ಭಾಷೆಯ ಬಗ್ಗೆ ವಿಶೇಷವಾದ ರೀತಿಯ ಎಚ್ಚರವನ್ನು ತಾಳಿರುತ್ತಾನೆ'' (ಜಿ. ಎಸ್. ಆಮೂರ). ಶತಮಾನದಿಂದಲೂ ಮನೆಮಾಡಿರುವ ದುರವಸ್ಥೆಯನ್ನು ಕಂಡರೆ ಕವಿಗೆ ಆಕ್ರೋಶ ಉಕ್ಕಿಬರುತ್ತದೆ. ಜಿ.ಎಸ್.ಎಸ್. ಭಾವನಾಜೀವಿ. ಇಂಥ ಸಹೃದಯ ಕವಿ ಸಮಾಜದ ಘಟನೆಗಳಿಗೆ ತೀವ್ರವಾಗಿ ಸ್ಪಂದಿಸುತ್ತಾರೆ. ಮೈಮುಚ್ಚಲು ಬಟ್ಟೆ ಇಲ್ಲದೆ ಚಳಿಯಲ್ಲಿ ಕುಳಿತು ನಡುಗುವ ಹುಡುಗನನ್ನು ಕಂಡರೆ ಕವಿಗೆ ನಡುಕ ಶುರುವಾಗುತ್ತದೆ. ಬೀದಿಯಲ್ಲಿ ಅನ್ನಕ್ಕಾಗಿ ಹಾತೊರೆಯುವ ಮುದುಕಿಯ ಧ್ವನಿ ಕೇಳಿದರೇ ಕವಿಗೆ ಅನ್ನ ಸೇರುವುದಿಲ್ಲ. ವಾಸಿಸಲು ಸ್ಥಳವಿಲ್ಲದೆ ಎಲ್ಲಿ ಬೇಕೆಂದರಲ್ಲಿ ಬಿದ್ದು ಒದ್ದಾಡುವ ಜನರನ್ನು ಕಂಡರೆ ಇವಕ್ಕೆಲ್ಲ ಕಾರಣ ತಾನೇ ಎಂಬ ಅಪರಾಧಿಭಾವ ಮೂಡುತ್ತದೆ. ಕವಿಯನ್ನು ಸಮಾಜದಲ್ಲಿರುವ ಬಡವರ, ದುರ್ಬಲರ ದುಃಖ ಬಹುವಾಗಿ ಕಾಡಿದೆ. ಅಂಥ ಕವಿಸ್ಥಿತಿ ಹೇಳುವ ಕವನ 'ಅವಸ್ಥೆ'.

ಗೇಟಾಚೆ ತಿರುಪೆಯ ಮುದುಕಿ
ಅನ್ನಕ್ಕೆ ಅರಚುವ ಹೊತ್ತು
ನಾ ಹೇಗೆ ಊಟಮಾಡಲಿ ಹೇಳು ?
ಆ ಕೂಗು
ಮನುಷ್ಯರದೋ ಪ್ರಾಣಿಯದೋ
ಅಥವಾ ಶತಶತಮಾನಗಳ ಹಸಿವು ತಾಳಿದಾಕಾರವೋ
ಹೇಗೆ ಕೇಳಲಿ ನಾನು
ಕೇಳಿಯೂ ಹೇಗೆ ಸುಮ್ಮನಿರಲಿ ?

ಕುವೆಂಪು 'ಕಲ್ಕಿ'ಯಲ್ಲಿ 'ಕಲ್ಕಿ ಕಲ್ಕಿ ಎನ್ನುತ ಚೀರಿ ಕನಸೊಡೆದೆದ್ದೆ ಇನ್ನೆಲ್ಲಿಯ ನಿದ್ದೆ?' ಎನ್ನುವಂತೆ, ಸಮಾಜದ ಅಸಮಾನ ವ್ಯವಸ್ಥೆ ಕವಿಯನ್ನು ಕಾಡಿರುವಂತೆ, ಈ ಕವನದಲ್ಲಿ ಜಿ.ಎಸ್.ಎಸ್. ಅವರಿಗೆ ಸಮಾಜದ ನೊಂದವರ ದನಿ ನುಂಗಲಾರದ ತುತ್ತಾಗಿದೆ. ಹೀಗೆ ಕವಿಯ ಸಾಮಾಜಿಕ ಕಾಳಜಿ ಎದ್ದುಕಾಣುತ್ತದೆ.

ಜಗದ ಜನರ ನೋವು ನೋಡಿದರೆ ಎಂಥವರೂ ಸ್ಪಂದಿಸುತ್ತಾರೆ. ಕವಿಯ ಮೇಲಿನ ನಿಲುವೇ ಅದಕ್ಕೆ ಸಾಕ್ಷಿ. ಜನರ ನೋವು ನೋಡಿಯೂ ಏನೂ ಮಾಡಲಾಗದ ಕಲ್ಲುಹೃದಯದ ಜನರನ್ನೂ ಕವಿ ಗುರುತಿಸುತ್ತಾರೆ. ಇಂಥವರನ್ನು ನೋಡಿದರೆ ಕವಿಗೆ ಸಿಟ್ಟು. ಸಾಮಾಜಿಕವಾಗಿ ಇಂಥ ಅನಾಗರಿಕ, ಅನಾರೋಗ್ಯಕರ ವಾತಾವರಣವನ್ನು ಸೃಷ್ಟಿಸಿದ ತಮ್ಮನ್ನೂ, ತಮ್ಮ ಸಮಾಜವನ್ನೂ



## ಎಲ್ಲವೂ ಬಿಕರಿಗಿದೆ

ಎಷ್ಟೊಂದು ರುಚಿಕಟ್ಟು
ಸಮುದ್ರದ ಈ ಉಪ್ಪುಹನಿ
ಎಲ್ಲರಿಗೂ ಸಿಕ್ಕುವ, ದಕ್ಕುವ
ಉಪ್ಪಿನ ರುಚಿ ಕಿತ್ತುಕೊಳ್ಳುತ್ತಾರೆ
ಅವರು ನಮ್ಮೆಲ್ಲರ ನೆಮ್ಮದಿ
ಮನದ ಸಂಕಟ ತಳಮಳಗಳ
ಹೊರೆಯಿಳಿಸಲು ತಲೆಯಿಂದ
ಹುಡುಕಾಡಿದೆ ಪರಿಹಾರಕೆ ಪೆನ್ನು
ಬಸಿರ ಹೊರಿಸಿ ಪ್ರನಾಳಕ್ಕೆ
ಹಗುರವಾಗುತ್ತಿದ್ದಾರೆ –
ದಕ್ಕಲಾರದು ಅಮ್ಮನ ಕೈತುತ್ತು
ಎಲ್ಲವೂ ಬಿಕರಿಗಿದೆಯಿಲ್ಲಿ
ಜಾಗತಿಕ ಮಾರುಕಟ್ಟೆಯಲಿ
ಇಡಿಯಾಗಿ ಅಂಗಾಂಗಗಳ
ಬೇಕಾದರೆ ಬಿಡಿಯಾಗಿ ಕೊಡುತ್ತೇವೆ
ನಿಶ್ಚಿಂತ ನಿದ್ದೆಹೋಗುತ್ತೇವೆ –
ಕಳ್ಳರ ಕೈಗೆ ಕೀಲಿಕೊಟ್ಟು
ಅಂಗಳದಲ್ಲಿ ಹಂದಿಗಳು
ಬಂದು ಮಲಗುತ್ತವೆ
ಆಟದ ಅಂಗಳವನು
ಕಲುಷಿತ ಮಾಡುತ್ತವೆ
ನಮ್ಮ ಸಮುದ್ರದ ಉಪ್ಪು
ನಮ್ಮದಾಗುಳಿದಿಲ್ಲ ಇಂದು
ಎಲ್ಲವೂ ಬಿಕರಿಗಿವೆ
ಇಡಿಯಾಗಿ
ಬೇಕಾದರೆ ಬಿಡಿಯಾಗಿ

ಕೆ. ಷರೀಫಾ, ಎಚಿಎಂಸಿ., ಹರಿಹರ

ಕವಿ ಮೊನಚಾದ ಮಾತಿನಿಂದ ಚುಚ್ಚುತ್ತಾರೆ. ಎಚ್ಚೆತ್ತು ಕೊಂಡು ಋಜುಮಾರ್ಗದಲ್ಲಿ ನಡೆಯುವಂತೆ ತಿದ್ದುತ್ತಾರೆ:

ರೇಗುತ್ತೇನೆ ನನ್ನ ಮೇಲೆ
ನನ್ನಂಥವರ ಮೇಲೆ
ನನ್ನಂಥವರ ಒಳಗೊಂಡ ಈ
ಸಮಾಜದ ಮೇಲೆ
ಇದರ ಪ್ರತಿನಿಧಿಯಾದ ವ್ಯವಸ್ಥೆಯ ಮೇಲೆ
ಅದು ನಿರಂತರವಾಗಿ ಉಳಿಸಿರುವ ಈ
ಅವಸ್ಥೆಯ ಮೇಲೆ

ಇಂಡಿಯಾ ದೇಶದ ಡೊಂಕುನಾಯಕರ ಪೊಳ್ಳುತನಗಳನ್ನು ಗೇಲಿ ಮಾಡಿ ಮೊನಚಾದ ಮಾತಿನಿಂದ ಚುಚ್ಚುವ ಜಿ.ಎಸ್.ಎಸ್. ಅವರ ಕವಿತೆ 'ಈ ದೇಶದಲ್ಲಿ'. ಈ ದೇಶದಲ್ಲಿ ಎಲ್ಲವೂ ಸಂಪೂರ್ಣ ಬದಲಾವಣೆ ಕಾಣಬೇಕು. ತಾನು ಕುಳಿತ ಕುರ್ಚಿ, ತನ್ನ ಜಾತಿ, ತನ್ನ ದೇವರಿಗೆ ಬಾಧೆ ಬರಬಾರದು ಎಂದು ತಾನು ಮಾತ್ರ ಶ್ರೇಷ್ಠ ಉಳಿದಿದ್ದು ಕನಿಷ್ಠ ತನ್ನ ಮಾತು ಮಾತ್ರ ನಡೆಯಬೇಕು ಎಂದು ಹುಂಬತನದ ವರ್ತನೆ ತೋರುವ, ಪೇಪರಿನಲ್ಲಿ ಮುಖ ತೋರಿ ಹಲ್ಲು ಗಿಂಜುವ ನಾಟಕ ನಿಸ್ಸೀಮ ನಾಯಕಮಣಿಗಳ ಮುಖವಾಡಗಳನ್ನು ಬಯಲಿಗೆಳೆಯುತ್ತಾರೆ, ಕವಿ ಜಿ.ಎಸ್.ಎಸ್. ಇಂಥ ಪೊಳ್ಳುತನದ ಜನರ ವ್ಯಕ್ತಿತ್ವವನ್ನು ಹರಾಜಿಗಿಡುವ ಪರಿ ಎಷ್ಟು ಪರಿಣಾಮಕಾರಿಯಾಗಿದೆ ನೋಡಿ:

ಈ ದೇಶದಲ್ಲಿ
ಎಲ್ಲರೂ ಮಾತಾಡುವುದನ್ನು ನಿಲ್ಲಿಸಿ
ತೆಪ್ಪಗಿರಬೇಕು
ಆದರೆ
ನಾನಾಡುವ ಮಾತಿಗೆ ಸದಾ
ಕಿವಿದೆರೆದು ತಲೆದೂಗಬೇಕು

ಭಾರತ ಬಹು ಶ್ರೀಮಂತ ದೇಶ ಮತ್ತು ಬಹು ಸಂಖ್ಯಾತ ಬಡವರನ್ನುಳ್ಳ ದೇಶ. ಈ ನೂರುಕೋಟಿಯ ನಾಡಿನಲ್ಲಿ ನಲಿವು ಏಕೋ ಕಾಣದು. ಅದಕ್ಕೆ ನಮ್ಮ ನಾಡನ್ನು ಕೊಳ್ಳೆ ಹೊಡೆವ ನಾಯಕಶಾಹಿ, ಅಧಿಕಾರಶಾಹಿ ಜನವರ್ಗವೇ ಕಾರಣ. ಭಾರತ ಏಷ್ಯಾದಲ್ಲಿ ವೇಗವಾಗಿ ಮುನ್ನುಗ್ಗುತ್ತಿರುವ ಚೀನಾದ ನಂತರದ ಸ್ಥಾನ ಪಡೆದಿದೆ. ಶೇ. ೯-೧೦ರ ಶರವೇಗದಲ್ಲಿ ಆರ್ಥಿಕವಾಗಿ ಅಭಿವೃದ್ಧಿ ಸಾಧಿಸುತ್ತಿದೆ. ಆದರೆ ಈ ಅಭಿವೃದ್ಧಿ ಅಸಮಾನವಾಗಿದೆ. 'ಸಾಕು ನಿಲ್ಲಿಸು ನಿನ್ನ ಸಾಮಗಾನ' ಕವಿತೆಯು ದೇಶವು ಅಭಿವೃದ್ಧಿಯ ಹೆಸರಿನಲ್ಲಿ ಅಧೋಗತಿಯ ಹಾದಿ ಹಿಡಿದಿರುವುದನ್ನು ಸೂಚ್ಯವಾಗಿ ಉಸುರುತ್ತದೆ. ಯೋಜನೆಗಳ ಪ್ರಯೋಜನವನ್ನು ತಮ್ಮ ಮನೆಯ ಹಾದಿಗೆ ತಿರುಗಿಸಿಕೊಂಡಿರುವ ಸ್ವಾರ್ಥ ಸರ್ಕಾರಿ ಕಂಟಕರನ್ನು ಕಂಡಾಗ ಕವಿ ಕೆಂಡ ಮಂಡಲವಾಗಿ ಉರಿದುಬೀಳುತ್ತಾರೆ. ಕವಿ ನಮ್ಮ ಮುಂದೆ ಇಡುವ ಪ್ರಶ್ನೆ ಬಹುವಾಗಿ ಕಾಡುವಂಥದ್ದಾಗಿದೆ:

ದೇಶಾದ್ಯಂತ ಅಣೆಕಟ್ಟುಗಳ ಕಟ್ಟಿ ನಾವು
ಬೆಳೆದದ್ದೇನು ಬರಿ ಹಸಿವ ?
ಹೊಲ ಗದ್ದೆಗಳ ತುಂಬ ತೆನೆಯೆತ್ತಿ
ತೂಗುವುದೇನು ?
ಹಸಿರೆ ಅಥವಾ ನಿಟ್ಟುಸಿರೆ ?




'ನನ್ನ ನಿನ್ನ ನಡುವೆ' ಕವಿತೆ ವಾಸ್ತವ ಪ್ರಪಂಚದ ದುರುಳತನವನ್ನು ತನ್ನ ನಿಷ್ಠುರ ನುಡಿಯಲ್ಲಿ ಉಸುರುತ್ತದೆ. ಸಾಮಾಜಿಕ ವಾತಾವರಣ ಕುಲಗೆಟ್ಟು, ತುಕ್ಕು ಹಿಡಿದು ನಶಿಸುತ್ತಿರುವ ಇಂದಿನ ಆಧುನಿಕ ಒತ್ತಡದ ಬದುಕಿನಲ್ಲಿ ಮಾನವತೆಗೆ ನೆಲೆಯಾಗಲೀ ಬೆಲೆಯಾಗಲೀ ಇಲ್ಲ. ಇಲ್ಲಿ ಏನಿದ್ದರೂ ನಡೆಯುವುದು ಹಣವಂತರ ಆರ್ಭಟ, ಉಳ್ಳವರ ಪುಂಡಾಟಿಕೆ; ಇಂಥ ಜನರ ನಡುವೆ ಬಹು ಎಚ್ಚರಿಕೆಯಿಂದ ಬಾಳಬೇಕು ಎನ್ನುತ್ತಾರೆ ಕವಿ. ಕಟುಕ ಸಮಾಜದ ಅಪ್ಪಟ ವಾಸ್ತವವಾದಿ ನೆಲೆಯ ಚಿತ್ರಣ:

ಎದ್ದರೆ ಕಾಲಿಗೆ ಬೀಳುತ್ತದೆ, ಬಿದ್ದರೆ ಕಚಪಿಚ
ತುಳಿಯುತ್ತದೆ ಈ ಲೋಕ,
ಹೇಗೋ ಏನೋ ಮೇಲೆದ್ದವನದೆ ಗದ್ದುಗೆ,
ಅವನದೆ ಎಲ್ಲ ಪ್ರತಾಪ ಸುಮ್ಮನಿದ್ದವನ ಹಾಗೇ
ತಳ್ಳಿ ಕೊರಳಿಗೆ ಬಕರಾ ಬ್ರ್ಯಾಂಡು
ಆಮೇಲೇನಿದೆ ? ಗೆದ್ದವನಿಗೆ ಬಾಜಾ ಬಜಂತ್ರಿ
ಬ್ರ್ಯಾಂಡು !' (ನನ್ನ ನಿನ್ನ ನಡುವೆ)

ಬಹು ಹಿಂದಿನಿಂದಲೂ ಶೋಷಕ ಬಹು ಎಚ್ಚರಿಕೆಯಿಂದ ನಡೆದುಕೊಂಡು ಬಂದಿದ್ದಾನೆ. ಶೋಷಿತನಂತೂ ಅಂದಿನಿಂದಲೂ ಹಲಬಗೆಯ ಶೋಷಣೆ, ದಬ್ಬಾಳಿಕೆಗಳಿಗೆ ಒಳಗಾಗಿ ನಜ್ಜುಗುಜ್ಜಾಗಿ ಹೋಗಿದ್ದಾನೆ. ಅವನು ರಕ್ತ ಮಾಂಸವಿರದ ಬರಿ ಮೂಳೆಯಂತಾಗಿದ್ದಾನೆ. ಶೋಷಕನ ಆರ್ಭಟ, ಅಬ್ಬರಗಳ ನಡುವೆ ಶೋಷಿತ ಎಲ್ಲೂ ನೆಲೆಕಾಣದ ಅಲೆಮಾರಿಯಾಗಿದ್ದಾನೆ. ಹೊತ್ತುಹೊತ್ತಿನ ತುತ್ತು ಊಟಕ್ಕೂ, ಒಪ್ಪೊತ್ತಿನ ಉಪ್ಪಿಲ್ಲದ ಗಂಜಿಗೂ ತನ್ನನ್ನೇ ಒತ್ತೆ ಇಟ್ಟು, ರಕ್ತ ಸುರಿಸಿ ದುಡಿಯುತ್ತಿದ್ದಾನೆ. ಆದರೆ ಅದರ ಫಲವನ್ನು ಸದ್ದಿಲ್ಲದೆ ಹಗಲು ಹೊತ್ತಿನಲ್ಲೇ ಕದ್ದು ಶ್ರೀಮಂತ ಮತ್ತಷ್ಟು ಶ್ರೀಮಂತನಾಗೇ ಮುಂದುವರಿಯುತ್ತಿದ್ದರೆ, ಶ್ರೀಸಾಮಾನ್ಯ ಮತ್ತೆ ಮತ್ತೆ ಬಡತನದ ಕಂದಕಕ್ಕೆ ನೂಕಲ್ಪಟ್ಟು ಉಸಿರುಗಟ್ಟಿ ಸಾಯುವ ಸ್ಥಿತಿಗೆ ತಲುಪಿಹೋಗಿದ್ದಾನೆ. ತ್ಯಾಗಮಯೀ ಜನಗಳ ಹಸಿ ವಾಸ್ತವದ ಬದುಕು ಕವಿಯಿಂದ ಪ್ರಕಟಗೊಳ್ಳುವುದು ಹೀಗೆ:

ಮನೆ ಕಟ್ಟುವುದೆ ಕೆಲಸ ಈ ಜನಕ್ಕೆ
ಮಳೆಯಲ್ಲಿ, ಬಿಸಿಲಲ್ಲಿ, ಗಾಳಿಯಲ್ಲಿ
ಮಣ್ಣು ಹೊರುತ್ತಾ, ದಿನದಿಂದಿನಕ್ಕೆ
ತಾವೆ ಕಟ್ಟುತ್ತಿರುವ ಮನೆ ಮಹಡಿ ಮಹಡಿ
ಗಳಾಗಿ ಏರುವುದನ್ನು ಕಾಣುತ್ತಾ
ಅದರ ಬದಿ ಜೋಪಡಿಯಲ್ಲಿ ಕೊರಗುತ್ತಾ
ಸವೆದು ಹೋಗುತ್ತಿರುವ ಈ ಮಂದಿಗೆ
ಅನ್ನಿಸುವುದಿಲ್ಲವೆ, ತಮಗೂ ಒಂದು
ಮನೆಯಿಲ್ಲವೆಂದು ? (ಮನೆ ಕಟ್ಟುವ ಮಂದಿ)

'ಎಚ್ಚರಿಕೆ', 'ನನ್ನ ನಿನ್ನ ನಡುವೆ', 'ಹಣತೆ', 'ಶೂದ್ರನಿಗೊಂದು ಪತ್ರ', 'ಸಮತಾವಾದ', ಮನೆ ಕಟ್ಟುವ ಮಂದಿ', 'ಈ ದೇಶದಲ್ಲಿ', 'ಭಯಭೀತ', 'ಏನು ವ್ಯತ್ಯಾಸ', 'ನೀವೇ ಹೇಳಿ', 'ಗಾರುಡಿ', 'ಕವಳ ತಾಯೀ ಕವಳ', 'ಜನರು' - ಜಿ.ಎಸ್.ಎಸ್. ಅವರ ಈ ಕವಿತೆಗಳು ಸಾಮಾಜಿಕಪರ ಕಾಳಜಿಯಿಂದ ತುಂಬಿವೆ.

ಸಾಮಾಜಿಕತೆಗೆ ತೀವ್ರವಾಗಿ, ನೈಜವಾಗಿ ಸ್ಪಂದಿಸಿದ ಕಾವ್ಯ ಹೆಚ್ಚು ಜೀವಂತವಾಗಿ ಬಹುಕಾಲ ಬಾಳುತ್ತದೆ. ಕವಿ ಇಲ್ಲದಿದ್ದರೂ ಅವನ ಕಾವ್ಯ ಜೀವಂತವಾಗಿ ಬದುಕುವುದು ಇದರಿಂದ ಸಾಧ್ಯ. ಜಿ.ಎಸ್.ಎಸ್. ಕಾವ್ಯದಲ್ಲಿ ಇಂಥ ಸಾಮಾಜಿಕ ಕಾಳಜಿ, ಕಳಕಳಿಗೆ ಹಲವು ನಿದರ್ಶನಗಳಿವೆ. ಎಚ್.ತಿಪ್ಪೇರುದ್ರಸ್ವಾಮಿ ಅವರ ಈ ಮಾತು ಜಿ.ಎಸ್.ಎಸ್. ಕಾವ್ಯಕ್ಕೆ ಬಹುವಾಗಿ ಒಪ್ಪುತ್ತದೆ: ''ಸಾಮಾಜಿಕವಾಗಿ ಒಂದು ತತ್ತ್ವಕ್ಕೆ ಬದ್ಧನಾದ ಸಾಹಿತಿ ಆ ಕಟ್ಟುಪಾಡಿಗೆ ಒಳಗಾಗಿ ಸನ್ನಿವೇಶಗಳನ್ನು ಸೃಷ್ಟಿಸುತ್ತಾನೆ. ಅದು ಬಂಡವಾಳಶಾಹೀ ಆಧುನಿಕತೆ ಆಗಬಹುದು; ಸಮಾಜವಾದಿಯ ವಾಸ್ತವಿಕತೆ ಆಗಬಹುದು: ತಾತ್ವಿಕ ಆದರ್ಶ ಆಗಬಹುದು ಅಥವಾ ಇನ್ನಾವುದೇ ಆಗಬಹುದು. ಇವುಗಳಲ್ಲಿ ಯಾವುದೇ ಒಂದು ತತ್ತ್ವಕ್ಕೆ ಅಂಟಿಕೊಂಡರೆ ಲೇಖಕ ಅದರ ಪ್ರಚಾರಕನಾಗಿಬಿಡುವ ಸಂಭವ ಹೆಚ್ಚು. ಸಾಹಿತಿಗೆ ನಿಶ್ಚಿತವಾದ ಒಂದು ಸಾಮಾಜಿಕ ನಿಲುವು ಬೇಕು, ನಿಜ. ಆದರೆ ಆತ ಸಂಕುಚಿತವಾದ ಕಟ್ಟುಪಾಡಿಗೆ ಒಳಗಾಗಿ ಪಕ್ಷದ ಪ್ರಚಾರಕನಂತಾಗಬಾರದು. ಸರ್ವಾರ್ಥದೃಷ್ಟಿಯಿಂದ ಸಮಸ್ಯೆಯ ಎಲ್ಲ ಮಗ್ಗುಲಗಳನ್ನು ಬಿಡಿದು ನೋಡಬೇಕು; ಮುಕ್ತ ಮನಸ್ಸಿನಿಂದ ಎಲ್ಲವನ್ನೂ ಗ್ರಹಿಸಬೇಕು; ಆ ಕಾಣ್ಕೆ ಭಾವುಕವಾಗದೆ ವಿಮರ್ಶಾತ್ಮಕವಾಗಬೇಕು''. (ಡಾ|| ಎಚ್. ತಿಪ್ಪೇರುದ್ರಸ್ವಾಮಿ, ಸಾಹಿತ್ಯ ಮತ್ತು ಸಮಕಾಲೀನ ವಾಸ್ತವಿಕತೆ, ಪು. ೧೧.)

ಜಿ. ಎಸ್. ಶಿವರುದ್ರಪ್ಪ ಅವರ ಕವನಗಳಲ್ಲಿ ಅಸಮತೆಯ ಸಮಾಜ ಕುರಿತ ವಿಡಂಬನೆ ತೀಕ್ಷ್ಣವಾಗಿದೆ, ಅತ್ಯಂತ ಮೊನಚಾಗಿದೆ. ಸಮಾಜದಲ್ಲಿ ನೊಂದವರ ಪರವಾಗಿ ಕವಿ ಇಲ್ಲಿ ಕೇವಲ ವಿಶ್ಲೇಷಣೆ, ವಿವರಣೆಗಳ ಕೆಲಸ ಮಾಡುವುದಿಲ್ಲ. ಬದಲಾಗಿ ಶೋಷಕರ ವಿವಿಧ ಮುಖಗಳ ದರ್ಶನ ಮಾಡಿಸುತ್ತಲೇ ಅವರಿಗೆ ತಿವಿದು ಬುದ್ಧಿ ಹೇಳುವ ಹಿರಿಯರೊಬ್ಬರ ಆದರ್ಶರೂಪ ವ್ಯಕ್ತಿತ್ವ ಇಲ್ಲಿ ಕಂಡುಬರುತ್ತದೆ.

ರಾಜಪುತ್ರ



# ಇದೇನು ಶಕ್ತಿ ಸಮತೋಲನವೋ ಅಥವಾ ಇನ್ನೊಂದು ಸಾಮ್ರಾಜ್ಯಶಾಹಿಯ ಉದಯವೋ !

ನಮ್ಮ ನೆರೆಯ ಚೀನಾವು ರಹಸ್ಯವಾಗಿ ಜಲಾಂತರ್ಗಾಮಿ ಪರಮಾಣು ಘಟಕವೊಂದನ್ನು ಸ್ಥಾಪಿಸಿರುವುದು ಏಷ್ಯಾ ದೇಶಗಳಿಗೆ ಆತಂಕಕಾರಿಯಾಗಿದೆಯಲ್ಲದೆ, ಅಮೆರಿಕಾ ಸೂಪರ್ ಶಕ್ತಿಗೆ ಸವಾಲು ಒಡ್ಡುವಂತೆಯೂ ಬೆಳೆಯುತ್ತಿದೆ – ಎಂಬ ಸುದ್ದಿಯನ್ನು ಪಿಟಿಐ ವಾರ್ತಾ ಸಂಸ್ಥೆ ದೃಢಪಡಿಸಿದೆ. ಸದ್ಯ, ಚೀನಾದ ಈ ರಹಸ್ಯ ಪರಮಾಣು ಚಟುವಟಿಕೆಯ ಜಾಡು ಹಿಡಿದು ಹೊರಡುವ ಮುನ್ನ ಜಾಗತಿಕ ದೇಶಗಳ ಪರಿಸ್ಥಿತಿಯನ್ನು ಕೊಂಚ ಸಮೀಕ್ಷಿಸುವುದು ಸೂಕ್ತ. ಇಲ್ಲವಾದರೆ ಚೀನಾದ ಪರಮಾಣು ಚಟುವಟಿಕೆಯ ಹಿಂದಿರುವ ಉದ್ದೇಶ ನಮಗೆ ಸ್ಪಷ್ಟವಾಗಲಾರದು.

ಇಪ್ಪತ್ತನೆಯ ಶತಮಾನದ ಕೊನೆಯ ದಶಕದ ಆರಂಭಕ್ಕೆ ಸೋವಿಯತ್ ರಷ್ಯಾ ಬಂಡವಾಳಶಾಹಿ ಅಮೆರಿಕದತ್ತ ವಾಲುವ ಮೂಲಕ, ಅಧ್ಯಕ್ಷ ಗೋರ್ಬಚೇವ್ ರಾಜೀನಾಮೆ ನೀಡಿದಾಗ (೧೯೯೧) ಅದು ವಿಘಟಿತಗೊಂಡು, ಒಕ್ಕೂಟ ವ್ಯವಸ್ಥೆ ಕುಸಿದುಬಿದ್ದು ಸ್ವತಂತ್ರ ಸಂಸ್ಥಾನಗಳಾದುವು. ೧೯೧೭ರ ಮಹಾಕ್ರಾಂತಿಯಿಂದ ಮೊದಲುಗೊಂಡು ಸುಮಾರು ಮುಕ್ಕಾಲು ಶತಮಾನ ಪ್ರಬಲ ರಾಷ್ಟ್ರವಾಗಿ ಅಮೆರಿಕಾದೊಡನೆ ಶಕ್ತಿ ಸಮತೋಲನ ಸಾಧಿಸಿದ್ದ ಆ ಒಂದು ದೇಶ ಹಿನ್ನಡೆಗೆ ಬಿದ್ದಿತು. ಇದಾದ ನಂತರ ಅಮೆರಿಕಾ ಮಾತ್ರವೇ ಸೂಪರ್ ಪವರ್ ರಾಷ್ಟ್ರವಾಗಿ ಪ್ರಕಾಶಿಸಿತು. ಆದ್ದರಿಂದ ಈ ರಾಷ್ಟ್ರದ ಸರಿ-ತಪ್ಪುಗಳನ್ನು ವಿಮರ್ಶಿಸುವ, ವಿಶ್ವಸಂಸ್ಥೆಯಲ್ಲಿ ಅದರ ವಿರುದ್ಧ ವೀಟೋ ಚಲಾಯಿಸುವ ದೇಶಗಳೇ ಇಲ್ಲವಾದುವು. ಈ ಸಂದರ್ಭದಲ್ಲಿ ಹಾಲಿ ಅಧ್ಯಕ್ಷನ ತಂದೆ ಜಾರ್ಜ್ ಬುಷ್ ಅಧಿಕಾರದಲ್ಲಿದ್ದ. ಇವನ ಕಾಲದಲ್ಲಿ ತೈಲ

**ಪ್ರೊ|| ಶಿವರಾಮಯ್ಯ**

ದ್ವೀಪ ಕುವೈತನ್ನು ಮಿಲಿಟರಿ ಕಾರ್ಯಾಚರಣೆ ಮೂಲಕ ಇರಾಕಿನ ಸದ್ದಾಮ್ ಹುಸೇನನ ತಥಾಕಥಿತ ಆಕ್ರಮಣದಿಂದ ವಿಮೋಚನೆಗೊಳಿಸಲಾಯಿತು. ಆದರೆ ಅದಕ್ಕೂ ಮೊದಲು ಸದ್ದಾಮ್‌ನನ್ನು ಇರಾನಿನ ವಿರುದ್ಧ ಅಮೆರಿಕಾವೇ ಎತ್ತಿಕಟ್ಟಿ ಬೆಳೆಸಿತ್ತು. ಆದರೀಗ ಗಲ್ಫ್ ಯುದ್ಧದ ಸೋಲಿನಿಂದ ಸರ್ವಾಧಿಕಾರಿ ಸ್ವಭಾವದ ಸದ್ದಾಮ್ ಅಮೆರಿಕಾದ ವಿರುದ್ಧ ತಿರುಗಿ ಬಿದ್ದು, ಎಣ್ಣೆ ಬಾವಿಗಳನ್ನು ರಾಷ್ಟ್ರೀಕರಣ ಮಾಡುವ ಮೂಲಕ ಎರಡೇ ದಶಕದಲ್ಲಿ ಶ್ರೀಮಂತ ಸಾಹೇಬನಾಗಿಬಿಟ್ಟ. ಅಮೆರಿಕಾಕ್ಕೆ ಇದು ಮಗ್ಗಲು ಮುಳ್ಳಾಯಿತು. ತಾನೇ ನೆಟ್ಟು ಬೆಳೆಸಿದ ಮರಳುಗಾಡಿನ ಖರ್ಜೂರದ ಗಿಡ ತೈಲ ಹೀರಿ ಇಷ್ಟು ಬೃಹದಾಕಾರವಾಗಿ ಮುಳ್ಳಿಡಿದು ಬೆಳೆದರೆ ಅದು ಸಹಿಸುವುದೆ ? ಅಮೆರಿಕಾದ ನಿದ್ದೆ ಕೆಟ್ಟಿತು. ಹೀಗಿರುತ್ತ ಜಾರ್ಜ್ ಬುಷ್‌ನ ಅಧಿಕಾರಾವಧಿ ಮುಗಿದು, ಬಿಲ್ ಕ್ಲಿಂಟನ್ ಅಧ್ಯಕ್ಷನಾದ. ಅವನ ಕಾಲದಲ್ಲಿ ಅಂತರರಾಷ್ಟ್ರೀಯ ಸ್ನೇಹ-ಸೌಹಾರ್ದಗಳು ಅಷ್ಟಾಗಿ ಹದಗೆಡಲಿಲ್ಲ. ಕ್ಲಿಂಟನ್‌ನ ಎಂಟು ವರ್ಷಗಳ ಅವಧಿ ಮುಗಿದ ನಂತರ (ಈತ ಎರಡು ಅವಧಿಗಿದ್ದ) ಅವನ ಜಾಗಕ್ಕೆ ೨೦೦೦ದಲ್ಲಿ ಯುದ್ಧಕೋರ ಜಾರ್ಜ್ ಬುಷ್‌ನ ಮಗನಾದ ಜಾರ್ಜ್ ಡಬ್ಲ್ಯು ಬುಷ್ ಅಧಿಕಾರಕ್ಕೆ ಬಂದ. ಈತನೂ ಅಪ್ಪನಂತೆಯೇ ಯುದ್ಧಪ್ರಿಯ ವ್ಯಕ್ತಿ. ಯಾವತ್ತಿಗೂ ಸಾಮ್ರಾಜ್ಯಶಾಹಿಗಳು ಯುದ್ಧಕೋರರೇ ಆಗಿರುತ್ತಾರೆ. ಈತ ಅಧ್ಯಕ್ಷನಾದ ಮೇಲೆ ಒಂದಾದ ಮೇಲೊಂದು ಯುದ್ಧಗಳು ಜರುಗಿದವು. ಇಸ್ರೇಲಿನ ಬಗ್ಗೆ ಸದಾ ಮೃದು ಧೋರಣೆಯುಳ್ಳ ಅಮೆರಿಕಾದ ಕಾರಣದಿಂದಾಗಿ ಪ್ಯಾಲೆಸ್ತೇನ್ ಮತ್ತು ಇಸ್ರೇಲ್ ಕದನಗಳು ಮುಗಿಯುವಂತೆಯೇ ಇಲ್ಲ. ಆ ವಿಚಾರ ಹಾಗಿರಲಿ, ಆದರೆ ಅಮೆರಿಕಾವೇ ಬ್ರಿಟನ್ನಿನ ಸಹಯೋಗದೊಂದಿಗೆ ಎರಡು ಸ್ಟಾರ್‌ವಾರ್ ನಡೆಸಿ ಮುಖಭಂಗಕ್ಕೆ ಎಡೆಮಾಡಿಕೊಂಡಿತು. ಒಂದು ಆಫ್‌ಘಾನಿಸ್ಥಾನದಲ್ಲಿ, ಇನ್ನೊಂದು ಇರಾಕಿನಲ್ಲಿ. ಈ ಎರಡೂ ಯುದ್ಧಗಳು ಮುಸ್ಲಿಮ್ ಜನಾಂಗೀಯರ ಮಣ್ಣಿನಲ್ಲಿಯೇ ಸಂಭವಿಸಿ, ಅಲ್ಲಿ ರಕ್ತದ ಚಿತ್ತಾರ ಬರೆದದ್ದೂ, ಅದನ್ನು ಕಂಡೂ ಕೂಡ ಇತರ ಯೂರೋಪಿಯನ್ ದೇಶಗಳು ತೆಪ್ಪಗಿದ್ದದ್ದೂ ಆಶ್ಚರ್ಯ.

ಊರಗೌಡ ಏನು ಮಾಡಿದರೂ ಸರಿ – ಎಂಬಂತಾಯಿತು. ಅಮೆರಿಕಾ ತನ್ನ ಅಪಾರ ಸೈನ್ಯವನ್ನು ಸುಮ್ಮನೆ ಕೂರಿಸಿ ಅನ್ನ ಹಾಕುವಂತಿಲ್ಲ ತಾನೆ ? ಆದ್ದರಿಂದ ಸಾಧ್ಯವಾದಷ್ಟೂ ಅನ್ಯ ದೇಶಗಳ ಸಂಪನ್ಮೂಲಗಳನ್ನು ಕೊಳ್ಳೆಹೊಡೆಯಬೇಕಷ್ಟೆ! ಆದರೆ ಇದು ಮಧ್ಯ ಯುಗವಲ್ಲ. ಆದ್ದರಿಂದ ಅಧ್ಯಕ್ಷ ಬುಷ್ ''ಈ ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವವನ್ನು ಕಸಿಗೊಳಿಸಲಾಗುತ್ತದೆ'' ಎಂದು ಸಮಜಾಯಿಷಿ ಕೊಡುತ್ತ ಸಾಗಿದ. ಇಲ್ಲವಾದರೆ ಶಾಂತಿ ಸುಭಿಕ್ಷದಿಂದ ಒಂದು ದೇಶ ಇರುವಾಗ ಯುದ್ಧಗಳ ಅವಶ್ಯಕತೆಯಾದರೂ ಏನು ? ಕುರುಕ್ಷೇತ್ರ ಮುಗಿದು ಧರ್ಮರಾಯನು ಶಾಂತಿಯುತವಾಗಿ ರಾಜ್ಯವಾಳಿಕೊಂಡಿದ್ದ ಎಂಬ ಮಾತಿರುವಾಗ ಪುನಃ ಹಿಂಸೆಗೆ ಕಾರಣವಾದ ಅಶ್ವಮೇಧವನ್ನು ಯಾಕೆ ಕೈಗೊಂಡ ? ಇದಕ್ಕೆ ಜನಪರವಾದ ಸಮರ್ಥನೆ ಇಲ್ಲ. ಇದು ಪುರಾಣಯುಗದ ಮಾತು. ಆದರೆ ಆಧುನಿಕ ಯುಗದಲ್ಲೂ ಇಂಥ ಸಾಮ್ರಾಜ್ಯಶಾಹಿಗಳ ವರ್ತನೆಯಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ.

ಆಫ್‌ಘನ್ ಮತ್ತು ಇರಾಕ್ ಯುದ್ಧಗಳಿಂದ ಕಡೆಗೇನಾಯಿತು ? ಮೊದಲಿಗೆ ಒಸಾಮ ಬಿನ್ ಲಾಡೆನ್ ಎಂಬ ತಾಲಿಬಾನ್ ಮಾಯಾವಿ ಮನುಷ್ಯನೊಬ್ಬನ ಆದೇಶದಂತೆ ಆ ಉಗ್ರರು ಅಮೆರಿಕಾದ ವಿಶ್ವ ವಾಣಿಜ್ಯ ಕೇಂದ್ರದ ಅವಳಿ ಕಟ್ಟಡಗಳನ್ನು ಧ್ವಂಸ ಮಾಡಿದರು (೨೦೦೧). ಅವರ ವಿಧ್ವಂಸಕ ಸಂಚುಕೋರ ಆಫ್‌ಘನ್ ಗುಡ್ಡಗಳಲ್ಲಿ ಅವಿತುಕೊಂಡಿದ್ದಾನೆ ಎಂಬ ಬೇಹುಗಾರಿಕೆಯ ತಪ್ಪು ಮಾಹಿತಿಯ ಮೇಲೆ ಅಲ್ಲಿ

ಮಿಲಿಟರಿ ಕಾರ್ಯಾಚರಣೆ ಮಾಡಲಾಯಿತು. ಆದರೆ ಎಷ್ಟೇ ಮಿಸೈಲ್ ಸಿಡಿತಲೆಗಳನ್ನು ಹಾರಿಸಿ ಗುಡ್ಡಗಳನ್ನು ಸಿಡಿಸಿದರೂ ಆ ಅಧ್ವರ್ಯ ವ್ಯಕ್ತಿ ಲಾಡೆನ್ ಎಂಬ ಕಲಿಯನ್ನು ಮಾತ್ರ ಹಿಡಿಯಲಾಗಲಿಲ್ಲ. ಈಗಲೂ ಬದುಕಿರುವ ಸಾಧ್ಯತೆಗಳಿವೆ. ಆದರೆ ಇದಕ್ಕೂ ಮೊದಲು ರಷ್ಯಾದ ವಿರುದ್ಧ ತಾಲಿಬಾನ್ ಉಗ್ರರನ್ನು ಎತ್ತಿಕಟ್ಟಿ ಬೆಳೆಸಿದ್ದು ಅಮೆರಿಕಾವೇ ಎಂಬುದನ್ನು ಮರೆಯುವಂತಿಲ್ಲ.

ಎರಡನೆಯದಾಗಿ, ಯಥಾಪ್ರಕಾರ ಬ್ರಿಟನ್ನಿನ ಜೊತೆ ಸೇರಿ, ಬೇಹುಗಾರಿಕೆಯ ತಪ್ಪುಮಾಹಿತಿ ಮೇರೆಗೆ, ಅಮೆರಿಕಾ ಇರಾಕಿನ ಮೇಲೆ ಸೈನ್ಯ ನುಗ್ಗಿಸಿತು. ಇರಾಕಿನ ಅಧ್ಯಕ್ಷ ಸದ್ದಾಮನನ್ನು ಪದಚ್ಯುತಗೊಳಿಸಿ, ಗಲ್ಲಿಗೇರಿಸಿತು. ಆದರೂ ಅಲ್ಲಿನ್ನೂ ಪ್ರಜಾಪ್ರಭುತ್ವವನ್ನು ನೆಲೆಗೊಳಿಸುವ ಪ್ರಯತ್ನ ಸಫಲವಾಗಿಲ್ಲ. ಆದರೆ, ಒಂದು ಸಾರ್ವಭೌಮ ರಾಷ್ಟ್ರವಾಗಿದ್ದ ಇರಾಕಿನ ಯುಗಯಾತ್ರೀ ಸಾಂಸ್ಕೃತಿಕ ವೈಭವಕ್ಕೆ, ಅದರ ಆರ್ಥಿಕ-ಸಾಮಾಜಿಕ ಬೆಳವಣಿಗೆಗೆ ಇದರಿಂದ ಭಾರಿ ಹಾನಿಯಾಯಿತು. ವಿಶ್ವಸಂಸ್ಥೆ ನಿಯಮಾವಳಿ ಪ್ರಕಾರ ಅಮೆರಿಕಾ ಏಕಮುಖವಾದ ಅಧಿಕಾರ ಚಲಾಯಿಸಿ, ಇರಾಕಿನ ಮೇಲೆ ಯುದ್ಧಹೂಡಿ ಅಮಾಯಕ ಜನರ ಕಗ್ಗೊಲೆಗೆ ಕಾರಣವಾದುದಕ್ಕೆ ವಿಶ್ವರಾಷ್ಟ್ರಗಳು ಮೂಕ ಸಾಕ್ಷಿಯಾದವು. ಉಗ್ರರ ಉಪಟಳವನ್ನು ಮಟ್ಟಹಾಕಬೇಕಾದ್ದು ನಿಜವಾದರೂ ಅಮೆರಿಕಾದ ಸರ್ವಾಧಿಕಾರಿ ಧೋರಣೆ ಅಪಾಯಕಾರಿ ಎಂದು ಅಂತರರಾಷ್ಟ್ರೀಯ ರಾಜನೀತಿಜ್ಞರ ಅಭಿಪ್ರಾಯ. ಅದಕ್ಕೆ ಎಲ್ಲ ರಾಷ್ಟ್ರಗಳ, ಎಲ್ಲ ಸಮುದಾಯಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕಾದ್ದು ಅದರ ಕರ್ತವ್ಯವಾಗಬೇಕಿತ್ತು. ಇರಾಕಿನ ಪ್ರಯತ್ನವನ್ನು ಮರೆಮಾಚಲು ಇಷ್ಟೆಲ್ಲಾ ನೆಪ-ನಾಟಕ-ಯುದ್ಧ ಬೇಕಿತ್ತೆ ಎಂಬುದು ಪ್ರಶ್ನೆ. ಇದರಿಂದ ಸಾಧಿಸಿದ್ದೇನು ? ತನ್ನ ರಾಷ್ಟ್ರದ ಬೊಕ್ಕಸ ಬರಿದಾಯಿತು; ನೂರಾರು ಜನ ಯೋಧರು ಸಾವಿಗೀಡಾದರು; ಪ್ರಜೆಗಳಿಗೆ ತೆರಿಗೆ ಹೊರೆ ಬಿದ್ದಿತು. ಅತ್ತ ಯುದ್ಧ ಸಂಭವಿಸಿದ ದೇಶಗಳಂತೂ ಸ್ಮಶಾನ ಸದೃಶವಾಗಿ ಮಾನವ ಬಾಂಬ್‌ಗಳು ಇನ್ನೂ ಸಿಡಿಯುತ್ತಲೇ ಇವೆ.

ಇಂಥ ಸಂದರ್ಭದಲ್ಲೂ, ಯೂರೋಪಿಯನ್ ರಾಷ್ಟ್ರಗಳು ತಮ್ಮ ಎಂದಿನ ಪ್ರವಾಸೋದ್ಯಮ ಅಭಿವೃದ್ಧಿಯಲ್ಲಿ, ತೈಲ ಕಂಪನಿಗಳ ಕ್ಷೇಮ ಚಿಂತನೆಯಲ್ಲಿ ಮುಳುಗಿ ತೆಪ್ಪಗಿದ್ದಾರೆ; ಲ್ಯಾಟಿನ್ ಅಮೆರಿಕಾ ಹಾಗೂ ಆಫ್ರಿಕನ್ ದೇಶಗಳು ಆಂತರಿಕ ಕಲಹ, ಬಡತನ, ರೋಗ, ರುಜಿನಗಳಿಂದ ಹತ್ತಿ ಉರಿಯುತ್ತಿವೆ. ಇನ್ನು ಅರಬ್ಬ ದೇಶಗಳು ಎಣ್ಣೆ ವಹಿವಾಟಿನಲ್ಲಿ, ಲಾಭ ಗಳಿಸುವುದರಲ್ಲಿಯೇ ಮಗ್ನವಾಗಿವೆ. ಪಾಕಿಸ್ತಾನ, ಬಾಂಗ್ಲಾ ಮುಂತಾದುವುಗಳಲ್ಲಿ ರಾಜಕೀಯ ಅಸ್ಥಿರತೆ. ಭಾರತ ಹಲವು ಪಕ್ಷಗಳ ಸಮ್ಮಿಶ್ರ ಆಳ್ವಿಕೆಯಲ್ಲಿ ಕಾಲ ತಳ್ಳುತ್ತಿದ್ದರೆ, ಅಮೆರಿಕಾ ಮಾತ್ರ ಜಾಗತಿಕ ರಂಗದಲ್ಲಿ ಯಕ್ಷಗಾನದ ಪಾತ್ರ ಹಾಕಿ ಕುಣಿಯುತ್ತ ನಡೆದಿದೆ. ಹೀಗೆ ಸೋವಿಯತ್ ಒಕ್ಕೂಟ ಬೇರ್ಪಟ್ಟ ಮೇಲೆ ಅಮೆರಿಕಾ ನಡೆಸುತ್ತಿರುವ ಗೊಡ್ಡಾಟಗಳನ್ನೂ, ಉಳಿದ ರಾಷ್ಟ್ರಗಳ ಮೌನ ಸಮ್ಮತಿಯನ್ನೂ ದೂರ ನಿಂತು, ಚೈನಾ ವೀಕ್ಷಿಸುತ್ತಾ, ಒಳಗೊಳಗೇ ಗಟ್ಟಿಯಾಗುತ್ತಾ ಬೆಳೆದು ನಿಂತಿದೆ. ಅದರ ಭೌಗೋಳಿಕ ಮೇಲ್ಮೈ ಲಕ್ಷಣಗಳೂ ಅದಕ್ಕೆ ಸಹಕಾರಿಯಾಗಿವೆ.

ದಕ್ಷಿಣ-ಪೂರ್ವದಲ್ಲಿ ಸುತ್ತುವರಿದ ಸಮುದ್ರಗಳು; ಭಾರತದತ್ತ ಎತ್ತರ ನಿಂತಿರುವ ಹಿಮಾಲಯ ಪರ್ವತ ಶ್ರೇಣಿ; ಪಶ್ಚಿಮದಲ್ಲಿ ದಕ್ಷಿಣೋತ್ತರವಾಗಿ ಕಟ್ಟಿಕೊಂಡಿರುವ ಮಹಾಗೋಡೆ – ಇವುಗಳಿಂದ ಆವೃತವಾದ ಚೈನಾದ ವಿಸ್ತೀರ್ಣ ೯೫,೯೬,೯೬೧ ಚ.ಕಿ.ಮೀ.ಗಳು. ವಿಶ್ವದಲ್ಲಿ ಇದು ನಾಲ್ಕನೆಯ ದೊಡ್ಡ ದೇಶ. ಹ್ವಾಂಗ್ ಹೋ (ಹಳದಿ) ಎಂಬ ನದಿಯ ಕಾರಣದಿಂದ ಹಳದಿ ಚೈನಾ ಎಂಬ ಅನ್ವರ್ಥನಾಮ. ನೂರುಕೋಟಿಗೂ ಹೆಚ್ಚಾದ ಮಾನವ ಸಂಪನ್ಮೂಲ. ೧೯೫೯ರಲ್ಲಿ ಟಿಬೆಟನ್ನು ಅಂತರ್ಗತಗೊಳಿಸಿಕೊಂಡ ಚೀನಾ, ೧೯೬೨ರ ಇಂಡೋ-ಚೀನಾ ಯುದ್ಧದಲ್ಲಿ ಸಿಯಾಚಿನ್ ಪ್ರದೇಶದ ಸಾವಿರಾರು ಚದರ ಎಕರೆ ಭೂಪ್ರದೇಶವನ್ನು ಭಾರತದಿಂದ ಕಸಿದುಕೊಂಡಿತು. ಈಗ ಭಾರತ-ಚೀನಾ ಗಡಿ ಉದ್ದಕ್ಕೂ ಹೈಟೆಕ್ ಗ್ರ್ಯಾಂಡ್ ರಸ್ತೆಯನ್ನು ನಿರ್ಮಿಸಿಕೊಂಡು, ಟಿಬೆಟ್ಟಿನಲ್ಲಿ ಅತ್ಯಾಧುನಿಕ ಸೈನಿಕ ನೆಲೆಯನ್ನು ಸ್ಥಾಪಿಸಿಕೊಂಡಿದೆ.

ಇಷ್ಟು ಆಯಕಟ್ಟಿನ ಪ್ರದೇಶದಲ್ಲಿ ನೆಲೆಸಿರುವ ಚೀನೀಯರು ಪ್ರಾಚೀನಕಾಲದಿಂದಲೂ ತಮ್ಮ ತಂತ್ರಜ್ಞಾನಕ್ಕೆ ಪ್ರಸಿದ್ಧರು. ಒಂದು ಗುಂಡುಸೂಜಿ ಮೊದಲುಗೊಂಡು ಅತ್ಯಾಧುನಿಕ ಶಸ್ತ್ರಾಸ್ತ್ರಗಳ ತಯಾರಿಕೆಯಲ್ಲಿಯೂ ಅವರನ್ನು ಮೀರಿಸುವವರಿಲ್ಲ. ಇಂದಿನ ಮಾರುಕಟ್ಟೆ ಉದಾರೀಕರಣದ ಜಾಗತಿಕ ನೀತಿಯಿಂದಾಗಿ ಅವರ ವಸ್ತು ಪರಿಕರಗಳಿಗೆ ಅಪಾರ ಬೇಡಿಕೆ. ಇದರಿಂದ ವಿಶ್ವ ವಾಣಿಜ್ಯ ವಹಿವಾಟಿನಲ್ಲಿ ಅದಕ್ಕೆ ಸಿಂಹಪಾಲು. ಒಟ್ಟಾರೆ ಅಸೂಯೆಪಡುವಷ್ಟು ರೀತಿಯಲ್ಲಿ ಅದು ಅಭಿವೃದ್ಧಿ ಸಾಧಿಸುತ್ತಿದೆ. ಇತ್ತ ಅಮೆರಿಕಾದೊಂದಿಗೆ ಅಣು ಒಪ್ಪಂದವೊಂದಕ್ಕೆ ಸಹಿ ಹಾಕಲಿರುವ ಭಾರತದ ಪರಿಸ್ಥಿತಿಯಂತೂ ತೀರಾ ವಿಲಕ್ಷಣವಾಗಿದೆ. ಇಲ್ಲಿ ಗಗನ ಮುಟ್ಟುತ್ತಿರುವ ಬೆಲೆಗಳು, ರೈತರ ಆತ್ಮಹತ್ಯೆ, ಉಗ್ರರ ಭಯಂಕರ ಉಪಟಳ, ನಕ್ಸಲರ ಸಮಸ್ಯೆಗಳು, ನದಿ ಹಾಗೂ ಗಡಿ ಸಮಸ್ಯೆಗಳು – ಹೀಗೆ ಮನಮೋಹನ್ ಸಿಂಗ್ ನೇತೃತ್ವದ ಸಮ್ಮಿಶ್ರ ಸರ್ಕಾರ ತನ್ನ ಅವಧಿಯನ್ನು ಪೂರೈಸಲು ಸಾಕಷ್ಟು ಹೆಣಗುತ್ತಿದೆ. ಮಹಿಳಾ ಮೀಸಲಾತಿ ಬಿಲ್ಲನ್ನು ತಂದು ಮಾನ ಉಳಿಸಿಕೊಳ್ಳಲು ಒದ್ದಾಡುತ್ತಿದೆ ಈಗ.

ಇಂಥ ಹೊತ್ತಿನಲ್ಲಿ 'ಬುರುಡೆ ಬೋಳಿಸಿ ಮೇಲೆ ಕೆಂಡ ಸುರಿದರು' ಎಂಬಂತೆ ಚೀನಾದತ್ತಣಿಂದ ಅದು ರಹಸ್ಯವಾಗಿ ಪರಮಾಣು ಚಟುವಟಿಕೆಯಲ್ಲಿ ತೊಡಗಿಕೊಂಡಿದೆ ಎಂಬ ಸುದ್ದಿ ಮುಟ್ಟಿದೆ. ಉಪಗ್ರಹವೊಂದರಿಂದ ತೆಗೆಯಲಾದ ಅಸ್ಪಷ್ಟ ಚಿತ್ರಗಳನ್ನು 'ದಿ ಡೈಲಿ ಟೆಲಿಗ್ರಾಫ್' ಮುದ್ರಿಸಿದ್ದು, ಚೀನಾದ ಕಡಲತೀರದ ಬಂದರಿನ ಛಾಯಾಚಿತ್ರಗಳಿದ್ದು, ಅಲ್ಲಿ ಪರಮಾಣು ಶಸ್ತ್ರಾಸ್ತ್ರಗಳು ಮತ್ತು ಇಂಥ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಲಾಗಿರುವ ಜಲಾಂತರ್ಗಾಮಿ (ಸಬ್‌ಮೆರೀನ್) ಗಳು, ಏರ್‌ಕ್ರಾಫ್ಟ್ ಉಪಕರಣಗಳು – ಇತ್ಯಾದಿ ಕುರಿತ ಮಾಹಿತಿ ಹೊರಬಿದ್ದಿದೆ. ಹೀಗೆ ಚೀನಾವು ತನ್ನ ನೆರೆಯ ದೇಶಕ್ಕಿಂತ ಕೆಲವೇ ನೂರು ಮೈಲುಗಳ ಅಂತರದಲ್ಲಿ ಅತ್ಯಾಧುನಿಕ ಶಸ್ತ್ರಾಸ್ತ್ರಗಳ ಕೋಠಿಯೊಂದನ್ನು ಸಜ್ಜುಮಾಡಿ ಕೊಂಡಿರುವ ಬಗ್ಗೆ ಮಾಧ್ಯಮಗಳು ಛಾಯಾಚಿತ್ರ ಸಮೇತ ಬಹಿರಂಗ ಪಡಿಸಿವೆ (ಇಂಡಿಯನ್ ಎಕ್ಸ್‌ಪ್ರೆಸ್, ಮೇ ೧, ೨೦೦೮). ಅಲ್ಲದೆ ಬಂದರು ಕಟ್ಟೆ ಹಾಯ್ನಾನ್ ಇರುವ ಸ್ಥಳಕ್ಕೆ ಹೊಂದಿಕೊಂಡಂತೆ ಇರುವ ಸುರಂಗಗಳ ಬಗ್ಗೆ ಕೂಡ ಮಾಹಿತಿಗಳಿವೆ. ಜಾಗತಿಕ ಸೇನಾ ವಿಶ್ಲೇಷಣಾಕಾರರ ಪ್ರಕಾರ 'ಚೀನಾದೇಶವು ತನ್ನ ಸೈನಿಕ ನೆಲೆಗಳನ್ನು ಅತ್ಯಂತ ವೇಗದಲ್ಲಿ ಅತ್ಯಾಧುನಿಕಗೊಳಿಸುತ್ತಾ ಸಾಗುತ್ತಿದೆ. ಪ್ರಸ್ತುತ ಒಲಿಂಪಿಕ್ಸ್ ಕ್ರೀಡೆಗಳ ಕಾರಣದಿಂದ ಅವುಗಳನ್ನೆಲ್ಲಾ ನಿಗೂಢವಾಗಿಯೇ ನಿರ್ವಹಿಸುತ್ತಿರಬೇಕು' ಎನ್ನಲಾಗಿದೆ. ನಿಜ, ಬಹುಶಃ ಒಲಿಂಪಿಕ್ಸ್ ಕ್ರೀಡೆಗಳ ಸುಕ್ಷೇಮ ಕಾಳಜಿಯಿಂದಲೇ ಸುದ್ದಿಮಾಧ್ಯಮಗಳು ಇಲ್ಲಿ ಅನ್ವೇಷಣೆಗೆ ತೊಡಗಿರಬೇಕು; ಆ ಸಂದರ್ಭದಲ್ಲಿ ಅದರ ಪರಮಾಣು ಚಟುವಟಿಕೆ ರಹಸ್ಯ ಬೆಳಕಿಗೆ ಬಂದಿರ ಬಹುದು. ಈ ಬಗ್ಗೆ ವಿಶ್ವಸಂಸ್ಥೆ ಇನ್ನೂ ಪ್ರತಿಕ್ರಿಯಿಸಿಲ್ಲ. ಆದರೆ 'ಕಳ್ಳ ಎಂದರೆ ತನ್ನ ಹೆಗಲ ಮುಟ್ಟಿ ನೋಡಿಕೊಂಡ' ಎಂಬಂತೆ ಅಮೆರಿಕಾದ ಅಧ್ಯಕ್ಷ ಬುಷ್ ಮಾತ್ರ ತರಾತುರಿಯಲ್ಲಿ ವಿಶ್ವಾದ್ಯಂತ ಪ್ರಜಾಸತ್ತೆ ಮೌಲ್ಯ



ಕಾಪಾಡಲು ಕ್ರಮ ತೆಗೆದುಕೊಳ್ಳಬೇಕೆಂದೂ, ಇನ್ನೊಮ್ಮೆ ಪ್ರಸ್ತುತ ವಿಶ್ವದ ಆಹಾರ ಬಿಕ್ಕಟ್ಟು ಹಾಗೂ ತೈಲ ಬೆಲೆ ಏರಿಕೆಗಳಿಗೆ ಭಾರತ ಮತ್ತು ಚೀನಾ ದೇಶಗಳೆ ಹೊಣೆಯೆಂದೂ ಅರ್ಥವಿಲ್ಲದೆ ದೂರಿದ್ದಾನೆ. ಆದರೆ ವಿಶ್ವ ಮಾರುಕಟ್ಟೆಗೆ ಬರುತ್ತಿರುವ ಆಹಾರ ಧಾನ್ಯದ ಬಹುಭಾಗ 'ಇಥೆನಾಲ್' ಎಂಬ ಜೈವಿಕ ಇಂಧನ ಉತ್ಪಾದನೆಗಾಗಿ ಹೋಗುವ ಕಾರಣದಿಂದಾಗಿ ವಿಶ್ವ ಆಹಾರ ಬಿಕ್ಕಟ್ಟು ಉದ್ಭವಿಸಿದೆ. ಹಾಗೆಯೇ ಇಂಧನ ಸುಡುವುದರಲ್ಲಿ ಪಾಶ್ಚಾತ್ಯರಿಗಿಂತ ಭಾರತ-ಚೀನಾ ಮುಂದಿಲ್ಲವೆಂಬ ಸರಳ ಸಂಗತಿ ಆತನಿಗೆ ಹೊಳೆಯುತ್ತಿಲ್ಲ ಯಾಕೆ? ಅಥವಾ ಅದನ್ನು ಮರೆಮಾಚಲು ಈ ಮಾತಿರಬೇಕು. ಯಾಕೆಂದರೆ ಇದೇ ವ್ಯಕ್ತಿ ಈಚೆಗೆ ಭಾರತಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ 'ನೀವು ಭತ್ತ ಬೆಳೆಯುವುದನ್ನು ನಿಲ್ಲಿಸಿ, ಭತ್ತದ ಗದ್ದೆಗಳಿಂದ ಹೊರಹೊಮ್ಮುವ ಇಂಗಾಲಾಮ್ಲ ಕಾರಣದಿಂದ ಓಝೋನ್ ಪದರದಲ್ಲಿ ಬಿರುಕುಗಳು ಹೆಚ್ಚಾಗಿ ಭೂಮಿಯ ತಾಪಮಾನ ಏರುತ್ತದೆ' ಎಂದು ಅಪ್ಪಣೆ ಕೊಡಿಸಿದ್ದು, ಆ ಮಾತುಗಳೆಲ್ಲ ಈಗ ಮರೆತುಹೋದುವೆ? ಅಥವಾ ಭಾರತ, ಚೀನಾಗಳ ಮೇಲೆ ಗೂಬೆಕೂರಿಸುವ ಇನ್ನೊಂದು ಪರಿಯೇ?

ಚೀನಾ ಪರಮಾಣು ಚಟುವಟಿಕೆಯಲ್ಲಿ ರಹಸ್ಯವಾಗಿ ತೊಡಗಿಕೊಂಡಿದೆ – ಎಂಬ ಸುದ್ದಿ ಹೊರಬಿದ್ದ ಬೆನ್ನಲ್ಲಿಯೇ ಬುಷ್ ಹೀಗೆ ಪ್ರತಿಕ್ರಿಯಿಸಿದ್ದು, ಆತನ ಇಬ್ಬಂದಿ ನೀತಿಗೆ ಬೇರೆ ಸಾಕ್ಷಿ ಬೇಕಿಲ್ಲ. ತಾನೊಬ್ಬನೆ ಸಾಮ್ರಾಟನೆಂದು ಮೆರೆಯುತ್ತಿದ್ದ ಕಾಡಿಗೆ, ತನ್ನಷ್ಟೇ ಬಲಶಾಲಿ ಇನ್ನೊಂದು ಸಿಂಹ ಒಳನುಗ್ಗಲು ಸಮಯ-ಸಂಚು ಕಾಯುತ್ತಿದೆ ಎಂಬ ವಾಸನೆ ಬಡಿದಾಗ ಆ ಸಿಂಹರಾಜನಿಗೆ ನೆಮ್ಮದಿಯ ನಿದ್ದೆ ಬರಲುಂಟೆ? ಹಾಗಾಗಿದೆ ಬುಷ್‌ನ ಪರಿಸ್ಥಿತಿ.

ಇದೇನೇ ಇರಲಿ, ಭಾರತಕ್ಕೂ ಇದರಿಂದ ನೆಮ್ಮದಿ ಇಲ್ಲ. ಎರಡೂ ಶಕ್ತಿ ರಾಷ್ಟ್ರಗಳ ನಡುವೆ ಸಿಕ್ಕಿದ ಇದರ ಸ್ಥಿತಿ 'ಕೋಣನೆರಡುಂ ಹೋರೆ ಗಿಡುವಿಂಗೆ ಮೃತ್ಯು' ಎಂಬಂತಾಗಬಹುದು. ಯಾಕೆಂದರೆ ಹಿಂದೆ ದಲಾಯಿಲಾಮ (ಬೌದ್ಧಗುರು) ಇಲ್ಲಿ ಬಂದು ಆಶ್ರಯ (೧೯೫೯) ಪಡೆದ ಲಾಗಾಯ್ತು ಚೀನಾ ಭಾರತದ ಮೇಲೆ ಒಂದು ಕಣ್ಣಿಟ್ಟೇ ಇದೆ. ೧೯೬೨ರಲ್ಲಿ ಇಂಡೋ-ಚೀನಾ ಭಾಯಿ-ಭಾಯಿ ಎಂದು ಹೇಳುತ್ತ ಸ್ನೇಹಹಸ್ತ ಚಾಚಿದ್ದ ನೆಹರೂ ಬೆನ್ನಲ್ಲಿ ಇರಿದದ್ದು ಇದೇ ಚೀನಾ. ಈಗ ಟಿಬೆಟ್ಟಿನ ಉತ್ತರದ ಪ್ರಸ್ಥಭೂಮಿಯ ಮೇಲಿನಿಂದ ಅದು ಏನಾದರೂ ಕ್ಷಿಪಣಿಗಳನ್ನು ತೂರಿಬಿಟ್ಟಿತೊ, ಅವು ದಖಿನ್ ಪ್ರಸ್ಥಭೂಮಿಯವರೆಗೂ ಹಾರಿಬಂದು ಸಿಡಿಯುವುದರಲ್ಲಿ ಸಂಶಯವಿಲ್ಲ. ಅಂತೂ ಚೀಣಾದ ರಹಸ್ಯ ಪರಮಾಣು ಚಟುವಟಿಕೆ ಕಾರಣ ಅಂತರರಾಷ್ಟ್ರೀಯ ಸಮುದಾಯಗಳಲ್ಲಿ ಹೊಸ ಬಗೆಯ ಒಡಂಬಡಿಕೆಗಳು ಹುಟ್ಟಿಕೊಳ್ಳಲೂ ಬಹುದು. ಸದ್ಯ ಅದರ ವರ್ತನೆ, ಇದೇನು ಶಕ್ತಿ ಸಮತೋಲನವೋ ಅಥವಾ ಇನ್ನೊಂದು ಸಾಮ್ರಾಜ್ಯಶಾಹಿಯ ಉದಯವೋ, ಎಂಬ ಆತಂಕಕ್ಕೆ ಎಡೆಮಾಡಿ ಕೊಡುತ್ತಿದೆ. ಕಾಲವೇ ಇದನ್ನು ಇತ್ಯರ್ಥ ಮಾಡಬೇಕು.

**ಪ್ರೊ|| ಶಿವರಾಮಯ್ಯ**
ನಂ. ೧೭೨, ಐಸೆಕ್ ರೋಡ್, ಟೀಚರ್ಸ್ ಕಾಲೋನಿ
ನಾಗರಬಾವಿ, ಬೆಂಗಳೂರು - ೭೨




ಸೂರ್ಯ ಮುಳುಗುವ
ಮತ್ತೆ ಹುಟ್ಟುವ
ನಾಡಿನವರು ನಾವು
ಮುಳುಗಿ ಹುಟ್ಟುವ
ಹೊಸ ಜನ್ಮಕ್ಕೆ
ಎಷ್ಟೊಂದು ಇರುಳಿನಲ್ಲಿ
ಮೀಯಬೇಕು!

ಮೌನ-ವಿರಹ
ಇವೆಲ್ಲ ಪದಗಳು
ಈ ನೋವಿಗೆ
ಬೇರೆ ಬೇರೆ ಅರ್ಥಗಳು
ಕುಟುಕಿ ಕುಟುಕಿ
ಕೊಂದು ಬಿಡದೆ
ಪ್ರಾಣವಿನ್ನೂ ಉಳಿದು
ಅಚ್ಚರಿ ಹುಟ್ಟಿಸುತ್ತದೆ

ಈ ಇರುಳು
ಕಣ್ಣು ಮುಚ್ಚಿ
ಬೆಳಗಾಗಬಹುದೇ?
ಎಂಬ ಸಂಶಯ
ಹರಿದ ಬೆಳಕನ್ನು
ನೋಡಿದಾಗ ಮಾತ್ರ
ಮಾಯವಾಗಿಬಿಡುತ್ತದೆ
ಮತ್ತೊಂದು ನೋವಿಗೆ
ಸಜ್ಜಾಗುತ್ತದೆ
ಹೊಸತಿನ ಆರಂಭ!

**ಜ್ಯೋತಿ ಗುರುಪ್ರಸಾದ್**
'ಕಾವೇರಿ', ತೆಳ್ಳಾರು ರಸ್ತೆ, ೧೬ನೇ ತಿರುವು,
ಕಾರ್ಕಳ - ೫೭೪೧೦೪

# ಕರ್ನಾಟಕದ ಕಂಬಳಿ ನೇಯುವ ಕಸುಬುದಾರರ ದುಃಸ್ಥಿತಿ

ಕಂಬಳಿ ನೇಯುವ ಕಸುಬುದಾರರ ಧಾರಣಾ ಸಾಮರ್ಥ್ಯ ಸೀಮಿತವಾದುದು. ಅವರು ಬಡತನದ, ಅನಕ್ಷರತೆಯ, ಆಹಾರ ಅಭದ್ರತೆಯ ಕೂಪದಲ್ಲಿ ನರಳುತ್ತಿದ್ದಾರೆ. ಅನೇಕ ಬಗೆಯ ಅಸ್ವಾತಂತ್ರ್ಯಗಳಲ್ಲಿ ಕಂಬಳಿ ನೇಯುವವರು ಸಿಲುಕಿಕೊಂಡುಬಿಟ್ಟಿದ್ದಾರೆ. ಜನರು ಪಾರಂಪರಿಕವಾಗಿ ಕಂಬಳಿ ನೇಯುತ್ತಿದ್ದಾರೆ. ಆದರೆ ಇದರಿಂದ ಅವರ ಬದುಕು ಏನಾಗಿದೆ ? ಕಂಬಳಿ ನೇಯುವ ಕಸುಬುದಾರರು ತಾವು ಉತ್ಪಾದನೆ ಮಾಡುವ ಕಂಬಳಿಗಳನ್ನು ಮಾರಿ ಅವರು ಪಡೆಯುತ್ತಿರುವ ಉತ್ಪತ್ತಿ ತೀವ್ರ ಕಡಿಮೆ. ಕಂಬಳಿ ನೇಯುವ ಕಸುಬುದಾರರ ಹಕ್ಕುದಾರಿಕೆಯ ವಿನಿಮಯ ಮೌಲ್ಯವು ತುಂಬಾ ಕಡಿಮೆ. ಏಕೆಂದರೆ, ಕಂಬಳಿಯು ಇಂದು ಮಾರುಕಟ್ಟೆಯನ್ನು ಕಳೆದುಕೊಳ್ಳುತ್ತಿದೆ. ಅದರ ಪೈಪೋಟಿ ಸಾಮರ್ಥ್ಯವು ಕಡಿಮೆ. ಕಂಬಳಿಗೆ ಪರ್ಯಾಯವಾದ ಸರಕುಗಳು ಮಾರುಕಟ್ಟೆಗೆ ಬಂದಿವೆ.

ಡಾ|| ಟಿ. ಆರ್. ಚಂದ್ರಶೇಖರ



ಪ್ರಸ್ತಾವನೆ

ಡಾ|| ಜಿ. ಎನ್. ಮಲ್ಲಿಕಾರ್ಜುನಪ್ಪ ನಮ್ಮ ನಡುವೆ ಇರುವ ಒಬ್ಬ ಸೃಜನಶೀಲ, ಸಮಾಜ ವಿಜ್ಞಾನಿಯಾಗಿದ್ದಾರೆ. ಅವರು ವಾಸ್ತವವಾಗಿ ವಾಣಿಜ್ಯಶಾಸ್ತ್ರದ ವಿದ್ಯಾರ್ಥಿ. ಆದರೆ ಅವರು ಅಭಿವೃದ್ಧಿ ಕುರಿತಂತೆ ಜನಪರವಾಗಿ ಚಿಂತಿಸುವ ವಿದ್ವಾಂಸರಾಗಿದ್ದಾರೆ. ಈ ಬಗ್ಗೆ ಅವರು 'ಬೋಧಿ ವೃಕ್ಷದ ಕೆಳಗೆ' (೧೯೯೮) ಮತ್ತು 'ಬೆಳಗಿನ ಬೆಡಗು' (೨೦೦೪) ಎಂಬ ಎರಡು ಅಭಿವೃದ್ಧಿ ಕುರಿತ ಪ್ರಬಂಧಗಳ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಈಗ ಇವರು ಪಿಎಚ್.ಡಿ.ಗಾಗಿ ಅಧ್ಯಯನ ನಡೆಸಿದ ಕರ್ನಾಟಕದ ಉಣ್ಣೇ ಕೈಮಗ್ಗದ ಕೈಗಾರಿಕೆ ಕುರಿತ ಮಹಾಪ್ರಬಂಧವನ್ನು ಪರಿಷ್ಕರಿಸಿ 'ಗ್ರಾಮೀಣ ಕ್ಷೇತ್ರದ ಮೇಲೆ ಜಾಗತೀಕರಣದ ಪರಿಣಾಮ'ವೆಂಬ ಪುಸ್ತಕವನ್ನು ಇಂಗ್ಲಿಷ್‌ನಲ್ಲಿ ಪ್ರಕಟಿಸಿದ್ದಾರೆ. (ಡಾ|| ಜಿ. ಎನ್. ಮಲ್ಲಿಕಾರ್ಜುನಪ್ಪ, ೨೦೦೭; 'ಇಂಪ್ಯಾಕ್ಟ್ ಆಫ್ ಗ್ಲೋಬಲೈಸೇಶನ್ ಆನ್ ರೂರಲ್ ಸೆಕ್ಟರ್: ಎ ಸ್ಟಡಿ ಆಫ್ ವುಲನ್ ಹ್ಯಾಂಡ್‌ಲೂಮ್ ಇಂಡಸ್ಟ್ರೀ ಇನ್ ಕರ್ನಾಟಕ', ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ - ೫೭೭೫೩೧).

ಅಮರ್ತ್ಯ ಸೇನ್ ತನ್ನ ಇತ್ತೀಚಿನ ಕೃತಿ 'ಡೆವಲಪ್‌ಮೆಂಟ್ ಆಫ್ ಫ್ರೀಡಮ್' ಎಂಬ ಕೃತಿಯ ಮುನ್ನುಡಿಯಲ್ಲಿ ನಾವು ಇಂದು ಸಮೃದ್ಧಿ-ದುಃಸ್ಥಿತಿ ಎರಡೂ ಸಂಗತಿಗಳನ್ನು ಏಕಕಾಲದಲ್ಲಿ ಬದುಕುತ್ತಿರುವ ವೈರುಧ್ಯದ ಬಗ್ಗೆ ಬರೆಯುತ್ತಾರೆ. ಅಪರಿಮಿತವಾದ ಸಂಪತ್ತು-ಸಮೃದ್ಧಿ ಒಂದು ಕಡೆ. ಅದೇ ಸಮಯದಲ್ಲಿ ಅಗಾಧವಾದ ದುಃಸ್ಥಿತಿ-ದುರ್‌ವ್ಯವಸ್ಥೆ-ಶೋಷಣೆ ಇನ್ನೊಂದು ಕಡೆ. ಎರಡೂ ಜಗತ್ತಿನಲ್ಲಿ ಏಕಕಾಲದಲ್ಲಿ ನಾವು ಬದುಕುತ್ತಿದ್ದೇವೆ.

ಮಲ್ಲಿಕಾರ್ಜುನಪ್ಪ ಅವರ ಕೃತಿಯು ಸಮೃದ್ಧಿಯ ಬಗ್ಗೆ ಮಾತನಾಡುವುದಿಲ್ಲ. ಪ್ರಚಂಡ ಯಶಸ್ಸನ್ನು ಸಾಧಿಸುತ್ತಿರುವ ಉದ್ಯಮಿಗಳ ಬಗ್ಗೆ ಅಲ್ಲಿ ಚರ್ಚೆ ನಡೆದಿಲ್ಲ. ದುಃಸ್ಥಿತಿ-ದುರ್‌ವ್ಯವಸ್ಥೆಯಲ್ಲಿ ಸಿಲುಕಿರುವ ಕಂಬಳಿ ನೇಯುವ ಕಸುಬುದಾರರ ಸ್ಥಿತಿಗತಿಯ ಬಗ್ಗೆ ಇಲ್ಲಿ ಬೆಳಕು ಚೆಲ್ಲಿದ್ದಾರೆ.

ಎಂ. ಎನ್. ಶ್ರೀನಿವಾಸ ಅವರು ಇಪ್ಪತ್ತನೆಯ ಶತಮಾನದಲ್ಲಿ ಭಾರತವು ಕಂಡ-ಅನುಭವಿಸಿದ ಮಹತ್ವವಾದ ಸಾಮಾಜಿಕ ಪರಿವರ್ತನೆಯೆಂದರೆ 'ಜಾತಿ ಮತ್ತು ಕಸುಬು'ಗಳ ನಡುವೆ ಸಂಬಂಧ ಮುರಿದುಬಿದ್ದದ್ದೆಂದು ಹೇಳಿದ್ದಾರೆ. ಮತ್ತೊಬ್ಬ ಸಮಾಜ ವಿಜ್ಞಾನಿ ಕರ್ನಾಟಕದ ಸಂದರ್ಭದಲ್ಲಿ ಜಾತಿಯೆಂಬುದು ಇಂದು ಶ್ರೇಣೀಕರಣದ ಸೂಚಿಯಾಗಿ ಉಳಿದಿಲ್ಲ; ಅದು ಕೇವಲ ಐಡೆಂಟಿಟಿಯ ಸೂಚಿಯಾಗುಳಿದಿದೆ ಎನ್ನುವ ಪ್ರಮೇಯವನ್ನು ಮಂಡಿಸುತ್ತಿದ್ದಾರೆ (ಜೇಮ್ಸ್ ಮೇನರ್). ಇವೆರಡೂ ಪ್ರಮೇಯಗಳಿಗೆ ಸವಾಲಾಗಿ ಇಲ್ಲಿನ ಕೃತಿ ನಿಲ್ಲುತ್ತದೆ. ಪ್ರಸ್ತುತ ಪ್ರಬಂಧದಲ್ಲಿ ಇಂತಹ ಪ್ರಮೇಯಗಳನ್ನು ಮಲ್ಲಿಕಾರ್ಜುನಪ್ಪ ಅವರ ಅಧ್ಯಯನದ ಹಿನ್ನೆಲೆಯಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

ಭಾಗ -೧

ಜಾಗತೀಕರಣದ ಮಹಾಪೂರದಲ್ಲಿ ಸಮಾಜದ ಅಂಚಿನಲ್ಲಿ ಬದುಕು ದೂಡುತ್ತಿರುವವರ ಅಳಲನ್ನು - ಬವಣೆಯನ್ನು ಕೇಳುವವರಿಲ್ಲದಂತಾಗಿಬಿಟ್ಟಿದೆ. ನಮ್ಮ ಗ್ರಾಮೀಣ ಪ್ರದೇಶದ ಕರಕುಶಲ ಕೆಲಸಗಾರರ ಬದುಕನ್ನು ಜಾಗತೀಕರಣವು ಆಪೋಶನ ತೆಗೆದುಕೊಳ್ಳುತ್ತಿದೆ. ಪ್ರಸ್ತುತ ಅಧ್ಯಯನದ ವಿಷಯ ವಸ್ತುವಾದ ಕಂಬಳಿ ನೇಯುವ ಕಸುಬುದಾರರ ಬದುಕು ಇಂದು ವಿನಾಶದ ಅಂಚಿನ ಕಡೆ ಸಾಗುತ್ತಿದೆ. ಅದನ್ನು ಅವಲಂಬಿಸಿಕೊಂಡಿರುವ ನೂರಾರು ಕುಟುಂಬಗಳು ಕರ್ನಾಟಕದಲ್ಲಿವೆ. ಕೊಪ್ಪಳ ಜಿಲ್ಲೆಯ ಒಂದು ಊರಿನಲ್ಲಿ ಕ್ಷೇತ್ರಕಾರ್ಯ ಮಾಡುವಾಗ ಸುಮಾರು ೨೦೦ ಕುಟುಂಬಗಳು ಕೌದಿ ಹೊಲಿಯುವ ಕಸುಬನ್ನು ಅವಲಂಬಿಸಿಕೊಂಡಿದ್ದುದು ಕಂಡುಬಂತು. ಅವರೆಲ್ಲರೂ ಒಂದೇ ಜಾತಿಗೆ ಸೇರಿದವರಾಗಿದ್ದರು. ನಮ್ಮ ಸಮಾಜದ ಶೇ. ೮೦ರಿಂದ ಶೇ. ೮೫ರಷ್ಟು ಜನರಿಗೆ ಜಾತಿ ಮತ್ತು ಕಸುಬು ಪರಸ್ಪರ ಅವಲಂಬಿಸಿಕೊಂಡಿರುವ ಸಂಗತಿಗಳಾಗಿವೆ. ಜಾತಿಯು ಶ್ರೇಣೀಕರಣದ ಆಕರವಾಗಿ ಮುಂದುವರಿದಿದೆ. ಎಂ. ಎನ್. ಶ್ರೀನಿವಾಸ್ ಮತ್ತು ಜೇಮ್ಸ್ ಮೇನರ್ ಹೇಳುವ ಸಂಗತಿಗಳು, ಬಾರ್ಬರಾ ಹಾರಿಸ್ ವೈಟ್ ತನ್ನ ಕೃತಿ 'ಇಂಡಿಯಾ ವರ್ಕಿಂಗ್'ನಲ್ಲಿ ಹೇಳಿರುವ ಶೇ. ೧೫ರಷ್ಟು ಉನ್ನತ ವರ್ಗಗಳಿಗೆ ಅನ್ವಯವಾಗಬಹುದು. ಅದಕ್ಕೇ ಹೇಳಿದ್ದು, ನಾವು ಎರಡು ಜಗತ್ತಿನಲ್ಲಿ ಬದುಕುತ್ತಿದ್ದೇವೆ : ಒಂದು ಉಳ್ಳವರದ್ದಾದರೆ, ಇನ್ನೊಂದು ಉಳಿದವರದ್ದು.

ಜಿ. ಎನ್. ಮಲ್ಲಿಕಾರ್ಜುನಪ್ಪ ಅವರು ತಮ್ಮ ಅಧ್ಯಯನ ವಸ್ತುವಾದ ಕಂಬಳಿ ನೇಯುವ ಕಸುಬುದಾರರ ಬಗ್ಗೆ ಅಪಾರ ಮಾಹಿತಿ ಸಂಗ್ರಹಿಸಿದ್ದಾರೆ. ಮೂರು ಜಿಲ್ಲೆಗಳ ೧೭ ಹಳ್ಳಿಗಳಲ್ಲಿ ಹರಡಿಕೊಂಡಿರುವ ೩೦೦ ಕಂಬಳಿ ನೇಯುವ ಕಸುಬುದಾರ

ಕುಟುಂಬಗಳನ್ನು ಇವರು ಭೇಟಿ ಮಾಡಿ ಕ್ಷೇತ್ರಕಾರ್ಯ ನಡೆಸಿದ್ದಾರೆ. ಹೇಗೆ ಉಣ್ಣೆ ಕೈಮಗ್ಗದ ಕೈಗಾರಿಕೆ ಇಂದು ಸ್ಥಗಿತಗೊಂಡುಬಿಟ್ಟಿದೆ ಎಂಬುದನ್ನು ವಿವರವಾಗಿ ಇಲ್ಲಿ ದಾಖಲಿಸಿದ್ದಾರೆ. ಇಲ್ಲಿನ ಕಂಬಳಿ ನೇಯುವ ಕಸುಬು ದಾರರೆಲ್ಲರೂ ಒಂದೇ ಕೋಮಿಗೆ ಸೇರಿದವರು. ಇವರ ನಮೂನೆಯ ೩೦೦ ಕುಟುಂಬಗಳಲ್ಲಿ ಓದು-ಬರಹ ಬಲ್ಲ ಕುಟುಂಬಗಳ ಸಂಖ್ಯೆ ಕೇವಲ ನಾಲ್ಕು. ಈ ನಾಲ್ಕು ಕುಟುಂಬಗಳು ಮಾತ್ರ ತಮ್ಮ ವೃತ್ತಿಯಲ್ಲಿ ಯಶಸ್ಸನ್ನು ಕಾಣುತ್ತಿವೆ. ಇವರ ನಮೂನೆಯಲ್ಲಿನ ಬಹುಪಾಲು ಕುಟುಂಬಗಳ ಸದಸ್ಯರೆಲ್ಲ ಅನಕ್ಷರಸ್ಥರು. ಅವರೆಲ್ಲ ಗ್ರಾಮೀಣ ವಾಸಿಗಳು. ಅವರ ಕಸುಬಿಗೆ ಅಪಾರ ಬಂಡವಾಳ ಬೇಡ. ಈ ಬಗೆಯ ಕಸುಬುದಾರರ ಸರಕುಗಳ ಮಾರುಕಟ್ಟೆ ಅಕ್ಷರಶಃ ಕಣ್ಮರೆಯಾಗುತ್ತಿದೆ.

ತಲೆಯ ಮೇಲೆ ಹೊತ್ತುಕೊಂಡು ಮಾರಾಟ ಮಾಡುವವರು, ನೂಕುವ ಗಾಡಿಯಲ್ಲಿ ವ್ಯಾಪಾರ ಮಾಡುವವರು, ಸಂತೆಗಳಿಗೆ ಹೋಗಿ ವಹಿವಾಟು ನಡೆಸುವವರು, ಸೈಕಲ್ಲುಗಳಲ್ಲಿ ಹಳ್ಳಿಗಳಿಗೆ ಹೋಗಿ ಮಾರಾಟ ನಡೆಸುವವರು – ಹೀಗೆ ನೂರಾರು ವ್ಯಾಪಾರಿ ಕುಟುಂಬಗಳು ನಮ್ಮ ಸಂದರ್ಭದಲ್ಲಿದ್ದವು. ಇಂತಹ ಸ್ಥಳೀಯ ಮಾರುಕಟ್ಟೆಯ ವಿಶಾಲ ಜಾಲವೇ ಇತ್ತು. ಇಂದು ಇಂತಹ ಮಾರುಕಟ್ಟೆ ಜಾಲವು ಬಹುರಾಷ್ಟ್ರೀಯ ಕಂಪನಿಗಳ ಎದುರಿಗೆ, ಮಾಲ್‌ಗಳ ವೈಭವಕ್ಕೆ ಹೇಳ ಹೆಸರಿಲ್ಲದಂತಾಗುತ್ತಿವೆ. ಅದನ್ನು ನಂಬಿಕೊಂಡಿದ್ದ ಜನರು ಅದರಲ್ಲೂ ಮಹಿಳೆಯರು ಇಂದು ಬೀದಿಗೆ ಬಿದ್ದಿದ್ದಾರೆ. ರಿಟೈಲ್ ಟ್ರೇಡ್ ಅಪಾಯ ಎದುರಿಸುತ್ತಿದೆ. ಕಂಬಳಿ ಮಾರುಕಟ್ಟೆಯೂ ವಿನಾಶದ ಅಂಚು ತಲುಪಿಬಿಟ್ಟಿದೆ.

### ಭಾಗ- ೨

ಅಮರ್ತ್ಯ ಸೇನ್ ಅರ್ಥಶಾಸ್ತ್ರವನ್ನು ಮತ್ತು ಅಭಿವೃದ್ಧಿಯನ್ನು ಜನರ ನೆಲೆಯಿಂದ ಪರಿಭಾವಿಸಿ ಕೊಳ್ಳುತ್ತಾರೆ:

''ಸರಕು-ಸಾಮಗ್ರಿ-ಸೇವೆಗಳು ಮತ್ತು ಜನರು – ಇವರ ನಡುವಿನ ಸಂಬಂಧದ ಜಗತ್ತಿಗೆ ಅನೇಕ ಅರ್ಥಶಾಸ್ತ್ರದ ಸಂಗತಿಗಳು ಸೇರುತ್ತವೆ. ಸರಕು-ಸಾಮಗ್ರಿ-ಸೇವೆಗಳ ಉತ್ಪಾದನೆಗೆ ವ್ಯವಸ್ಥೆಯನ್ನು ಜನರು ಹೇಗೆ ಮಾಡಿಕೊಳ್ಳುತ್ತಾರೆ, ಅವುಗಳ ಮೇಲೆ ಜನರು ತಮ್ಮ ಹಕ್ಕುದಾರಿಕೆಯನ್ನು ಹೇಗೆ ಸ್ಥಾಪಿಸುತ್ತಾರೆ, ಅವುಗಳನ್ನು ಜನರು ಏನು ಮಾಡುತ್ತಾರೆ ಮತ್ತು ಅವುಗಳಿಂದ ಜನರು ಏನನ್ನು ಪಡೆಯುತ್ತಾರೆ ಎಂಬ ಸಂಗತಿಗಳ ಅಧ್ಯಯನವೇ ಅರ್ಥಶಾಸ್ತ್ರ''

ಇಲ್ಲಿ ಮುಖ್ಯವಾದುದು ಸಂಪತ್ತಲ್ಲ, ಇಲ್ಲಿ ಮುಖ್ಯವಾದುದು ಜನರು. ಇಲ್ಲಿ ಮುಖ್ಯವಾದುದು ಜನರ ಹಕ್ಕುದಾರಿಕೆ. ಅವರ ಹಕ್ಕುದಾರಿಕೆಯ ವಿನಿಮಯ ಮೌಲ್ಯವು ಇಲ್ಲಿ ಮುಖ್ಯ. ಕಂಬಳಿ ನೇಯುವ ಕಸುಬುದಾರರಿಗೆ ತಾವು ತಯಾರಿಸುವ ಸರಕಿನ ಮೇಲೆ ಹಕ್ಕುದಾರಿಕೆಯೇನೋ ಪ್ರಾಪ್ತವಾಗುತ್ತದೆ. ಆದರೆ ಅವರ ಹಕ್ಕುದಾರಿಕೆಯ ವಿನಿಮಯ ಮೌಲ್ಯ ತುಂಬಾ ಕೆಳಮಟ್ಟದಲ್ಲಿದೆ. ಕಂಬಳಿಯನ್ನು ಮಾರಿ ಕಸುಬುದಾರರು ಅಪಾರ ಹಣ ಸಂಪಾದಿಸುವುದು ಸಾಧ್ಯವಿಲ್ಲ. ಏಕೆಂದರೆ ಕಂಬಳಿಗಳ ಮಾರುಕಟ್ಟೆಯು ಜೀವಂತಿಕೆಯನ್ನು ಕಳೆದುಕೊಂಡಿದೆ.

### ಅಭಿವೃದ್ಧಿಯ ವ್ಯಾಖ್ಯೆ

''ಜನರು ತಮ್ಮ ನಿಯೋಗದ-ಕರ್ತೃತ್ವ ಪಾತ್ರವನ್ನು ವಿವೇಚನಾಪೂರ್ಣವಾಗಿ ನಿರ್ವಹಿಸಲು ಅಗತ್ಯವಾದ ಅವಕಾಶಗಳನ್ನು ಮತ್ತು ಅವಕಾಶಗಳಲ್ಲಿ ಆಯ್ಕೆಯ ವ್ಯಾಪ್ತಿಯನ್ನು ಸೀಮಿತಗೊಳಿಸುವ ಅಸ್ವಾತಂತ್ರ್ಯಗಳನ್ನು ತೊಡೆದುಹಾಕುವುದೇ ಅಭಿವೃದ್ಧಿ.''

ಅಭಿವೃದ್ಧಿಯನ್ನು ಸೇನ್ ಜನರನ್ನು ಧಾತುಬಿಂದುವನ್ನಾಗಿ ಮಾಡಿಕೊಂಡು ನಿರ್ವಚಿಸುತ್ತಾರೆ.

ಸ್ವಾತಂತ್ರ್ಯದ ನೆಲೆಯಲ್ಲಿ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವ ಕ್ರಮ ಇಲ್ಲಿದೆ. ಸ್ವಾತಂತ್ರ್ಯವನ್ನು ಸೇನ್ ಇಲ್ಲಿ ''ಜನರು ಏನು ಮಾಡಬಲ್ಲರು, ಜನರು ಏನಾಗಿದ್ದಾರೆ'' ಎಂಬ ನೆಲೆಯಿಂದ ನೋಡಲು ಪ್ರಯತ್ನಿಸುತ್ತಾರೆ. ಜನರು ಏನು ಮಾಡಬಲ್ಲರು, ಜನರು ಏನಾಗಿದ್ದಾರೆ ಎಂಬುದು ಜನರ ಧಾರಣ ಸಾಮರ್ಥ್ಯವನ್ನು ಅವಲಂಬಿಸಿದೆ.


ನೀತಿ

ಸರ್ಕಾರದ ನೀತಿ:
ದುರ್ಬಲರಾಗಿದ್ದರೆ.
ಹೊಡೆಯುತ್ತದೆ;
ತುಸು ಗಟ್ಟಿಯಾಗಿದ್ದರೆ,
ಒಪೆದಾಳುತ್ತದೆ !

ಸಿ.ಪಿ.ಕೆ.
ಮೈಸೂರು

ಕಂಬಳಿ ನೇಯುವ ಕಸುಬುದಾರರ ಧಾರಣಾ ಸಾಮರ್ಥ್ಯ ಸೀಮಿತವಾದದು. ಅವರು ಬಡತನದ, ಅನಕ್ಷರತೆಯ, ಆಹಾರ ಅಭದ್ರತೆಯ ಕೂಪದಲ್ಲಿ ನರಳುತ್ತಿದ್ದಾರೆ. ಅನೇಕ ಬಗೆಯ ಅಸ್ವಾತಂತ್ರ್ಯಗಳಲ್ಲಿ ಕಂಬಳಿ ನೇಯುವವರು ಸಿಲುಕಿಕೊಂಡುಬಿಟ್ಟಿದ್ದಾರೆ.

ಜನರು ಪಾರಂಪರಿಕವಾಗಿ ಕಂಬಳಿ ನೇಯುತ್ತಿದ್ದಾರೆ. ಆದರೆ ಇದರಿಂದ ಅವರ ಬದುಕು ಏನಾಗಿದೆ ? ಕಂಬಳಿ ನೇಯುವ ಕಸುಬುದಾರರು ತಾವು ಉತ್ಪಾದನೆ ಮಾಡುವ ಕಂಬಳಿಗಳನ್ನು ಮಾರಿ ಅವರು ಪಡೆಯುತ್ತಿರುವ ಉತ್ಪತ್ತಿ ತೀವ್ರ ಕಡಿಮೆ. ಕಂಬಳಿ ನೇಯುವ ಕಸುಬುದಾರರ ಹಕ್ಕುದಾರಿಕೆಯ ವಿನಿಮಯ ಮೌಲ್ಯವು ತುಂಬಾ ಕಡಿಮೆ. ಏಕೆಂದರೆ ಕಂಬಳಿಯು ಇಂದು ಮಾರುಕಟ್ಟೆಯನ್ನು ಕಳೆದು ಕೊಳ್ಳುತ್ತಿದೆ. ಅದರ ಪೈಪೋಟಿ ಸಾಮರ್ಥ್ಯವು ಕಡಿಮೆ. ಕಂಬಳಿಗೆ ಪರ್ಯಾಯವಾದ ಸರಕುಗಳು ಮಾರುಕಟ್ಟೆಗೆ ಬಂದಿವೆ.

ಈ ಕಂಬಳಿ ನೇಯುವ ಕಸುಬುದಾರರ ಹಕ್ಕು ದಾರಿಕೆಯ ವಿನಿಮಯ ಮೌಲ್ಯವನ್ನು ಉತ್ತಮಪಡಿಸುವ ದಿಶೆಯಲ್ಲಿ ಪ್ರಯತ್ನಗಳು ನಡೆಯುತ್ತಿಲ್ಲ. ಇಂತಹ ವಿನಾಶದ ಅಂಚಿಗೆ ಸಾಗುತ್ತಿರುವ ಕಸುಬನ್ನು ಕುರಿತಂತೆ ಮಲ್ಲಿಕಾರ್ಜುನಪ್ಪ ಅವರು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವುದೇ ಕುತೂಹಲಕಾರಿಯಾಗಿದೆ. ಇಂತಹ ವಿಷಯಗಳನ್ನು ಕುರಿತಂತೆ ಅಧ್ಯಯನ ಮಾಡುವುದು ಆಕರ್ಷಣೀಯವಾದ ಸಂಗತಿಯಲ್ಲ.

### ಸಂಶೋಧಕರ ಕಾಳಜಿಗಳು

ಸಮಾಜ ವಿಜ್ಞಾನದಲ್ಲಿ ಸಂಶೋಧನೆಗೆ ಸಂಬಂಧಿಸಿ ದಂತೆ ರೂಪಿಸಿಕೊಂಡಿರುವ ನಿಯಮವೆಂದರೆ ಅಧ್ಯಯನ ಕರ್ತೃ ಮತ್ತು ಅಧ್ಯಯನ ಮಾಡುತ್ತಿರುವ ವಿಷಯವಸ್ತುಗಳ ನಡುವೆ ವ್ಯಕ್ತಿನಿಷ್ಠ ಸಂಬಂಧವಿರ ಬಾರದು ಎಂಬುದಾಗಿದೆ. ಅವೆರಡರ ನಡುವೆ ಒಂದು ಬಗೆಯ 'ದೂರ'ವನ್ನು ಕಾಯ್ದುಕೊಳ್ಳಬೇಕೆಂದು ಹೇಳಲಾಗಿದೆ. ಇದನ್ನೇ ವಸ್ತುನಿಷ್ಠತೆಯೆಂದು ಹೇಳಲಾಗಿದೆ. ಸಂಶೋಧನಾ ಚಟುವಟಿಕೆಗಳಲ್ಲಿ ಸಂಶೋಧಕನಿಗೆ ತಾನು ಅಧ್ಯಯನ ಮಾಡುತ್ತಿರುವ ವಿಷಯದ ಬಗ್ಗೆ ಯಾವುದೇ ರೀತಿಯ ಮಾನಸಿಕವಾದ ಸಂಬಂಧವಿರಬಾರದು. ಆಗ ಮಾತ್ರ ಸಂಶೋಧನೆ ಯಿಂದ ಪಡೆದುಕೊಂಡ ತಥ್ಯಗಳೂ ವಿಶ್ವಾಸ್ತಕವಾಗಿ ಇರಲು ಸಾಧ್ಯ.

ಈ ಬಗೆಯ ಸಂಶೋಧನಾ ವಿಧಾನಕ್ಕೆ ಸಂಬಂಧಿಸಿದ ನಿಯಮವೊಂದನ್ನು ಮಲ್ಲಿಕಾರ್ಜುನಪ್ಪ ಅವರು ಇಲ್ಲಿ ಮೀರಲು ಪ್ರಯತ್ನಿಸಿದ್ದಾರೆ. ಇವರ ಈ ಮೀರುವ ಪ್ರಯತ್ನವನ್ನು ಈ ಕೃತಿಗೆ ಮುನ್ನುಡಿ ಬರೆದಿರುವ ಎಲ್. ಸಿ. ಜೈನ್ ಗುರುತಿಸಿದ್ದಾರೆ. ಕಂಬಳಿ ನೇಯುವ ಕಸುಬುದಾರರ ಬಗೆಗಿನ ತೀವ್ರ ಕಾಳಜಿಯಿಂದ ಹಾಗೂ ಗ್ರಾಮೀಣವಾಸಿ ಜನರ ಸಾವಯವ ಬದುಕಿನ ಬಗೆಗಿನ ಆಸ್ಥೆಯಿಂದ ಮಲ್ಲಿಕಾರ್ಜುನಪ್ಪ ಪ್ರಸ್ತುತ ವಿಷಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿ ಕೊಂಡಿದ್ದಾರೆ. ವಸ್ತುನಿಷ್ಠತೆಯೆಂಬುದು ಯಾಂತ್ರಿಕವಾಗಿದ್ದಾಗ ಅದರಿಂದ ಯಾವುದೇ ಪ್ರಯೋಜನವಿಲ್ಲ. ಅಧ್ಯಯನ ಮಾಡುತ್ತಿರುವ ವಿಷಯದ ಬಗ್ಗೆ ನಿರ್ದಿಷ್ಟವಾದ ಮತ್ತು ಖಚಿತವಾದ ನಿಲುವಿದ್ದಾಗ ಅಲ್ಲಿ ವ್ಯಕ್ತಿನಿಷ್ಠತೆಯಿಂದ ಯಾವುದೇ ತೊಂದರೆಯಿಲ್ಲ. ಸಮಾಜದಲ್ಲಿ ಯಾವುದು ಪ್ರಧಾನಧಾರೆಯಲ್ಲಿ ಮುಂಚೂಣಿಯಲ್ಲಿರುತ್ತದೋ ಅಂತಹ ಸಂಗತಿಗಳ ಬಗ್ಗೆ ಜನರು ಮುಗಿಬೀಳುವುದು ಸಾಮಾನ್ಯ. ಆದರೆ ಮಲ್ಲಿಕಾರ್ಜುನಪ್ಪ ಅವರು ಅಭಿವೃದ್ಧಿ ಪ್ರಕ್ರಿಯೆಯಿಂದ ವಂಚಿತರಾದ, ಹಕ್ಕುದಾರಿಕೆ ವಿನಿಮಯ ಮೌಲ್ಯ ಅತ್ಯಂತ ಕಡಿಮೆಯಿರುವ ಕಂಬಳಿ ನೇಯುವ ಕಸುಬುದಾರರ ಬದುಕನ್ನು ಕುರಿತಂತೆ ಅಧ್ಯಯನ ನಡೆಸಿದ್ದಾರೆ.

ಈ ಕಂಬಳಿ ನೇಯುವ ಕಸುಬಿನ ಅಭಿವೃದ್ಧಿಗೆ ಸಂಶೋಧಕರು ಅನೇಕ ಸಲಹೆ-ಸೂಚನೆ ನೀಡಿದ್ದಾರೆ. ಆದರೆ ಸಮಸ್ಯೆಯಿರುವುದು ಕಂಬಳಿ ನೇಯುವ ಕಸುಬಿನಲ್ಲಿ ಅಲ್ಲ, ಜಾಗತೀಕರಣದ ಮಹಾಪೂರದಲ್ಲಿ ಇಂತಹ ಕಸುಬುಗಳು ಉಳಿಯುವುದು ಕಷ್ಟಸಾಧ್ಯ. ಈ ಕೃತಿಯ ಮೂಲಕ ಸಮಾಜದ ಅಂಚಿನಲ್ಲಿ ಬದುಕು ದೂಡುತ್ತಿರುವವರ ಬದುಕನ್ನು ಪರಿಚಯ ಮಾಡಿಕೊಟ್ಟ ಮಲ್ಲಿಕಾರ್ಜುನಪ್ಪ ಅಭಿನಂದನೆಗೆ ಅರ್ಹರಾಗಿದ್ದಾರೆ.

**ಡಾ॥ ಟಿ. ಆರ್. ಚಂದ್ರಶೇಖರ**
ಪ್ರಾಧ್ಯಾಪಕರು, ಅಭಿವೃದ್ಧಿ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩ ೨೭೬

# ಡಾ|| ಬಿನಾಯಕ್ ಸೇನ್ ಬಂಧನ ; ನಕ್ಸಲ್ ಸಮಸ್ಯೆ; ಪ್ರಭುತ್ವದ ನಿಲುವು...



ಈತ ತಮಿಳುನಾಡಿನ ವೆಲ್ಲೂರಿನ ಪ್ರತಿಷ್ಠಿತ ಕ್ರಿಶ್ಚಿಯನ್ ಮೆಡಿಕಲ್ ಕಾಲೇಜಿನಿಂದ ಶಿಶು ಚಿಕಿತ್ಸೆಯ ವಿಷಯದಲ್ಲಿ ಬಂಗಾರ ಪದಕದ ವಿಜೇತ. ಸುಮಾರು ಮೂರು ದಶಕಗಳಿಂದ ಚತ್ತೀಸ್‌ಗಢದ ರಾಜ್‌ಹರಾ ಎಂಬ ಗ್ರಾಮವೊಂದರಲ್ಲಿ ಸ್ವಯಿಚ್ಛೆಯಿಂದ ನೆಲೆಸಿ ಆದಿವಾಸಿಗಳು, ಬಡವರು ಹಾಗೂ ಸಮಾಜದ ನಿಮ್ನ ವರ್ಗಗಳ ಹಿತದಲ್ಲಿ ವೈದ್ಯಕೀಯ ಸೇವೆಯ ಜೊತೆಗೆ ಅವರ ಮಾನವೀಯ ಹಕ್ಕುಗಳಿಗಾಗಿ ಶ್ರಮಿಸುತ್ತಿರುವ ದಿಟ್ಟ ಹೋರಾಟಗಾರ. ಅಲ್ಲದೆ, ಹಸಿವಿನ ಬಾಧೆಯಿಂದ ಉಂಟಾಗುವ ಸಾವು, ರೋಗ ರುಜಿನಗಳು, ವಿಚಾರಣಾಧೀನ ಕೈದಿಗಳ ಸ್ಥಿತಿಗತಿ, ಪೊಲೀಸರ ವಶದಲ್ಲಿ ಸಂಭವಿಸುವ ಸಂಶಯಾತ್ಮಕ ಮರಣ, ನ್ಯಾಯೇತರ ಹತ್ಯೆಗಳು, ಆಹಾರ, ಉದ್ಯೋಗ, ಆರೋಗ್ಯ ಹಾಗೂ ಶಿಕ್ಷಣದ ಹಕ್ಕುಗಳ ಕುರಿತು ಸತತ ಆಂದೋಲನದಲ್ಲಿ ನಿರತರಾಗಿರುವ ಕಾರ್ಯಕರ್ತ. ಇವಿಷ್ಟು ಡಾ|| ಬಿನಾಯಕ್ ಸೇನ್ ಅವರ ಬಯೋಡೇಟ. ಅವರು ಕಳೆದ ಒಂದು ವರ್ಷದಿಂದ ರಾಯ್‌ಪುರದ ಕಾರಾಗೃಹದಲ್ಲಿ ಕೊಳೆಯುತ್ತಿದ್ದಾರೆ.

ಮ. ಶ್ರೀ. ಮುರಳಿಕೃಷ್ಣ

ಈತ ತಮಿಳುನಾಡಿನ ವೆಲ್ಲೂರಿನ ಪ್ರತಿಷ್ಠಿತ ಕ್ರಿಶ್ಚಿಯನ್ ಮೆಡಿಕಲ್ ಕಾಲೇಜಿನಿಂದ ಶಿಶು ಚಿಕಿತ್ಸೆಯ ವಿಷಯದಲ್ಲಿ ಬಂಗಾರ ಪದಕದ ವಿಜೇತ. ಸುಮಾರು ಮೂರು ದಶಕಗಳಿಂದ ಚತ್ತೀಸ್‌ಗಢದ ರಾಜ್‌ಹರಾ ಎಂಬ ಗ್ರಾಮವೊಂದರಲ್ಲಿ ಸ್ವಯಿಚ್ಛೆಯಿಂದ ನೆಲೆಸಿ ಆದಿವಾಸಿಗಳು, ಬಡವರು ಹಾಗೂ ಸಮಾಜದ ನಿಮ್ನ ವರ್ಗಗಳ ಹಿತದಲ್ಲಿ ವೈದ್ಯಕೀಯ ಸೇವೆಯ ಜೊತೆಗೆ ಅವರ ಮಾನವೀಯ ಹಕ್ಕುಗಳಿಗಾಗಿ ಶ್ರಮಿಸುತ್ತಿರುವ ದಿಟ್ಟ ಹೋರಾಟಗಾರ. ಅಲ್ಲದೆ ಹಸಿವಿನ ಬಾಧೆಯಿಂದ ಉಂಟಾಗುವ ಸಾವು, ರೋಗ ರುಜಿನಗಳು, ವಿಚಾರಣಾಧೀನ ಕೈದಿಗಳ ಸ್ಥಿತಿಗತಿ, ಪೊಲೀಸರ ವಶದಲ್ಲಿ ಸಂಭವಿಸುವ ಸಂಶಯಾತ್ಮಕ ಮರಣ, ನ್ಯಾಯೇತರ ಹತ್ಯೆಗಳು, ಆಹಾರ, ಉದ್ಯೋಗ, ಆರೋಗ್ಯ ಹಾಗೂ ಶಿಕ್ಷಣದ ಹಕ್ಕುಗಳ ಕುರಿತು ಸತತ ಆಂದೋಲನದಲ್ಲಿ ನಿರತರಾಗಿರುವ ಕಾರ್ಯಕರ್ತ. ಇವಿಷ್ಟು ಡಾ|| ಬಿನಾಯಕ್ ಸೇನ್ ಅವರ ಬಯೋಡೇಟ. ಅವರು ಕಳೆದ ಒಂದು ವರ್ಷದಿಂದ ರಾಯ್‌ಪುರದ ಕಾರಾಗೃಹದಲ್ಲಿ ಕೊಳೆಯುತ್ತಿದ್ದಾರೆ.

ನಮ್ಮ ರಾಷ್ಟ್ರದಲ್ಲಿ ಅಸಂಖ್ಯ ರಾಜಕಾರಣಿಗಳು ಹಾಗೂ ಇತರರು ವ್ಯವಸ್ಥೆಯನ್ನು ವ್ಯವಸ್ಥಿತವಾಗಿ ಬಳಸಿಕೊಂಡು ತೀವ್ರ ಸ್ವರೂಪದ ಅಪರಾಧಗಳನ್ನು ಎಸಗುತ್ತಿದ್ದರೂ ರಾಜಾರೋಷವಾಗಿ ಮೆರೆಯುತ್ತಿದ್ದಾರೆ. ಸಂವಿಧಾನದಡಿ ಶಪಥ ಮಾಡಿ, ಅದಕ್ಕೆ ಚ್ಯುತಿ ತರುವಂಥ ಕಾರ್ಯಗಳಲ್ಲಿ ತೊಡಗಿ, ಸಾರ್ವಜನಿಕ ಜೀವನದಲ್ಲಿ ಉನ್ನತ ಸ್ಥಾನಕ್ಕೇರಿರುವ ಭೂಪರು ನಮ್ಮ ಮಧ್ಯೆ ವಿಜೃಂಭಿಸುತ್ತಿದ್ದಾರೆ. ವಸ್ತುಸ್ಥಿತಿ ಹೀಗಿರಬೇಕಾದರೆ, ದಮನಿತ ವರ್ಗಗಳ ಹಿತಾಸಕ್ತಿಗಾಗಿ ಹೋರಾಡುತ್ತಿರುವ ಡಾ||ಸೇನ್ ಅವರಿಗೆ ಜೈಲುವಾಸ! ಅವರು ನಕ್ಸಲೀಯ ಸಂಘಟನೆಗಳೊಂದಿಗೆ ಸಂಬಂಧ ಹೊಂದಿದ್ದಾರೆ, ಅವುಗಳ ಸಹಾಯದಿಂದ ರಾಷ್ಟ್ರದ ವಿರುದ್ಧ ಪಿತೂರಿ ಹಾಗೂ ಇತರ ಅಪರಾಧಗಳನ್ನು ಎಸಗಿದ್ದಾರೆ, ಎಂಬುದು ಅವರ ಮೇಲಿರುವ ಗುರುತರವಾದ ಆಪಾದನೆ. ಅವರನ್ನು ೧೯೬೭ರ ಕಾನೂನುಬಾಹಿರ ಚಟುವಟಿಕೆಗಳು ಹಾಗೂ ೨೦೦೫ರ ಚತ್ತೀಸ್‌ಗಢದ ವಿಶೇಷ ಸಾರ್ವಜನಿಕ ಭದ್ರತೆ ಕಾಯಿದೆಗಳ ಅನ್ವಯ ಬಂಧಿಸಲಾಗಿದೆ. ಇವುಗಳಡಿಯಲ್ಲಿ ಜಾಮೀನು ಸಿಗುವುದು ತೀರ ಕಷ್ಟಸಾಧ್ಯ.

ಈ ಮೊಕದ್ದಮೆಯ ಪ್ರಮುಖ ಅಂಶವೆಂದರೆ ಕೊಲ್ಕತ್ತಾ ಮೂಲದ ವ್ಯಾಪಾರಿ ಪಿಯೂಷ್ ಗುಹಾರ ತಪ್ಪೊಪ್ಪಿಗೆ. ಬಂಧಿತ ಮಾವೋವಾದಿ ನಾಯಕ ನಾರಾಯಣ ಸನ್ಯಾಲ್ ಬರೆದಿದ್ದರೆನ್ನಲಾದ ೩ ಸಹಿ ರಹಿತ ಪತ್ರಗಳನ್ನು ತಮಗೆ ನೀಡಿದ್ದು ಡಾ|| ಸೇನ್ ಎಂದು ಗುಹಾ ಹೇಳಿಕೆ ನೀಡಿದ್ದಾರೆ. ತಲಾಶ್ ಮಾಡಿದಾಗ ಗುಹಾರ ಬಳಿ ಈ ಪತ್ರಗಳು ದೊರೆತಿವೆ ಎಂದು ಪೊಲೀಸರು ಸಮರ್ಥಿಸಿಕೊಂಡಿದ್ದಾರೆ. ಈ ಅಂಶದಿಂದ ಡಾ|| ಸೇನ್ ಅವರಿಗೂ ಮಾವೋವಾದಿಗಳಿಗೂ ಸಂಬಂಧವಿರುವುದು ದೃಢೀಕೃತಗೊಂಡಿದೆ ಎಂಬುದು ಅವರ ನಿಲುವು. ೨೦೦೬ರಿಂದ ಸನ್ಯಾಲ್ ರಾಯ್‌ಪುರದ ಜೈಲಿನಲ್ಲಿ ಬಂಧಿಯಾಗಿದ್ದಾರೆ. ಎಪ್ಪತ್ತು ವರ್ಷದ ಈ ಮಾವೋವಾದಿ ನಾಯಕನಿಗೆ ಆರೋಗ್ಯ ಸರಿಯಾಗಿಲ್ಲ.

ಡಾ|| ಸೇನ್ ಒಬ್ಬ ವೈದ್ಯರಾಗಿ ಹಾಗೂ ಚತ್ತೀಸ್‌ಗಢದ ಪೀಪಲ್ಸ್ ಯೂನಿಯನ್ ಫಾರ್ ಸಿವಿಲ್ ಲಿಬರ್ಟೀಸ್ ಸಂಘಟನೆಯ ಪ್ರಧಾನ ಕಾರ್ಯದರ್ಶಿಯಾಗಿ ಸನ್ಯಾಲ್‌ರನ್ನು ೩೩ ಬಾರಿ ಭೇಟಿ ಮಾಡಿದ್ದಾರೆ. ಆದರೆ ಈ ಭೇಟಿಗಳು ಜರುಗಿರುವುದು ಜೈಲು ಆಡಳಿತ ವರ್ಗದ ಪರವಾನಗಿ ಪಡೆದ ನಂತರವೇ ಎಂಬುದು ಗಮನಾರ್ಹ ಸಂಗತಿ. ಹಾಗೆಯೇ ಅವು ನಡೆದಿರುವುದು ಜೈಲು ಅಧಿಕಾರಿಗಳ ಮೇಲುಸ್ತುವಾರಿಯಲ್ಲಿ. ಆದಾಗ್ಯೂ ಪೊಲೀಸರು ಸನ್ಯಾಲ್ ಅವರ ಅಂಚೆ ರವಾನಿಸುವ ವ್ಯಕ್ತಿಯಾಗಿದ್ದರು ಡಾ|| ಸೇನ್ ಎಂದು ಆಪಾದಿಸಿದ್ದಾರೆ. ಇದನ್ನು ಡಾ|| ಸೇನ್‌ರ ವಕೀಲರು ಸಾರಾಸಗಟಾಗಿ ಅಲ್ಲಗಳೆದಿದ್ದಾರೆ. ಏಕೆಂದರೆ, ಮ್ಯಾಜಿಸ್ಟ್ರೇಟರ

ಮುಂದೆ ಗುಹಾ ತಾನು ಯಾವ ರೀತಿಯ ತಪ್ಪೊಪ್ಪಿಗೆ ಹೇಳಿಕೆಯನ್ನೂ ನೀಡಿಲ್ಲ ಮತ್ತು ತಮ್ಮಿಂದ ಕೆಲವು ಖಾಲಿ ಪತ್ರಗಳ ಮೇಲೆ ಬಲವಂತದಿಂದ ಸಹಿ ಪಡೆದು ಕೊಳ್ಳಲಾಯಿತು ಎಂಬುದನ್ನು ಬಹಿರಂಗಗೊಳಿಸಿದ್ದಾರೆ.

೨೦೦೫ರಲ್ಲಿ ಚತ್ತೀಸ್‌ಗಢ ಸರ್ಕಾರ ನಕ್ಸಲೀಯರನ್ನು ಮಟ್ಟಹಾಕಲು ಸಾಲ್ವ ಜುಡುಂ ಎಂಬ ಸ್ವೇಚ್ಛಾಚಾರಿ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಇದರಡಿ ಆದಿವಾಸಿಗಳಿಗೆ ಶಸ್ತ್ರಾಸ್ತ್ರಗಳನ್ನು ನೀಡಲಾಯಿತು. ನಂತರ ಅವರನ್ನು ನಕ್ಸಲೀಯರ ವಿರುದ್ಧದ ಕಾರ್ಯಾಚರಣೆಗಳಲ್ಲಿ ಬಳಸಿ ಕೊಳ್ಳಲಾಯಿತು. ಭಯೋತ್ಪಾದನೆ/ಉಗ್ರವಾದವನ್ನು ಸದೆಬಡಿಯಲು ಪ್ರಭುತ್ವ ಭಯೋತ್ಪಾದನಾ ಮಾರ್ಗವನ್ನೇ ಅನುಸರಿಸಿತು. ನಕ್ಸಲ್ ಎನ್‌ಕೌಂಟರುಗಳು, ನಕ್ಸಲೀಯರಿಗೆ ಒತ್ತಾಸೆ ನೀಡುತ್ತಿದ್ದಾರೆಂದು ಗುಮಾನಿಯಿದ್ದವರ ವಿಚಾರಣೆ ಹಾಗೂ ಅವರ ನಿವಾಸಗಳ ಮೇಲೆ ದಾಳಿಗಳು, ಬಲವಂತ ಹುಡುಕಾಟಗಳು ಇವೇ ಮುಂತಾದ ಅತಿರೇಕದ ಘಟನೆಗಳು ಜರುಗುತ್ತಲೇ ಇವೆ. ಭದ್ರತಾ ಪಡೆಗಳ ಸಾವುನೋವುಗಳನ್ನು ಶಮನಿಸುವ ನಿಟ್ಟಿನಲ್ಲಿ ಆದಿವಾಸಿಗಳ ಶಸ್ತ್ರಸಜ್ಜಿತ ಗುಂಪುಗಳನ್ನು ನಕ್ಸಲೀಯರ ವಿರುದ್ಧ ಎತ್ತಿಕಟ್ಟಿದ್ದಾರೆ. ಹೀಗೆ, ಆದಿವಾಸಿಗಳ ನಡುವೆ ಯಾದವೀ ಕಲಹ ತಲೆದೋರಿದೆ.

ಈ ಕಾರ್ಯಾಚರಣೆಗಳಿಂದ ಅವರ ಜೀವಕ್ಕೆ ಸಂಚಕಾರ ಒದಗಿದೆ. ಯಾವುದೇ ಗುಂಪಿಗೆ ಸೇರದ ಆದಿವಾಸಿಗಳು, ನಕ್ಸಲೀಯರು ಸೆಕ್ಯೂರಿಟಿ ದಳಗಳು ಹಾಗೂ ಶಸ್ತ್ರಸಜ್ಜಿತ ಆದಿವಾಸಿ ಗುಂಪುಗಳಿಂದ ಹಿಂಸೆಗೆ ಆಹುತಿಯಾಗುತ್ತಿದ್ದಾರೆಂದು ಮಾನವೀಯ ಹಕ್ಕುಗಳ ಸಂಘಟನೆಗಳು ಸಾರುತ್ತ ಬಂದಿವೆ. ಡಾ|| ಸೇನರು ಈ ಆಂದೋಳನದ ಮುಂಚೂಣಿಯಲ್ಲಿದ್ದರು. ಆಂದೋಳನದ ಬಿಸಿ ವ್ಯಾಪಿಸುತ್ತಿದ್ದಂತೆ ಚತ್ತೀಸ್‌ಗಢ ಸರ್ಕಾರ ಏನಾದರೂ ಮಾಡಿ ಅದನ್ನು ಹತ್ತಿಕ್ಕಬೇಕೆಂದು ನಿರ್ಧರಿಸಿ ಅವರಿಗೂ ನಕ್ಸಲೀಯರಿಗೂ ಸಂಬಂಧವಿದೆ ಎಂದು ಪ್ರಚಾರ ಮಾಡಿತು. ಇದು ಅಧಿಕಾರ ದುರುಪಯೋಗದ ಪರಮಾವಧಿ ಎಂದೂ ಅವು ಜನತೆಯ ಗಮನ ಸೆಳೆಯುತ್ತ ಬಂದಿವೆ.

ಚತ್ತೀಸ್‌ಗಢ ಸರ್ಕಾರಕ್ಕೆ ಸೇನ್ ಅವರನ್ನು ಬಂದೀಖಾನೆಯಲ್ಲಿಡಲು ಏನೇ ಕಾರಣಗಳು ಇದ್ದಿರಬಹುದು. ಆದರೆ ನಾಗರಿಕ ಸಾಂವಿಧಾನಿಕ ಹಕ್ಕುಗಳನ್ನು ರಕ್ಷಿಸಬೇಕಾದ ಸರ್ವೋಚ್ಚ ನ್ಯಾಯಾಲಯದ ಒಂದು ಪೀಠ ಡಾ|| ಸೇನ್ ಅವರಿಗೆ ಜಾಮೀನು ನಿರಾಕರಿಸಿದ್ದು ವ್ಯಾಪಕ ಅಸಮಾಧಾನವನ್ನು ಹುಟ್ಟುಹಾಕಿತು. ಆದರೆ ಮಾರ್ಚ್ ೩೧ರಂದು ಸರ್ವೋಚ್ಚ ನ್ಯಾಯಾಲಯದ ಪ್ರಧಾನ ನ್ಯಾಯಮೂರ್ತಿ ಕೆ.ಜಿ.ಬಾಲಕೃಷ್ಣನ್ ಹಾಗೂ ಜಸ್ಟೀಸ್ ಅಫ್ತಾಬ್ ಅಲಂ ಪೀಠ ಸಾಲ್ವ ಜುಡುಂ ಕಾರ್ಯಕ್ರಮದ ಬಗೆಗೆ ಟೀಕೆ ಮಾಡಿದೆ. ತಡವಾಗಿದ್ದರೂ ಒಂದರ್ಥದಲ್ಲಿ ಇದೊಂದು ಸಕಾರಾತ್ಮಕ ಬೆಳವಣಿಗೆಯೆನ್ನಬಹುದು.

ಈ ಮಧ್ಯೆ ರಾಷ್ಟ್ರಾದ್ಯಂತ ಡಾ|| ಸೇನ್‌ರ ಬಿಡುಗಡೆಗಾಗಿ ಕೂಗು ಎದ್ದಿದೆ. ಅಂತರರಾಷ್ಟ್ರೀಯ ಮಟ್ಟದಲ್ಲೂ ಈ ಬೆಳವಣಿಗೆ ಪರಿಣಾಮ ಬೀರಿರುವುದು ವಿಷಯದ ಗಹನತೆಗೆ ಹಿಡಿದ ಕೈಗನ್ನಡಿಯಾಗಿದೆ. ಲಂಡನ್‌ನ ಭಾರತದ ರಾಯಭಾರಿ ಕಛೇರಿ ಮುಂದೆ ಬೃಹತ್ ಪ್ರತಿಭಟನೆ ಜರುಗಿದೆ. ಡಾ|| ಸೇನ್ ಬಂಧನಕ್ಕೊಳಗಾಗಿದ್ದು ಮೇ ೨೦೦೭ರಲ್ಲಿ. ಅಂದು ನಮ್ಮ ರಾಷ್ಟ್ರದ ಅನೇಕ ಕೇಂದ್ರಗಳಲ್ಲಿ ಅವರ ಬಿಡುಗಡೆಗಾಗಿ ಒತ್ತಾಯಿಸಿ ದನಿಗಳು ಮೊಳಗಿದವು. ಡಾ|| ಸೇನ್‌ರ ಮಾನವ ಹಕ್ಕುಗಳು ಹಾಗೂ ಆರೋಗ್ಯ ಕುರಿತ ಕಾಳಜಿ ಮತ್ತು ಕ್ರಿಯೆಗಳನ್ನು ಗುರುತಿಸಿ ಅವರಿಗೆ ಅಂತರರಾಷ್ಟ್ರೀಯ ಮಟ್ಟದ ಜೋನಾಥನ್ ಮ್ಯಾನ್ ಪ್ರಶಸ್ತಿಯನ್ನು ನೀಡಲಾಗಿದೆ. ಪ್ರಶಸ್ತಿ ಪ್ರದಾನ ಸಮಾರಂಭ ಮೇ ೨೯ರಂದು ಅಮೆರಿಕಾದ ವಾಷಿಂಗ್‌ಟನ್‌ನಲ್ಲಿ ಜರುಗಿತು. ಡಾ|| ಸೇನ್ ಈ ಕಾರ್ಯಕ್ರಮದಲ್ಲಿ ಭಾಗವಹಿಸಲು ಸರ್ಕಾರ ಅನುಮತಿ ನೀಡಬೇಕೆಂದು ೨೨ ಮಂದಿ ನೊಬೆಲ್ ಪ್ರಶಸ್ತಿ ಪುರಸ್ಕೃತರು ನಮ್ಮ ರಾಷ್ಟ್ರಾಧ್ಯಕ್ಷರು, ಪ್ರಧಾನಿ, ಚತ್ತೀಸ್‌ಗಢದ ರಾಜ್ಯಪಾಲರು ಹಾಗೂ ಮುಖ್ಯಮಂತ್ರಿಯವರಿಗೆ ಪತ್ರ ಬರೆದಿದ್ದರು.

ಚತ್ತೀಸ್‌ಗಢ, ಜಾರ್ಖಂಡ್ ಮತ್ತಿತರ ರಾಜ್ಯಗಳು ನೈಸರ್ಗಿಕ ಸಂಪನ್ಮೂಲಗಳಿಂದ ಸಮೃದ್ಧಿಯಾಗಿವೆ. ಅಲ್ಲಿ ಖನಿಜ ಸಂಪತ್ತು ಹೇರಳವಾಗಿದೆ. ಇಂದಿನ ಜಾಗತೀಕರಣದ ಭರಾಟೆಯ ದಿನಗಳಲ್ಲಿ ಇವು ಬಹುರಾಷ್ಟ್ರೀಯ ಹಾಗೂ ಖಾಸಗಿ ಕ್ಷೇತ್ರದ ಬೃಹತ್ ಕಂಪನಿಗಳ ಸೆಳೆತಕ್ಕೆ ಕಾರಣವಾಗಿವೆ. ಇಂತಹ ಬೃಹತ್ ಕಂಪನಿಗಳ ಕಾರ್ಯಾಚರಣೆಗಳಿಗೆ ಕೇಂದ್ರ ಸರಕಾರ ಹಾಗೂ ರಾಜ್ಯ ಸರಕಾರಗಳು ಮಣೆ ಹಾಕುತ್ತ ಬಂದಿರುವುದಕ್ಕೆ ಹಲವಾರು ನಿದರ್ಶನಗಳಿವೆ. ಸ್ಥಳೀಯ ಮಟ್ಟದಲ್ಲಿ ನಾಗರಿಕರೊಡನೆ ಯಾವ ಬಗೆಯ ಸಂವಾದವನ್ನೂ ಜರುಗಿಸದೆ ತರಾತುರಿಯಲ್ಲಿ ದೊಡ್ಡ ಯೋಜನೆಗಳಿಗೆ ಹಸಿರು ನಿಶಾನೆ ಸಿಕ್ಕಿರುವ ಅನೇಕ ಉದಾಹರಣೆಗಳಿವೆ. ಇದುವರೆಗೆ ಭಾರತದಲ್ಲಿ ಜಾರಿಯಾಗಿರುವ ಯಾವುದೇ ಬೃಹತ್ ಯೋಜನೆ ಯಿಂದ ನಿರ್ವಸತಿ ಹಾಗೂ ಇತರ ತೀವ್ರ ಸ್ವರೂಪದ ತೊಂದರೆಗಳಿಂದ ಬಾಧಿತರಾಗಿರುವುದು ಸಮಾಜದ ಕೆಳಸ್ತರದ ಮಂದಿ ಎಂಬುದು ನಿರ್ವಿವಾದ. ಚತ್ತೀಸ್ ಗಢದಲ್ಲೂ ಈ ಕಥೆಯೇ ಪುನರಾವರ್ತನೆಗೊಳ್ಳುತ್ತಿದೆ. ಆದಿವಾಸಿಗಳು ಮತ್ತು ಇತರ ತಳಸಮುದಾಯದವರು ಅರಣ್ಯಗಳ ಸಮಸ್ಯೆಗಳು, ಲೂಟಿ, ವನಗಳಿಂದ ಜನರ ಎತ್ತಂಗಡಿ ಇತ್ಯಾದಿ ಗಂಭೀರ ವಿಷಯಗಳ ಬಗೆಗೆ ಎಚ್ಚೆತ್ತುಕೊಂಡು ದನಿ ಎತ್ತುತ್ತಿದ್ದಾರೆ.

ಅರಣ್ಯಗಳ ಮೇಲೆ ಆದಿವಾಸಿಗಳಿಗೆ ಇರುವ ಹಕ್ಕುಗಳು ಸಂಘರ್ಷಕ್ಕೆ ಕೇಂದ್ರವಾಗಿರುವ ವಿಷಯ. ಸಂರಕ್ಷಣೆಯ ಹೆಸರಿನಲ್ಲಿ ಇಲ್ಲೆಲ್ಲಾ ಅರಣ್ಯಗಳಲ್ಲಿ ವಾಸಮಾಡುವವರ ಹಕ್ಕುಗಳು ಮೊಟಕುಗೊಳ್ಳುತ್ತವೆ. ಈಗ ಉದ್ಯಮಗಳಿಗೆ ಅನುಕೂಲವಾಗುವಂತೆ ಅರಣ್ಯಗಳಿಗೆ ಸಂಬಂಧಪಟ್ಟಂತೆ ಹೊಸ ಯೋಜನೆಗಳನ್ನು ರೂಪಿಸಲಾಗುತ್ತಿದೆ. ಇದು ಆದಿವಾಸಿಗಳಲ್ಲಿ ತೀವ್ರ ಅಸಮಾಧಾನವನ್ನು ಹುಟ್ಟುಹಾಕಿದೆ. ಆದಿವಾಸಿಗಳಿಗೆ ತಮ್ಮದೇ ಆದ ರೀತಿಯಲ್ಲಿ ಬಾಳಬೇಕೆಂಬ ಇರಾದೆ ಇದೆ. ಇದು ಪ್ರಭುತ್ವದ ಬೆಳವಣಿಗೆಯ ಮಾದರಿಗಳು ಹಾಗೂ ಕಲ್ಪನೆಗಳಿಗೆ ವ್ಯತಿರಿಕ್ತವಾಗಿದೆ. ನಿಜ, ಕೆಲವು ಕಾಲದಿಂದ ಚತ್ತೀಸ್‌ಗಢದಲ್ಲಿ ಮವೋವಾದಿಗಳು ಸಕ್ರಿಯವಾಗಿದ್ದಾರೆ, ಅನೇಕ ಹಿಂಸಾಕೃತ್ಯಗಳನ್ನು ಎಸಗಿದ್ದಾರೆ. ಆದರೆ, ರಾಜ್ಯಪ್ರಭುತ್ವವು ಖಂಡಿತವಾಗಿ ದೊಡ್ಡ ದೊಡ್ಡ ಬಂಡವಾಳಶಾಹಿಗಳಿಗೆ ಭೂಮಿ ದೊರಕುವಂತೆ ಎಲ್ಲಿಲ್ಲದ ತರಾತುರಿಯಲ್ಲಿರುವುದು ಖಂಡಿತವಾಗಿ ಅಷ್ಟೇ ವಾಸ್ತವ ಸಂಗತಿ. ಸರ್ಕಾರ ಸ್ಥಾಪಿಸಿರುವ ಕ್ಯಾಂಪುಗಳಲ್ಲಿ ಹಳ್ಳಿಗಳಿಂದ ಉಚ್ಚಾಟಿಸಲ್ಪಟ್ಟ ಗ್ರಾಮಸ್ಥರು ನೆಲೆ ನಿಂತಿದ್ದಾರೆ. ಪ್ರಸ್ತುತ ಅಂಗನವಾಡಿಗಳು ಹಾಗೂ ಮಧ್ಯಾಹ್ನದ ಊಟದ ಕಾರ್ಯಕ್ರಮಗಳನ್ನು ಈ ಕ್ಯಾಂಪುಗಳಿಗೆ ವರ್ಗಾಯಿಸಲಾಗಿದೆ. ಈ ಅಂಶವನ್ನು ಮಕ್ಕಳ ಹಕ್ಕುಗಳ ರಕ್ಷಣೆಯ ರಾಷ್ಟ್ರೀಯ ಆಯೋಗ ಗುರುತಿಸಿರುವುದು ಗಮನಾರ್ಹ. ಈ ಬೆಳವಣಿಗೆಯಿಂದ ಹಳ್ಳಿಗಳನ್ನು ವಾಸಮಾಡುವುದು ದುಸ್ತರವಾಗಿದೆ. ಕ್ಯಾಂಪುಗಳನ್ನು ನ್ಯಾಯಬದ್ಧ ರೆವಿನ್ಯೂ ಹಳ್ಳಿಗಳಾಗಿ ಮಾರ್ಪಾಟು ಮಾಡಿ, ಮೂಲ ಹಳ್ಳಿಗಳಲ್ಲಿ ವಾಸಮಾಡಲು ಯೋಗ್ಯ ವಾಗದಿರುವಂತೆ ಪರಿವರ್ತಿಸಿ, ಆನಂತರ ಕಂಪನಿಗಳ ಕೈಗೊಪ್ಪಿಸುವುದು ಸರ್ಕಾರದ ಹುನ್ನಾರ ಎಂದು ಇದರ ವಿರುದ್ಧ ಹೋರಾಡುತ್ತಿರುವವರ ಆರೋಪ.

ನಕ್ಸಲೀಯರು ಶಸ್ತ್ರಾಸ್ತ್ರಗಳನ್ನು ತ್ಯಜಿಸಿ, ಹಿಂಸೆಗೆ ವಿದಾಯ ಹೇಳಿದರೆ ಮಾತ್ರ ಅವರೊಡನೆ ಸಂವಾದಕ್ಕೆ ಸಿದ್ಧ ಎಂಬುದು ಚತ್ತೀಸ್‌ಗಢ ಸರ್ಕಾರದ ನಿಲುವು. ಆದರೆ ಈ ನಿಲುವು ಬೇರೆ ಬೇರೆ ಸಂದರ್ಭಗಳಲ್ಲಿ ಉಗ್ರಗಾಮಿ ಗುಂಪುಗಳ ಬಗೆಗೆ ಸರ್ಕಾರಗಳು ತೆಗೆದುಕೊಂಡಿರುವ ನಿಲುಮೆಗೆ ವಿರುದ್ಧವಾಗಿದೆ ಎಂಬುದು ವಿಶೇಷಜ್ಞರ ಅಂಬೋಣ. ನಾಗಾ ಬಂಡುಕೋರರ ವಿಷಯದಲ್ಲಿ ಕಳೆದ ಸುಮಾರು ೫೦ ವರ್ಷಗಳಿಂದ ಕೇಂದ್ರ ಸರ್ಕಾರ ಸತತವಾಗಿ ಮಾತುಕತೆಯನ್ನು ಭಾರತದಲ್ಲಷ್ಟೇ ಅಲ್ಲದೆ ವಿದೇಶದಲ್ಲೂ ನಡೆಸುತ್ತ ಬಂದಿದೆ. ಆದರೆ ನಾಗಾ ಉಗ್ರಗಾಮಿಗಳು ಇಂದಿಗೂ ಶಸ್ತ್ರಗಳನ್ನು ತ್ಯಜಿಸಿಲ್ಲ.

ನಕ್ಸಲೀಯರ ಚಳುವಳಿ ಬೆಳೆಯುತ್ತಿರುವುದು ನಮ್ಮ ಸಮಾಜದಲ್ಲಿ ತಾಂಡವವಾಡುತ್ತಿರುವ ಅಸಮಾನತೆಯ ಕಾರಣದಿಂದ. ಎಂದರೆ ಇದೊಂದು ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆ. ಇಡೀ ಸಮಸ್ಯೆಯನ್ನು ಈ ದೃಷ್ಟಿಕೋನದಿಂದ ಪರಿಗಣಿಸದೆ ಇದನ್ನು ಬರಿ ಕಾನೂನು ಹಾಗೂ ಸುವ್ಯವಸ್ಥೆಯ ವಿಷಯವೆಂದು ವಿಶ್ಲೇಷಿಸಿದರೆ, ಪರಿಸ್ಥಿತಿ ಇನ್ನಷ್ಟು ಹದಗೆಡುವುದರಲ್ಲಿ ಸಂದೇಹವಿಲ್ಲ. ನಕ್ಸಲ್‌ವಾದಕ್ಕೂ ಉಗ್ರವಾದಕ್ಕೂ ಮೂಲಭೂತವಾದ ವ್ಯತ್ಯಾಸಗಳಿವೆ. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯಗಳಿಸಿದ ದಿನದಿಂದ ಇಂದಿನವರೆಗೂ ಸರ್ಕಾರಗಳು ಪಾಲಿಸುತ್ತ ಬಂದಿರುವ ಬೆಳವಣಿಗೆಯ ಮಾದರಿಗಳ ಬಗೆಗೆ ಪುನರವಲೋಕನ ಮಾಡಬೇಕಿರುವುದು ತೀರ ಅವಶ್ಯ.

*(ಆಧಾರ: ಹಲವು ಮೂಲಗಳಿಂದ)*

ಮ. ಶ್ರೀ. ಮುರಳಿಕೃಷ್ಣ
ನಂ. ೩೮, ೩ನೇ ಕ್ರಾಸ್, ರಾಜ್ ಗಾರ್ಡ್‌ನಿಯಾ ಲೇಔಟ್, ತುರಹಳ್ಳಿ,
ಸುಬ್ರಹ್ಮಣ್ಯಪುರ ಅಂಚೆ, ಉತ್ತರಹಳ್ಳಿ, ಬೆಂಗಳೂರು-೫೬೦ ೦೬೧

ತ್ರಿಳಿವು

# ಜನಸಾಮಾನ್ಯರ ಕವಿ ಸರ್ವಜ್ಞ

ಉತ್ತರ ಕರ್ನಾಟಕದ ಹೆಬ್ಬಾಗಿಲಿನಂತಿರುವ ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲೂಕಿನಲ್ಲಿ ಎರಡು ಭಾರತೀಯ ಮಟ್ಟದ ಸಂಗತಿಗಳಿವೆ. ವಿಶೇಷ ಎಂದರೆ ಆ ಎರಡೂ ಸಂಗತಿಗಳು ಸಾಹಿತ್ಯ ಹಾಗೂ ಸಂಸ್ಕೃತಿಗೆ ಸಂಬಂಧಿಸಿದವುಗಳು. ಒಂದು: ಮೌಖಿಕ, ಲಿಖಿತ, ಜನಪದ ಸಾಹಿತ್ಯದಲ್ಲಿರುವ 'ಕೆರೆಗೆ ಹಾರ'ದ ಮದಗದ ಕೆಂಚಮ್ಮನ ಕಥೆ. ಜನಪದ ಕಥೆ, ಕಾವ್ಯ ಹಾಗೂ ಸಣ್ಣಾಟಗಳಲ್ಲಿ ಕೆಂಚಮ್ಮನ ಕಥೆ ಇಂದು ಜನಜನಿತವಾಗಿದೆ. ಎರಡು: ಶಿಷ್ಟ, ಲಿಖಿತ ಸಾಹಿತ್ಯದಲ್ಲಿ ತ್ರಿಪದಿಗಳ ರಚನೆ ಮೂಲಕ ತ್ರಿಪದಿಗಳ ಸಾರ್ವಭೌಮ ಎನಿಸಿದ ಸುಮಾರು ೧೬ನೇ ಶತಮಾನದ ಸರ್ವಜ್ಞ, ಈತ ಇಂದು ದಕ್ಷಿಣ ಭಾರತದ ಶ್ರೇಷ್ಠ ಕವಿಗಳಲ್ಲಿ ಒಬ್ಬನಾಗಿದ್ದಾನೆ.

ಕ್ರಿ.ಶ. ೧ನೇ ಶತಮಾನದ ತಮಿಳಿನ ತಿರುವಳ್ಳುವರ್ ಕೆಳವರ್ಗದ ನೇಕಾರರಲ್ಲಿ ಜನಿಸಿ ದ್ವಿಪದಿಗಳ 'ತಿರುಕ್ಕುರಳ್' ಕೃತಿ ರಚಿಸಿದವನು. ಕ್ರಿ.ಶ.೧೭ನೇ ಶತಮಾನದ ತೆಲುಗಿನ ವೇಮನ ಕಾಪುರೆಡ್ಡಿ ಜನಾಂಗದವರಲ್ಲಿ ಜನಿಸಿ ಚೌಪದಿ (ಆಟಲವೇದಿ)ಗಳನ್ನು ಬರೆದವನು. ಹಾಗೆಯೇ ನಮ್ಮ ಸರ್ವಜ್ಞ ಕುಂಬಾರ ಜನಾಂಗದಲ್ಲಿ ಜನಿಸಿ ಸಾವಿರಾರು ತ್ರಿಪದಿಗಳನ್ನು ಬರೆದು ಕನ್ನಡಿಗರ ತಿರುವಳ್ಳುವರ್, ಕನ್ನಡಿಗರ ವೇಮನ ಎನಿಸಿಕೊಂಡಿದ್ದಾನೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಧ್ಯಕಾಲೀನ ಅಥವಾ ನಡುಗನ್ನಡ ಕಾವ್ಯಕ್ಕೆ ವಿಶೇಷ ಸ್ಥಾನಮಾನವಿದೆ. ಪಂಪ, ಪೊನ್ನ, ರನ್ನ ಮೊದಲಾದ ಮಹಾ ಕವಿಗಳಿದ್ದ ಪ್ರಾಚೀನ ಕನ್ನಡ ಕಾವ್ಯದ ೧೦ ಮತ್ತು ೧೧ನೇ ಶತಮಾನಗಳು ಪಂಡಿತಮಾನ್ಯ ಸಂಸ್ಕೃತ ಭೂಯಿಷ್ಠವಾಗಿ ಕಾವ್ಯ ರಚನೆಯಾದ ಕಾಲವಾಗಿದೆ. ವೀರರಸ ಮುಖ್ಯವಾಗಿದ್ದ ಅವರ ಕಾವ್ಯಗಳು ಜನಸಾಮಾನ್ಯರಿಂದ ದೂರವೇ ಉಳಿದು ರಾಜರ ಅರಮನೆಗಳಿಂದ ಬೀದಿಗೆ ಬರಲೇ ಇಲ್ಲ. ಪ್ರತಿಯೊಬ್ಬ ಕವಿಯೂ ಒಂದಲ್ಲ ಒಂದು ರಾಜಮನೆತನದ ಆಶ್ರಯ ಪಡೆದು 'ಜೋಳದ ಪಾಳಿ'ಯ ಹಂಗಿನಲ್ಲಿದ್ದವರೇ. ೧೨ನೇ ಶತಮಾನದಿಂದ ೧೯ನೇ ಶತಮಾನದವರೆಗಿನ ಕನ್ನಡ ಕಾವ್ಯ ವಿಶೇಷವಾಗಿ ರಾಜರ ಅರಮನೆಗಳಿಂದ ಬೀದಿಗೆ ಬಂತು. ಭಕ್ತಿ ಚಳುವಳಿ ಮುಖ್ಯವಾಗಿದ್ದ ಈ ಕಾಲಘಟ್ಟದಲ್ಲಿ ಪ್ರತಿಯೊಬ್ಬ ಕವಿಗೂ ತನ್ನ ಧರ್ಮ ಹಾಗೂ ಸಾಮಾಜಿಕ ಕಳಕಳಿಗಳು ಮುಖ್ಯವಾಗಿದ್ದವು. ತಮ್ಮ ಆರಾಧ್ಯ ದೈವದೊಡನೆ ಸಂಭಾಷಿಸಿದಂತೆಯೇ ತಾವಿದ್ದ ಸಮಾಜದ ಮಧ್ಯೆ ಜನರ ಜೊತೆಗೂ ಸಂಭಾಷಿಸಬೇಕಾದ ಅನಿವಾರ್ಯತೆಯಿದ್ದಿತು. ಹಾಗಾಗಿ ಅವರ ಕಾವ್ಯದ ಭಾಷೆ ಸರಳವಾಗಿರಲೇಬೇಕಾಯಿತು. ಹೀಗೆ ಮಾರ್ಗಕಾವ್ಯದಿಂದ ದೇಸೀಯತೆಯೆಡೆಗೆ ಹೊರಳಿದ ಸಂಕ್ರಮಣ ಸ್ಥಿತಿ ೧೨ನೇ ಶತಮಾನದ್ದು. ದೇಸೀಯ ಕಾವ್ಯದ ಮುಖ್ಯ ಲಕ್ಷಣ ಹಾಡುವ ಜನಪದ ಪರಂಪರೆಗೆ ತುಂಬಾ ಹತ್ತಿರವಾದ್ದು. ಹಾಗಾಗಿ ವಚನಕಾರರಿಂದ ಹಿಡಿದು ಹರಿಹರ, ಕುಮಾರವ್ಯಾಸ, ಚಾಮರಸ, ದಾಸರು, ಸರ್ವಜ್ಞ, ಲಕ್ಷ್ಮೀಶ ಮೊದಲಾದವರೆಲ್ಲ ಬರೆದ ಕಾವ್ಯ ಹಾಡುಗಬ್ಬವಾಯಿತು. ಕಲಿತವರಂತೆ ಕಲಿಯದವರಿಗೆ ಕಾಮಧೇನುವಾಯಿತು. ಕಾವ್ಯ ಅನುಭವದ ಎಲ್ಲೆ ದಾಟಿ ಅನುಭಾವದ ಹಾದಿ ಹಿಡಿದು ಕವಿಗಳು ಅನುಭಾವಿಗಳು, ಸಂತರು, ದಾರ್ಶನಿಕರ ಪಟ್ಟಕ್ಕೇರಿದರು. ಅನುಭಾವಿಗಳು, ಸಿದ್ಧರಾದವರೆಲ್ಲ ಹೆಚ್ಚಾಗಿ ಬದುಕುವುದು ಜನರ ಮಧ್ಯೆ. ಹೀಗೆ ಸಮುದಾಯಗಳ ಮಧ್ಯೆ ಬದುಕಿ-ಬರೆದ ವಚನಕಾರರು, ಹರಿಹರ, ಕುಮಾರವ್ಯಾಸ, ಲಕ್ಷ್ಮೀಶ, ದಾಸರ ಪರಂಪರೆಗೆ ಸೇರಿದವನು ಸರ್ವಜ್ಞ.

ಸಂಚಾರಿ ಕವಿಯಾದ ಸರ್ವಜ್ಞ ಕನ್ನಡ ನೆಲದ ಸಮುದಾಯದ ಕವಿಯಾಗಿದ್ದಾನೆ. ಅವನ ತ್ರಿಪದಿಗಳು ಜನಸಮುದಾಯದ ದನಿಯಾಗಿವೆ. ವಚನಕಾರರು ಹಾಗೂ ಕೀರ್ತನಕಾರರ ಧಾರ್ಮಿಕ ವಿಶಾಲಭಾವನೆ ಹಾಗೂ ಸಾಮಾಜಿಕ ಕಳಕಳಿಯನ್ನು ಈತ ಹೊಂದಿದ್ದರೂ ಅವರಿಗಿಂತ ಇವನೇ ಜನಪ್ರಿಯತೆಯಲ್ಲಿ ಎತ್ತರದಲ್ಲಿದ್ದಾನೆ. ಅವರದು ಸಮೂಹ ಪ್ರಯತ್ನವಾದರೆ ಇವನದು ಏಕಾಂಗಿಯಾದ ಒಂಟಿಸಲಗದ ಪ್ರಯತ್ನ. ಅವರಂತೆ ಈತ ಕೂಡ ತನ್ನ ಕಾಲದ ಸಾತ್ವಿಕ ಶಕ್ತಿಯಾಗಿ ನಮಗೆ ಕಾಣುತ್ತಾನೆ. ಜಂಗಮ ಪ್ರವೃತ್ತಿಯವನಾದ ಇವನಿಗೆ ಯಾರ ಹಂಗೂ ಇರಲಿಲ್ಲ. 'ಸ್ವಾತಂತ್ರ್ಯವೇ ಜಗದಿ ಲೇಸು' ಎಂದು ಹೇಳುತ್ತಾ ತಾನು ಕಂಡದ್ದನ್ನು ಬಿಚ್ಚಿ ಹೇಳಿದ. ಹಾಗಾಗಿ ಅವನು ಹೇಳಿದ್ದು ಕಾವ್ಯವಾಗುವುದರ ಜೊತೆಗೆ ಸಮಾಜವನ್ನು ಎಚ್ಚರಗೊಳಿಸುವ ಕರೆಗಂಟೆಯೂ ಆಯಿತು. ಈ ದೃಷ್ಟಿಯಿಂದ ಸರ್ವಜ್ಞನದು ಕೇವಲ 'ಕಲೆಗಾಗಿ ಕಲೆ' ಎಂಬ ದೃಷ್ಟಿಯಲ್ಲ; 'ಕಲೆ' ಅವನಿಗೆ ಸತ್ಯಾನ್ವೇಷಣೆಯ, ಸಮಾಜವನ್ನು ತಿದ್ದುವ ಒಂದು ಅಸ್ತ್ರವಾಗಿದೆ, ಸಾಧನವಾಗಿದೆ. ಹಾಗಾಗಿ ಕಲೆಗಿಂತ ದೊಡ್ಡದಾದ ಬದುಕನ್ನು ಕಲಾತ್ಮಕಗೊಳಿಸುತ್ತಾ ಹೋದ ಅವನು ಆಶು ಕವಿಯೇ ಆಗಿದ್ದಾನೆ. ವೈಯಕ್ತಿಕ ಹಿತಾಸಕ್ತಿಗಿಂತ ಸಾಮಾಜಿಕ ಹಿತಾಸಕ್ತಿ ಅವನಿಗೆ ಮುಖ್ಯವಾಗಿತ್ತು. ಜನಸಾಮಾನ್ಯರ ಬದುಕು ಹಸನಾಗುವುದು ಅವನ ಮುಖ್ಯ ಆಶಯವಾಗಿತ್ತು. ಈ ಕಾರಣದಿಂದ ವಚನಗಳ ರಚನೆ ಮತ್ತು ವಿಚಾರದ ಪ್ರಚಾರ ಆ ಮೂಲಕ ಮಾನವನ ವ್ಯಕ್ತಿತ್ವದ ವಿಕಾಸ ಅವನ ಜೀವನದ ಧ್ಯೇಯವಾಯಿತು. ಕಂಡದ್ದನ್ನು ನಾಜೂಕುಗೊಳಿಸದೇ ಇದ್ದಹಾಗೆ ಹೇಳುವ ಧೈರ್ಯ, ಮನಃಸ್ಥೈರ್ಯವನ್ನು ನಾವು ಅವನಲ್ಲಿ ಕಾಣುತ್ತೇವೆ.

ಸರ್ವಜ್ಞ 'ನೀತಿಬೋಧಕ' ಪರಂಪರೆಯಲ್ಲಿ ಮುಂಚೂಣಿಯಲ್ಲಿ ನಿಲ್ಲುತ್ತಾನೆ. ತಿರುವಳ್ಳುವರ್, ವೇಮನ, ಸಂಸ್ಕೃತದ ಭರ್ತೃಹರಿ ಇವರೆಲ್ಲ ನೀತಿಯನ್ನು ತಮ್ಮ ಕಾವ್ಯದಲ್ಲಿ ಪ್ರಧಾನವಾಗಿ ಕಾಣಿಸಿದ್ದಾರೆ. ಆದರೆ ಅದು ಅಷ್ಟಕ್ಕೆ ನಿಲ್ಲದೆ ತತ್ವಜ್ಞಾನವಾಗಿ, ಅನುಭವಾಮೃತವಾಗಿ ಮುಂದುವರೆದು ಸಮಕಾಲೀನ ಪ್ರಾಪಂಚಿಕ ಚಿತ್ರಗಳಾಗಿ ಮೂಡುವಂತೆ ಮಾಡಿದ್ದಾರೆ. ಹಾಗಾಗಿಯೇ ಸರ್ವಜ್ಞನ ತ್ರಿಪದಿಗಳಲ್ಲಿನ 'ಪ್ರಾದೇಶಿಕ' ಎನ್ನಬಹುದಾದ ಹಲವು ಪದಗಳನ್ನು ತೆಗೆದರೆ ಜಗತ್ತಿನ ಯಾವುದೇ ಸಮುದಾಯಕ್ಕೆ ಅವನ್ನು ಅನ್ವಯಿಸಿಕೊಳ್ಳಬಹುದು. ಈ ಕಾರಣದಿಂದಾಗಿಯೇ ಆತ ಕೇವಲ ತ್ರಿಪದಿ ಕವಿಯಲ್ಲ; ಕನ್ನಡದ ಕವಿಯಲ್ಲ, ವಿಶ್ವಮಾನ್ಯ ಕವಿಯಾಗುತ್ತಾನೆ.

ಅವನ ತ್ರಿಪದಿಗಳಲ್ಲಿ ಏನಿಲ್ಲ? ಸಾಮಾಜಿಕ, ಧಾರ್ಮಿಕ, ಆರ್ಥಿಕ, ಆಡಳಿತ, ರಾಜನೀತಿ, ಕೌಟುಂಬಿಕ, ಕೃಷಿ, ವಿದ್ಯೆ, ಉಡುಪು, ಆಹಾರ, ಸಂಗೀತ, ಸ್ತ್ರೀಯರ ಗುಣ, ದಾಂಪತ್ಯ, ಜ್ಯೋತಿಷ್ಯ, ಅಧ್ಯಾತ್ಮ, ಜಾತಿ, ಒಗಟು... ಒಂದೇ ಎರಡೇ, ಅವನ ತ್ರಿಪದಿಗಳೆಲ್ಲ ಒಂದು ಪುಟ್ಟ ವಿಶ್ವಕೋಶವಾಗಿವೆ. ವಸ್ತು, ವಿಷಯ ಹಾಗೂ ಅಂತಃಸತ್ವದಲ್ಲಿ ಅವನ ವಚನಗಳು ಶ್ರೇಷ್ಠವಾಗಿದ್ದು ಅವು ಮಾನವನಿಗೆ ಮುಖ್ಯವಾಗಿ ವ್ಯವಹಾರಜ್ಞಾನ ಮತ್ತು ವಿವೇಕಗಳನ್ನು ತಿಳಿಸುವ ದಾರಿದೀಪಗಳಾಗಿವೆ. ಕಂಡದ್ದಕ್ಕೆಲ್ಲಾ ಸ್ಪಂದಿಸಿದ ಆತ ಒಂದು ನಿರ್ದಿಷ್ಟ ಸಿದ್ಧಾಂತ ನೀತಿ ಸಂಹಿತೆಯನ್ನೇನೂ ಬೋಧಿಸಲಿಲ್ಲ. ಸಮಾಜಕ್ಕಂಟಿದ ರೋಗಗಳನ್ನು ಸರಿಪಡಿಸುವ ಸಾಮಾಜಿಕ ವೈದ್ಯನೆನಿಸಿಕೊಂಡ. ಮಹಾಕಾವ್ಯ ಬರೆಯದ ಈತ ಮಹಾಜೀವನ ದರ್ಶನ ಮಾಡಿಸಿ ದಾರ್ಶನಿಕನೆನಿಸಿದ.

*ನಿತ್ಯ ನೇಮಗಳೇಕೆ ? ಮತ್ತೆ ಪೂಜೆಗಳೇಕೆ ?*
*ನೆತ್ತಿ ಬೋಳೇಕೆ ? ಜಡೆಯೇಕೆ ?*
*ವದನದಲಿ ಸತ್ಯವುಳ್ಳರಿಗೆ ಸರ್ವಜ್ಞ*

*ನಿದ್ದೆಗಳೂ ಬಾರವವು। ಬುದ್ಧಿಗಳು ತಿಳಿಯವವು।*
*ಮುದ್ದಿನಾ ಮಾತು ಸೊಗಸದವು ಬೋನದಾ।*
*ಮುದ್ದೆ ತಪ್ಪಿದರೆ ಸರ್ವಜ್ಞ*

*ಸತ್ತುದನು ತಿಂಬಾತ ಎತ್ತಣಾ ಹೊಲೆಯನವ।*
*ಒತ್ತಿ ಜೀವದಲಿ ಕೊರಳರಿದು ತಿಂಬಾತ।*
*ಉತ್ತಮರ ಹೊಲೆಯ ಸರ್ವಜ್ಞ*

ಇಲ್ಲಿ ಮೊದಲ ವಚನ 'ಸತ್ಯ' ಎಂಬ ಮೌಲ್ಯದ ಬಗ್ಗೆ, ಎರಡನೇ ವಚನ ಹಸಿವನ್ನು ನೀಗಿಸುವ 'ಅನ್ನ'ದ ಬಗ್ಗೆ ಹಾಗೂ ಮೂರನೇ ವಚನ 'ಹೊಲೆಯ' ಜಾತಿ ವರ್ಣ ವ್ಯವಸ್ಥೆಯಿಂದಾದವನಲ್ಲ, 'ಸ್ವಭಾವ'ದಿಂದಾದ ಹೊಲೆಯ ಎಂಬುದನ್ನು ಎಷ್ಟು ಸರಳವಾಗಿ ತೋರುತ್ತವೆ! ಸರ್ವಜ್ಞ ಜನಪ್ರಿಯನಾದುದರ ಗುಟ್ಟು ಹೀಗೆ ಸರಳವಾಗಿ, ನೇರವಾಗಿ ಹಾಗೂ ಹಾಡುಗಬ್ಬದ ತ್ರಿಪದಿಯಲ್ಲಿ ಬರೆದಿದ್ದರಿಂದಲೇ ಎಂಬುದು ನಮಗೆ ತಿಳಿಯುತ್ತದೆ. ವಿಶೇಷತಃ ಜಂಗಮ ಕವಿಯಾದ ಈತ ಕಂಡದ್ದಕ್ಕೆ ತಕ್ಷಣವೇ ಕಾವ್ಯದ ರೂಪ ನೀಡಿ ಹಾಡುತ್ತಾ ಹೋಗುತ್ತಿದ್ದುದರಿಂದಲೇ ಅವುಗಳು ಅನಕ್ಷರಸ್ಥರಾದರೂ ಜನಪದರ ಬಾಯಲ್ಲಿ ಇರುತ್ತಿದ್ದವು. ಹಾಗಾಗಿಯೇ ಅವು ಪಾಮರರಿಂದ ಪಂಡಿತರವರೆಗೂ ಜನಮನ್ನಣೆ ಗಳಿಸಿದವು. ಸರ್ವಜ್ಞ ಜನಪದರ ಸಾಮಾನ್ಯರ ಕವಿಯಾದ. ಆ ಮೂಲಕ ಲೋಕಮಾನ್ಯನಾದ.

(ಮಾರ್ಚ್ ೧೪-೧೫, ೨೦೦೮ರಂದು ಹಿರೇಕೆರೂರಿನಲ್ಲಿ ನಡೆದ ತಾಲ್ಲೂಕಿನ ಮೊದಲ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ನಡೆದ ಮೊದಲ 'ತಾಲ್ಲೂಕು ದರ್ಶನ' ಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧ)

**ಡಾ|| ಬಿ. ಜಿ. ಚನ್ನೇಶ್ ಹೊನ್ನಾಳಿ**
ಶ್ರೀ ವೀರಭದ್ರೇಶ್ವರ ನಿಲಯ, ಚಿಕ್ಕೆರೂರ್ ರಸ್ತೆ, ಹಿರೇಕೆರೂರ್,
ಹಾವೇರಿ ಜಿಲ್ಲೆ - ೫೮೧ ೧೧೧





# ಮಾಧುರಿ ರಾವ್ ಅವರ ಕಲಾಕೃತಿಗಳು



ಕರ್ನಾಟಕ ಚಿತ್ರಕಲಾ ಪರಿಷತ್ತಿನಿಂದ ಚಿತ್ರಕಲೆಯಲ್ಲಿ ಪದವಿ ಪಡೆದಿರುವ ಮಾಧುರಿ ರಾವ್ ತಮ್ಮ ಅಧ್ಯಯನ ಮತ್ತು ಪ್ರಯೋಗಗಗಳನ್ನು ಇನ್ನೂ ಮುಂದುವರಿಸುತ್ತಿದ್ದಾರೆ. ಚಿತ್ರಕಲೆಯ ಇತಿಹಾಸ ಮತ್ತು ವೈವಿಧ್ಯದ ಬಗ್ಗೆ ವಿಶೇಷ ಆಸಕ್ತಿ ಇರುವ ಈ ಕಲಾವಿದೆಗೆ ನಾಟಕ, ಕಾವ್ಯ, ಚಲನಚಿತ್ರ ಮುಂತಾದುವು ಸಹ ಒಲವಿನ ವಿಷಯವಾಗಿವೆ.





Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /September 2008 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.